# ಬೀದರ ಕನ್ನಡ
# ಸಾಮಾಜಿಕ ಹಾಗೂ ಪ್ರಾದೇಶಿಕ ಪ್ರಭೇದಗಳು

(ಒಂದು ಭಾಷಾಶಾಸ್ತ್ರೀಯ ಅಧ್ಯಯನ)

bi:dara Kannada
Sa:ma:jika ha:gu: pra:de:sika Prabhe:dagaḷu
(A Linguistic Study)

ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಪಿಎಚ್.ಡಿ. ಮಹಾಪ್ರಬಂಧ

ಸಂಶೋಧಕ
ಶ್ರೀನಿವಾಸ ಬೇಂದ್ರೆ

ಮಾರ್ಗದರ್ಶಕರು
ಡಾ. ಕೆ.ವಿ. ನಾರಾಯಣ
ಪ್ರಾಧ್ಯಾಪಕರು



ಕನ್ನಡ ಭಾಷಾಭಿವೃದ್ಧಿ ವಿಭಾಗ
ಕೇಶಿರಾಜ ಕನ್ನಡ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ೫೮೩ ೨೭೬

೨೦೦೩

# ಬೀದರ ಕನ್ನಡ
# ಸಾಮಾಜಿಕ ಹಾಗೂ ಪ್ರಾದೇಶಿಕ ಪ್ರಭೇದಗಳು

(ಒಂದು ಭಾಷಾಶಾಸ್ತ್ರೀಯ ಅಧ್ಯಯನ)

bi:dara Kannada
Sa:ma:jika ha:gu: pra:de:sika Prabhe:dagaḷu
(A Linguistic Study)

ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಪಿಎಚ್.ಡಿ. ಮಹಾಪ್ರಬಂಧ

ಸಂಶೋಧಕ
ಶ್ರೀನಿವಾಸ ಬೇಂದ್ರೆ

ಮಾರ್ಗದರ್ಶಕರು
ಡಾ. ಕೆ.ವಿ. ನಾರಾಯಣ
ಪ್ರಾಧ್ಯಾಪಕರು



ಕನ್ನಡ ಭಾಷಾಭಿವೃದ್ಧಿ ವಿಭಾಗ
ಕೇಶಿರಾಜ ಕಟ್ಟಡ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೨



# ಅರ್ಪಣೆ

ಪಿಎಚ್.ಡಿ.ನೊಂದಣಿ ಮಾಡಿಸಿದ,

ನನ್ನಾತ್ಮಗೋಚರ ಅಂತರಂಗದಕ್ಷಿಗೆ ಭವ್ಯದೃಶ್ಯದಿಂ

ಆಶೀರ್ವದಿಸುವ, ನನ್ನ ತಂದೆ

ಸ್ವ-ಗಣಪತರಾವ್ ಬೇಂದ್ರೆ

ಹಾಗೂ

ನವ ಮಾಸದ ಹೊರೆ ಹೊತ್ತು,

ತೊಡೆಯ ತೊಟ್ಟಿಲಲಿ ಲಾಲಿ ಹಾಡಿ,

ತನ್ನಾತ್ಮವನೇ ನನಗೆ ಸೌಂದರ್ಯ ಸುಧೆಯಲ್ಲಿ ಕರಗಿಸಿದ

ನನ್ನ ತಾಯಿ,

ಗಂ.ಭಾ. ಕಮಲಾಬಾಯಿ ಬೇಂದ್ರೆ

ಇವರಿಗೆ

ಆತ್ಮಗೌರವ ಪುರಸ್ಸರವಾಗಿ

ಅರ್ಪಿಸುವೆಂ

ನಿಮ್ಮ ಹಿರಿಯ ಮಗ

ಶ್ರೀನಿವಾಸ ಬೇಂದ್ರೆ

# ಪ್ರಮಾಣ ಪತ್ರ

ಬೀದರ ಕನ್ನಡ ಸಾಮಾಜಿಕ ಹಾಗೂ ಪ್ರಾದೇಶಿಕ ಪ್ರಭೇದಗಳು (ಒಂದು ಭಾಷಾಶಾಸ್ತ್ರೀಯ ಅಧ್ಯಯನ) ಎಂಬ ಮಹಾಪ್ರಬಂಧವನ್ನು ಪಿಎಚ್.ಡಿ.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಲು ಡಾ.ಕೆ.ವಿ.ನಾರಾಯಣ ಪ್ರಾಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಹಿಂದೆ ಯಾವುದೇ ಪದವಿಗಾಗಲಿ ಅಥವಾ ಇನ್ನಾವುದೊ ಉದ್ದೇಶಕ್ಕಾಗಲಿ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಶ್ರೀನಿವಾಸ ಬೇಂದ್ರೆ
ಸಂಶೋಧಕ
ನಿಡೆಬಾನ ಭಾಲ್ಕಿ ತಾಲೂಕು
ಬೀದರ ಜಿಲ್ಲೆ

ದಿನಾಂಕ : ೧೧-೧೨-೨೦೦೩
ಸ್ಥಳ : ನಿಡೆಬಾನ

ಸ್ವೀಕರಿಸಿದೆ.
ಅಧ್ಯಯನಾಂಗದ ಪರಿಶೀಲನೆಗೆ
ಮುಂದಿನ ಸೂಕ್ತ ಕ್ರಮಕ್ಕಾಗಿ

ಮುಖ್ಯಸ್ಥರು
ಕನ್ನಡ ಭಾಷಾಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ ಹಂಪಿ,
ವಿದ್ಯಾರಣ್ಯ - [illegible]

# ಮಾರ್ಗದರ್ಶಕರ ದೃಢೀಕರಣ ಪತ್ರ

ಶ್ರೀ ಶ್ರೀನಿವಾಸಬೇಂದ್ರೆ ಇವರು ಬೀದರ ಕನ್ನಡ ಸಾಮಾಜಿಕ ಹಾಗೂ ಪ್ರಾದೇಶಿಕ ಪ್ರಭೇದಗಳು (ಒಂದು ಭಾಷಾಶಾಸ್ತ್ರೀಯ ಅಧ್ಯಯನ) ಎಂಬ ಶೀರ್ಷಿಕೆಯ ಪ್ರೌಢಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪಿಎಚ್.ಡಿ.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಕನ್ನಡ ಭಾಷಾಭಿವೃದ್ಧಿ ವಿಭಾಗಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : ೩-೧೧-೦೨
ಸ್ಥಳ : ವಿದ್ಯಾರಣ್ಯ

ಡಾ. ಕೆ.ವಿ. ನಾರಾಯಣ
ಪ್ರಾಧ್ಯಾಪಕರು ಮತ್ತು ಮಾರ್ಗದರ್ಶಕರು
ಕನ್ನಡ ಭಾಷಾಭಿವೃದ್ಧಿ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಕೃತಜ್ಞತೆಗಳು

ತಮ್ಮ ಮಾರ್ಗದರ್ಶನ ಪಡೆದು
ಧನ್ಯನಾದೆ
ನಿಮ್ಮ ಸಲಹೆ, ಸೂಚನೆ.
ಧನಸಹಾಯದ ಅಜರಾಮರ
ಓ ಶ್ರೀ ಗುರವೆ
ನಾನು ನಿಮ್ಮ ಋಣಿಯಾಗಿದ್ದೇನೆ.

ಕನ್ನಡ ವಿಶ್ವವಿದ್ಯಾಲಯದಲ್ಲಿ
ನನಗೆ ಸಂಶೋಧನೆ ಕೈಗೊಳ್ಳಲು,
ಇಂಥ ಯೋಜಿತ ಕ್ರಮದಲ್ಲಿ
ಅನುಕ್ರಮಗೊಳ್ಳಲು,
ಕಾರಣೀ ಭೂತರಾದ
ನನ್ನಾತ್ಮೀಯ ಶ್ರೀ ಗುರುಜೀ
ಪ್ರಾಧ್ಯಾಪಕರಾದ
ಡಾ. ಕೆ.ವಿ. ನಾರಾಯಣ ಅವರಿಗೆ
ನನ್ನ ಅಭಿನಂದನೆಗಳು.
ಕನ್ನಡ ಭಾಷಾಭಿವೃದ್ಧಿಯ ಪ್ರವಾಚಕರು, ಅಧ್ಯಾಪಕರು
ಕನ್ನಡ ವಿಶ್ವವಿದ್ಯಾಲಯ, ಹಂಪಿ ಅವರಿಗೂ
ಎಂ.ಎ.,ಪಿಎಚ್.ಡಿ.ಸಂಶೋಧನಾ ಮಿತ್ರರಿಗೂ

ಅಧ್ಯಯನಕ್ಕೆ ಸಹಕಾರ ನೀಡಿದ
ನಮ್ಮ ಶಾಂತಿವರ್ಧಕ ಶಿಕ್ಷಣ ಸಂಸ್ಥೆಯ ಅಧ್ಯಕ್ಷರು
ಶ್ರೀ ಈಶ್ವರ ಖಂಡ್ರೆಯವರಿಗೂ
ಚನ್ನಬಸವೇಶ್ವರ ಮಹಾವಿದ್ಯಾಲಯದ
ಪ್ರಾಚಾರ್ಯರಾವ ಪ್ರೊ.ಜಿ.ಆರ್.ವಾಲಿ
ಅವರಿಗೂ ನನ್ನ ಕೃತಜ್ಞತೆಗಳು.

ನನ್ನ ಬರಹಗಳಿಗೆ ಸೂಕ್ತ ಪ್ರೇರಣಾ ಶಕ್ತಿ,
ಬೀದರ ಜಿಲ್ಲೆಯ ಶ್ರೇಷ್ಠ ವಿದ್ವಾಂಸರು
ಡಾ.ವೈಜನಾಥ ಭಂಡೆಯವರಿಗೂ
ಜಿಲ್ಲೆಯ ಜಾನಪದ ವಿದ್ವಾಂಸರಾದ
ಡಾ. ಸೋಮನಾಥ ನುಚ್ಚಾ ಸಾಹೇಬರಿಗೂ
ನಾನು ಋಣಿಯಾಗಿದ್ದೇನೆ.

ಅಧ್ಯಯನದ ಹಾದಿಯಲ್ಲಿ ಎದ್ದ
ನೂರಾರು ಸಮಸ್ಯೆಗಳಲ್ಲಿ ಭಾಗಿಯಾದ
ಸಂಬಾಯತ ನನ್ನ ಹೆಂಡತಿ
ಶ್ರೀಮತಿ ಲಕ್ಷ್ಮೀ ಬೇಂದ್ರೆ,
ನನ್ನ ಮಕ್ಕಳು ಹಾಗೂ ತಮ್ಮಂದಿರಿಗೂ
ಈ ಸಂದರ್ಭದಲ್ಲಿ ಕೃತಜ್ಞತೆ ಹೇಳುತ್ತೇನೆ.

ಅಧ್ಯಯನದ ಹಣದ ಕೊರತೆಗೆ
ಧನಸಹಾಯ ಮಾಡಿದ
ನನ್ಮತ್ರಿಯ ಗುರುಗಳಾದ
ಶ್ರೀ ಝಡ್.ಬಿ. ಬಿರಾಜದಾರ,
ಪ್ರೊ. ಚಂದ್ರಶೇಖರ ಬಿರಾದರ
ಪ್ರೊ. ರಮೇಶ ಪಾಟೀಲ ಹುಮನಾಬಾದ
ಪ್ರೊ. ಶಿವಾಜಿ ಜಗತಾಪ, ಪ್ರೊ. ಪ್ರಕಾಶ ಮಾನಕರೆ
ಅವರಿಗೂ ನನ್ನ ಅನಂತಾನಂತ
ಕೃತಜ್ಞತೆಗಳು.

ಕುಟುಂಬದ ಆರೋಗ್ಯದ ಹೊಣೆ ಹೊತ್ತ
ಡಾ. ಜಲೀಲ್ ಮುಸ್ತಾಫಾ ಅವರಿಗೂ,
ಹೂ ಇಲ್ಲದಿದ್ದರೂ ಹೂವಿನ ಮಕರದಂತೆ
ಸಹಕರಿಸಿದ
ನಮ್ಮ ಚನ್ನಬಸವೇಶ್ವರ ಮಹಾವಿದ್ಯಾಲಯದ
ಹಾಗೂ
ಅಕ್ಕಮಹಾದೇವಿ ಕಾಲೇಜು, ಭಾಲ್ಕಿಯ
ಸಿಬ್ಬಂದಿ ವರ್ಗದವರಿಗೂ
ಮುತ್ತಿನಂತೆ ಅಂದವಾಗಿ ಅಕ್ಷರ ಸಂಯೋಜನೆ
ಮಾಡಿದ ಶ್ರೀಮತಿ ಬಿ.ರಶ್ಮಿಕೃಪಾಶಂಕರ್,
ಶ್ರೀ ಎ.ಎಂ. ಕೃಪಾಶಂಕರ್
ಅವರಿಗೂ
ಈ ಸಂದರ್ಭದಲ್ಲಿ ಕೃತಜ್ಞತೆ ಸಲ್ಲಿಸುತ್ತೇನೆ

*ಧನ್ಯವಾದಗಳೊಂದಿಗೆ,*

ಶ್ರೀನಿವಾಸ ಬೇಂದ್ರೆ
ಸಂಶೋಧಕ
ನಿಡೆಬಾನ ಭಾಲ್ಕಿ ತಾಲೂಕು
ಬೀದರ ಜಿಲ್ಲೆ

## ಪರಿವಿಡಿ

*"ಬೀದರ ಕನ್ನಡ ಸಾಮಾಜಿಕ ಹಾಗೂ ಪ್ರಾದೇಶಿಕ ಪ್ರಭೇದಗಳು*
*ಒಂದು ಭಾಷಾಶಾಸ್ತ್ರೀಯ ಅಧ್ಯಯನವು ಪ್ರಥಮಾಧ್ಯಾಯದಿಂ*
*ಸಪ್ತಮಿ ಅಧ್ಯಾಯದಪರಿಯಂತಂ ಸಮಾಪ್ತಂ"*

# ಅಂತರಾಷ್ಟ್ರೀಯ ಲಿಪಿ

| | | | |
|---|---|---|---|
| a | ಅ | dh | ಧ್ |
| a: | ಆ | ṭh | ಠ್ |
| i | ಇ | ḍh | ಢ್ |
| i: | ಈ | ch | ಛ್ |
| u | ಉ | jh | ಝ್ |
| u: | ಊ | | |
| e | ಎ | kh | ಖ್ |
| e: | ಏ | gh | ಘ್ |
| o | ಒ | ŋ | ಙ್ |
| o: | ಓ | | |
| ai | ಐ(ಅ ಇ) | ñ | ಞ್ |
| au | ಔ(ಅವು) | ṇ | ಣ್ |
| p | ಪ್ | n | ತವರ್ಗದ ಮೊದಲು ಬಿಂದು ಬಂದಾಗ |
| b | ಬ್ | m | ಮ್ |
| t | ತ್ | ś | ಶ್ |
| d | ದ್ | ṣ | ಷ್ |
| ṭ | ಟ್ | s | ಸ್ |
| ḍ | ಡ್ | h | ಹ್ |
| c | ಚ್ | l | ಲ್ |
| j | ಜ್ | ḷ | ಳ್ |
| k | ಕ್ | v | ವ್ |
| g | ಗ್ | y | ಯ್ |
| ph | ಫ್ | E<ɛ | ಆ್ಯ |
| bh | ಭ್ | | |
| th | ಥ್ | | |

## ಸಂಕೇತ ಸೂಚಿಗಳು

| | |
|---|---|
| > | ಇದರ ಹಿಂದಿನ ಪದದಿಂದ ಮುಂದಿನ ಪದ ಬಂದಿದೆ |
| < | ಇದರ ಹಿಂದಿರುವ ಪದ ಮುಂದಿರುವ ಪದದಿಂದ ಬಂದಿದೆದೆ |
| → | ಬೆಳವಣಿಗೆ |
| --- | ಎರಡೂ |
| --↱ | high |
| ---↳ | Low |
| = | ಸಮಾನ |
| ~ | ಅನುನಾಸಿಕ |
| V | ಹ್ರಸ್ವರ |
| V: | ದೀರ್ಘಸ್ವರ |
| C | ವ್ಯಂಜನ |
| cc | ವ್ಯಂಜನ ದ್ವಿತ್ವ |

# ಬೀದರ ಜಿಲ್ಲೆಯ ನಕ್ಷೆ




ದೇವಾಲಯಗಳು
ಚರ್ಚುಗಳು
ಕೋಟೆಗಳು
ನದಿಗಳು
ರೈಲುಮಾರ್ಗ
ರಾಷ್ಟ್ರೀಯ ಹೆದ್ದಾರಿ
ಗುಡ್ಡಗಾಡು ಪ್ರದೇಶ/ಧರಿಪಟ್ಟಿ
ಮಸೀದಿಗಳು
ವಿಹಾರಗಳು
ವಾಯುಪಡೆ
ಸೇತುವೆಗಳು.



ಅಧ್ಯಾಯ ೧

# ಬೀದರ ಜಿಲ್ಲೆಯ ಸಂಕ್ಷಿಪ್ತ ಪರಿಚಯ

ಬೀದರ ಕರ್ನಾಟಕ ರಾಜ್ಯದ ಉತ್ತರ ತುದಿಯಲ್ಲಿರುವ ಒಂದು ಚಿಕ್ಕ ಜಿಲ್ಲೆ. ಇದು ೭೨೨ ಗ್ರಾಮಗಳನ್ನು ೫ ತಾಲೂಕು ಕೇಂದ್ರಗಳಾದ ಬೀದರ, ಭಾಲ್ಕಿ, ಬಸವಕಲ್ಯಾಣ, ಔರಾದ ಮತ್ತು ಹುಮನಾಬಾದ ಎಂಬ ಪಟ್ಟಣಗಳಿಂದ ಕೂಡಿದೆ. ಜಿಲ್ಲೆಯ ವಿಸ್ತೀರ್ಣ ೫೪೫೮ ಚ.ಕಿ.ಮೀಟರ್‌ಗಳು. ಸಣ್ಣ ಸಣ್ಣ ಗುಡ್ಡ ಬೆಟ್ಟಗಳಿಂದ ಕೂಡಿದೆ. ಹೆಚ್ಚಾಗಿ ಬಯಲು ಸೀಮೆಯನ್ನೊಳಗೊಂಡ ದಖಿನ್ ಪ್ರಸ್ಥಭೂಮಿಯ ಶ್ರೇಷ್ಠ ಭಾಗವಾಗಿದೆ. ಕೃಷಿ ಪ್ರಾಧಾನ್ಯ ಜಿಲ್ಲೆ ಇದು ರಾಜಕೀಯ, ಆರ್ಥಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ರಂಗಗಳಲ್ಲಿ ತನ್ನ ವೈಶಿಷ್ಟ್ಯವನ್ನು ಸದಾ ಉಳಿಸಿಕೊಂಡಿದೆ.

'ಬೀದರ' ಪೌರಾಣಿಕವಾಗಿ 'ವಿದುರನಗರ'ವೆಂದು ಮಹಾಭಾರತದಷ್ಟು ಇದರ ಪ್ರಾಚೀನತೆ. ನಳ ದಯಯಂತಿಯರ ಪ್ರಖ್ಯಾತ ಪ್ರಣಯದ ಉದ್ಯಾನವೆಂತಲೂ ಪ್ರತೀತಿ. ಕಾಲಕಾಲಕ್ಕೆ ಅನೇಕ ಹೆಸರುಗಳಿಂದ ಪ್ರಸಿದ್ಧಿ ಪಡೆದ ಇದರ ಮೂಲ ಶಬ್ದ 'ಬಿದಿರು', 'ಬಿದಿರೆ' ಎಂದರೆ 'ಬಿದಿರು' ಬೆಳೆಯುವ ಪ್ರದೇಶ. ಅಂತೆಯೇ ಇದಕ್ಕೆ ಬಿದಿರೆ>ಬಿದಿರುಪುರ>ಬಿದಿರೂರು>ಬಿದರೆ>ಬಿದರ ಇತ್ಯಾದಿ ಹೆಸರುಗಳು. ೧೫ನೆಯ ಶತಮಾನದ ಕನ್ನಡ ಹಾಗೂ ಮರಾಠಿ ಗ್ರಂಥಗಳಲ್ಲಿ ಈ ಹೆಸರುಗಳ ಉಲ್ಲೇಖವಿದೆ. ಮುಸ್ಲಿಂ ಸುಲ್ತಾನರ ಕಾಲದಲ್ಲಿ ಅಹಮದಾಬಾದ್, ಮೊಹಮ್ಮದಾಬಾದ ಹಾಗೂ ಬೀದರ ಎಂದು ಹೆಸರು ಹೊಂದಿತ್ತು. ಸದ್ಯಕ್ಕೆ ಬೀದರ ಎಂದೇ ಆಗಿದೆ.

'ಬೀದರ ಕನ್ನಡ ಸಾಮಾಜಿಕ ಹಾಗೂ ಪ್ರಾದೇಶಿಕ ಪ್ರಭೇದಗಳು' ಎಂಬ ಅಧ್ಯಯನ ಕೈಗೊಳ್ಳುವ ಮುಂಚೆ ಜಿಲ್ಲೆಯ ಭೌಗೋಳಿಕ, ಚಾರಿತ್ರಿಕ, ಸಾಮಾಜಿಕ, ಆರ್ಥಿಕ ಹಾಗೂ ಜಿಲ್ಲೆಯ ಏರಿಳಿತಗಳ ಬಗ್ಗೆ ತಿಳಿದುಕೊಳ್ಳುವುದು ಸೂಕ್ತ ಎನಿಸುತ್ತದೆ.

## ೧.೧. ಭೌಗೋಳಿಕ ಪರಿಚಯ

ಯಾವುದೇ ಒಂದು ಪ್ರದೇಶದ ಭಾಷೆ ಭೌಗೋಳಿಕ ಲಕ್ಷಣಗಳಿಂದ ಪ್ರಭಾವಿತವಾಗಿರುತ್ತದೆ. ಭಾಷೆ ಹಾಗೂ ಭೂಗೋಳದ ವಿಷಯ ವಸ್ತು ಭಿನ್ನವಾಗಿದ್ದರೂ ಅವು ಒಂದನ್ನೊಂದು ಅವಲಂಬಿಸಿರುತ್ತವೆ. ಇವುಗಳಿಗೆ ಹತ್ತಿರದ ಸಂಬಂಧವಿದೆ. ಜಲ, ಹವಾಗುಣ ಖನಿಜ ಮತ್ತು ಅರಣ್ಯ ಸಂಪತ್ತುಗಳು ಮೂಲ ಕಾರಣಗಳಾಗಿರುತ್ತವೆ. ಹೀಗಾಗಿ ವಾತಾವರಣ ಮತ್ತು ವ್ಯಕ್ತಿಗಳ ಸಂಪರ್ಕದಿಂದ ಉದಯಿಸಿದ ಶಬ್ದಗುಚ್ಚಗಳೇ ಭಾಷೆ. ಒಬ್ಬ ವ್ಯಕ್ತಿಯ ಜೀವನದ ವಿಕಸನದಿಂದ ಅವನು ಹುಟ್ಟಿ ಬೆಳೆದ ಭೌಗೋಳಿಕ ಪರಿಸರದ ಪ್ರಭಾವವಿರುತ್ತದೆ. ಪರಿಸರ ಮತ್ತು ಮಾನವನ ಮಧ್ಯ ಸಂಭವಿಸಿದ ಅನೇಕಾನೇಕ ಕ್ರಿಯೆ ಮತ್ತು

ಪ್ರಕ್ರಿಯೆಗಳಿಂದ ಭಾಷೆ ವಿಕಸನ ಹೊಂದುತ್ತಾ ಬಂದಿದ್ದರಿಂದ ಭೌಗೋಳಿಕ ಲಕ್ಷಣ ನೋಡುವುದು ಅವಶ್ಯಕ.

ಬೀದರ ಜಿಲ್ಲೆ ಭೌಗೋಳಿಕವಾಗಿ ವಿಶಾಲತೆಯನ್ನು ಹೊಂದಿದೆ. ಅಲ್ಲಲ್ಲಿ ಸಣ್ಣಪುಟ್ಟ ಗುಡ್ಡಬೆಟ್ಟಗಳಿಂದ ಕೂಡಿರುವ ಈ ಪ್ರದೇಶವನ್ನು ಧರಿ ನಾಡು ಎಂತಲೂ ಕರೆಯುವುದುಂಟು. ಸ್ವಾತಂತ್ರ್ಯ ಪೂರ್ವದಲ್ಲಿ ಆಂಧ್ರಪ್ರದೇಶದ ನಾರಾಯಣಖೇಡ್ ಹಾಗೂ ಜಹಿರಾಬಾದ್, ಮಹಾರಾಷ್ಟ್ರದ ಉದಗೀರ ಹಾಗೂ ಉಸ್ಮಾನಾಬಾದಗಳು ಈ ಜಿಲ್ಲೆಯ ಪಟ್ಟಣಗಳಾಗಿದ್ದು, ಬಹಳ ವಿಶಾಲತೆಯನ್ನು ಹೊಂದಿತ್ತು. ಈಗ ಇದರ ಗಡಿಗಳು ಕಿರಿದಾಗಿ ಔರಾದ್, ಬೀದರ್, ಭಾಲ್ಕಿ, ಬಸವಕಲ್ಯಾಣ ಹಾಗೂ ಹುಮನಾಬಾದ್ ಎಂಬ ಐದು ತಾಲೂಕುಗಳಿಂದ ಕೂಡಿದೆ.

**ತೊರೆಪಟ್ಟಿ (Doaf and Banks):** ಗೋದಾವರಿ ನದಿಯ ಮುಖ್ಯ ಉಪನದಿಗಳಲ್ಲಿ ಒಂದಾದ ಮಾಂಜರಾನದಿ ಈ ಜಿಲ್ಲೆಯಲ್ಲಿ ಮಹಾರಾಷ್ಟ್ರದಿಂದ ಆಂಧ್ರಪ್ರದೇಶದೆಡೆಗೆ ಹರಿಯುತ್ತದೆ. ಕಾರಂಜಾ ನದಿ ಮಾಂಜರಾ ನದಿಯ ಉಪನದಿಯಾಗಿದೆ. ಭಾಲ್ಕಿಯ ವಾಯುವ್ಯಾಧಿಮುಖವಾಗಿ ಹರಿದು ಮಾಂಜರಾ ನದಿಯನ್ನು ಸೇರುತ್ತದೆ. ಈ ನದಿಗೆ ಹಾಲಹಳ್ಳಿಯಹತ್ತಿರ ದೊಡ್ಡ ಆಣೆಕಟ್ಟೊಂದು ನಿರ್ಮಿಸಲಾಗಿದೆ. ಇದು ಜಿಲ್ಲೆಯು ಬಹುದೊಡ್ಡ ಜಲಾಶಯ. ಮುಲ್ಲಾಮಾರಿ ನದಿಯು ಬಸವಕಲ್ಯಾಣ ತಾಲ್ಲೂಕಿನಲ್ಲಿ ಹುಟ್ಟಿ ಜಿಲ್ಲೆಯ ಆಗ್ನೇಯಾಭಿಮುಖ ಹರಿದು ಗುಲಬರ್ಗಾ ಜಿಲ್ಲೆಯನ್ನು ಸೇರುತ್ತದೆ. ಇದರಂತೆ ಚುಳಕಿ, ಗಂಡೂರಿ, ನಗರವಾಲಾ ಹುಡಗಿ ಹಾಗೂ ಹಳ್ಳಿಖೇಡ ನಾಲಾ ಚಿಕ್ಕವು. ಈ ಎಲ್ಲಾ ನದಿಗಳು ಸಾಮಾನ್ಯವಾಗಿ ಮಳೆಗಾಲದಲ್ಲಿಯೇ ಹರಿಯುತ್ತವೆ. ಕಾರಂಜಾ ನದಿಗೆ ನಿಡೇಬಾನ ಆನಂದವಾಡಿಯ ನಡುವೆ ಹಾಗೂ ಮಾಂಜರಾ ನದಿಗೆ ಜಿಲ್ಲೆಯ ಮಹಾರಾಷ್ಟ್ರಗಡಿಯಲ್ಲಿ ಬ್ಯಾರೇಜ್ ಕಮ್ ಬ್ರಿಡ್ಜ್, ಚುಳಕಿ ನದಿಗೆ ಚುಳಕಿ ನಾಲೆಯ ಕಾರ್ಯ ನಡೆಯುತ್ತಲಿವೆ.

**ಜಿಲ್ಲೆಯ ವಾಯುಗುಣ :** ತಂಪಾದ ಗಾಳಿ ಯಾವಾಗಲೂ ಸೂಸುತ್ತದೆ. ಭೂಗುಣ ಅಪಾರ ಸಿರಿತನದಿಂದ ಕೂಡಿದೆ. ಪ್ರಾಚೀನ ನಾಗರಿಕತೆಯಲ್ಲಿ ಮಾಂಜರಾ ನಾಗರಿಕತೆಯು ಒಂದು. ಪೌರಾಣಿಕ ಹೆಸರು ಇದಕ್ಕೆ ಮಂಜುಳಾ ಎಂದಿತ್ತು. ಕಪ್ಪು ಹಾಗೂ ಕೆಂಪು ಮಣ್ಣಿನಿಂದ ಕೂಡಿದ್ದುದರಿಂದ ಸಾರಜನಕ ರಂಜಕ ಸಾಧಾರವಾಗಿದ್ದು, ಪೋಟಾಷ್ ಅಂಶ ಹೆಚ್ಚಾಗಿದೆ.

ಬೀದರ್ ಜಿಲ್ಲೆಯ ಭೂಮಿ ರಚನೆಯು ಘನೀಕೃತ ಲಾವಾರಸ(Solidefied lave) ದಿಂದ ಕೂಡಿದೆ. ಅಲ್ಲಲ್ಲಿ ಕೆಂಪು ಕಲ್ಲು(Latrite) ಜೇಡಿಮಣ್ಣು (Bauxite) ಬಿಳಿ ಜೇಡಿಮಣ್ಣು(Bedri zink)) ಜಾಜ ಸತುವು ಮುಂತಾದ ಖನಿಜಾಂಶಗಳು ವಿರಳವಾಗಿ ಕಂಡುಬರುತ್ತದೆ. ಈ ಜಿಲ್ಲೆಯ ಭೂ ಪ್ರದೇಶವು

ಸಮುದ್ರ ಪಾತಾಳಿಯಿಂದ ಸರಾಸರಿ ೬೧೦ ಮೀ. ಎತ್ತರಕ್ಕಿದೆ ಎಂದು ಅಂದಾಜು ಮಾಡಲಾಗಿದೆ. ಇಲ್ಲಿಯ ಭೂವೈಲಕ್ಷಣ್ಯವನ್ನವಲಂಬಿಸಿ ಸ್ಥಳೀಕರು ಧರಿಪಟ್ಟಿ, ತೊರೆಪಟ್ಟಿ ಹಾಗೂ ಘಟವಾಡಿ ಎಂದು ಮೂರು ಬಗೆಯಾಗಿ ವಿಂಗಡಿಸುತ್ತಾರೆ.

ಧರಿಪಟ್ಟಿ : ಬೀದರ ಜಿಲ್ಲೆಯ ದಕ್ಷಿಣ ಭಾಗದಲ್ಲಿ ಪೂರ್ವೋತ್ತರವಾಗಿ ಕಪ್ಪುಮಣ್ಣು ಮತ್ತು ಗುಡ್ಡಗಳಿಂದ ಈ ಪ್ರದೇಶ ವ್ಯಾಪಿಸಿದೆ. ಇಲ್ಲಿ ಕೆಂಪು ಕಲ್ಲುಗಳು(Latrites) ವಿಶೇಷವಾಗಿ ಕಂಡುಬರುತ್ತವೆ. ಜಿಲ್ಲೆಯ ಉಳಿದ ಭಾಗಕ್ಕಿಂತ ಈ ಭಾಗದಲ್ಲಿ ಮಳೆ ಸ್ವಲ್ಪ ಹೆಚ್ಚಾಗಿ ಬೀಳುತ್ತದೆ. ಭೂಮಿಯ ನೀರನ್ನು ಹೆಚ್ಚಾಗಿ ಇಂಗಿಸಿಕೊಳ್ಳುವುದರಿಂದ ಈ ಭಾಗದಲ್ಲಿ ತೋಟಗಾರಿಕೆ ಇದೆ.

ಘಟ್ಟವಾಡಿ ಪಟ್ಟಿ : ಜಿಲ್ಲೆಯ ಉತ್ತರ ಸೀಮೆಯ ಪ್ರದೇಶವನ್ನು ಘಟ್ಟವಾಡಿ ಪಟ್ಟಿ ಎಂದು ಕರೆಯಲಾಗುತ್ತದೆ. ಇದು ಪೂರ್ವ-ಪಶ್ಚಿಮವಾಗಿ ಕಲ್ಲು, ಮೊರಡಿ, ಗುಡ್ಡ ಬೆಟ್ಟಗಳಿಂದ ಕೂಡಿದೆ. ಈ ಭಾಗದಲ್ಲಿ ಕರಿಕಲ್ಲು ಕಪ್ಪು, ಕೆಂಪು, ಬೂದು ಮತ್ತು ಮಿಶ್ರ ಬಣ್ಣದ ಭೂಮಿಯಿದೆ. ಜಿಲ್ಲೆಯಲ್ಲಿ ಕಡಿಮೆ ಪ್ರಮಾಣದ ಮಳೆ ಬೀಳುತ್ತದೆ. (೧೫"- ೨೦")ಘನೀಕೃತ ಲಾವಾ ಇರುವುದರಿಂದ ಹೆಚ್ಚಿನ ನೀರು ಇಂಗದೆ ಹರಿದು ಹೋಗುತ್ತದೆ. ವ್ಯವಸಾಯಕ್ಕೆ ಅಷ್ಟು ಪ್ರಯೋಜನಕಾರಿಯಲ್ಲ.

## ೧.೨. ಪ್ರಾಗೈತಿಹಾಸಿಕ ಯುಗದಲ್ಲಿ ಬೀದರ ಜಿಲ್ಲೆ

ಬೀದರ ಜಿಲ್ಲೆಯಲ್ಲಿ ಇದುವರೆಗೆ ಯಾವುದೇ ಬಗೆಯ ವ್ಯವಸ್ಥಿತ ಉತ್ಖನನಗಳು ನಡೆದಿಲ್ಲವಾದ್ದರಿಂದ ಭಾರತೀಯ ಪುರಾತತ್ವ ಇಲಾಖೆ, ಪುಣೆಯ ಡೆಕ್ಕನ ಕಾಲೇಜಿನ ಇತಿಹಾಸ ವಿಭಾಗ ಮತ್ತು ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಪ್ರಾಚೀನ ಇತಿಹಾಸ ಮತ್ತು ಶಾಸನ ವಿಭಾಗಗಳು ನಡೆಸಿದ ಪರಿವೀಕ್ಷಣೆಯಿಂದ ಇಲ್ಲಿ ಹಳೆಯ ಮತ್ತು ಹೊಸ ಶಿಲಾಯುಗಗಳಿಗೆ ಸಂಬಂಧಿಸಿಂದ ಅನೇಕ ನೆಲೆಗಳು ಬೆಳಕಿಗೆ ಬಂದಿವೆ.

**ಹಳೆಯ ಶಿಲಾಯುಗ(Palaealithic & Microlithic ages)**

ಕ್ರಿ.ಪೂ. ೨೫೦೦ಕ್ಕಿಂತ ಪೂರ್ವದ ಕಾಲವನ್ನು ಇಲ್ಲಿ ಹಳೆಯ ಶಿಲಾಯುಗವೆಂದು ಕರೆಯಲಾಗಿದೆ. ಭಾರತೀಯ ಪುರಾತತ್ವ ಇಲಾಖೆಯು ಈ ಕಾಲಕ್ಕೆ ಸಂಬಂಧಿಸಿಂದ ಕಲ್ಲುಗುಡ್ಡೆಗಳನ್ನು ಚಿಮಕೋಡ ಮತ್ತು ಚೆಲ್ಲರಗಿ ಬಳಿಯ ಮಾಂಜರಾನದಿಯ ಪೂರ್ವದ ದಂಡೆಗಳಲ್ಲಿ ಗುರುತಿಸಿದೆ. ಬೀದರ ಕೋಟೆಯಿಂದ ವಾಯುವ್ಯ ದಿಕ್ಕಿನಲ್ಲಿರುವ ಪಾಪನಾಶಿನಿ, ಅಲಿಯಾಬಾದ(ಕರಂಜಿ) ಮತ್ತು ಬೀಬಿ ಬಂದಾಗಿಗಳಲ್ಲಿನ ಭೂ ಪ್ರದೇಶದಲ್ಲಿ ಕೆಲವು ಕಲ್ಲುಗುಡ್ಡೆ(Cairn) ಮತ್ತು ಕೆಲವು ಶಿಲೋಪಕರಣಗಳನ್ನು (Artefact) ಕಂಡು ಹಿಡಿದು ಇಲ್ಲಿ ಮಧ್ಯ ಮತ್ತು ಹೊಸಶಿಲಾಯುಗ (Megalithic & Microlithic age)ಗಳಿಗೆ ಸಂಬಂಧಿಸಿದ ಭೂಪದರುಗಳನ್ನು ಮತ್ತು ಒಳಭಾಗ(Cones) ಗುರುತಿಸಿದೆ.

ಕರ್ನಾಟಕ ವಿಶ್ವವಿದ್ಯಾಲಯವು ೧೯೭೪ರ ಜನವರಿಯಲ್ಲಿ ಆಗಸ್ಟ್ ತಿಂಗಳವರೆಗೆ ಬಿದರ ಜಿಲ್ಲೆಯಲ್ಲಿ ಪರಿವೀಕ್ಷಣೆಯನ್ನು ನಡೆಸಿ ಇಲ್ಲಿಯ ಅನೇಕ ಹಳೆಯ ಮತ್ತು ಹೊಸ ಶಿಲಾಯುಗದ ನೆಲೆಗಳ ಮೇಲೆ ಹೆಚ್ಚಿನ ಬೆಳಕು ಚೆಲ್ಲಿದೆ. ಬೀದರ ತಾಲೂಕಿನ ಚಟ್ನನಳ್ಳಿ, ಸಿರಕಟನಳ್ಳಿ, ಭಂಗೂರ, ಔರಾದ, ಹೆಜ್ಜರಗಿ ಮುಂತಾದ ಗ್ರಾಮಗಳ ಸುತ್ತಲಿನ ಪ್ರದೇಶದಲ್ಲಿ ಬೆಣಚುಕಲ್ಲು, ಚರ್ಕೆ ಮತ್ತು ಜಾಸ್ಪರಗಳಿಂದ ತಯಾರಿಸಿ ಉಜ್ಜುಗಲ್ಲು(Scrapers) ಮತ್ತು ಕೋರೆಕಲ್ಲುಗಳ(Bores) ಮೊನೆಗಳನ್ನು ಸಂಗ್ರಹಿಸಿದೆ.

**ಹೊಸ ಶಿಲಾಯುಗ**

ಕ್ರಿ.ಪೂ.೨೫೦೦ ರಿಂದ ಕ್ರಿ.ಪೂ.೧೦೦೦ದ ವರೆಗಿನ ಕಾಲಾವಧಿಯನ್ನು ಇಲ್ಲಿ ಹೊಸ ಶಿಲಾಯುಗವೆಂದು ಕರೆಯಲಾಗಿದೆ. ಕರ್ನಾಟಕ ವಿಶ್ವವಿದ್ಯಾಲಯವು ನಡೆಸಿದ ಪರಿವೀಕ್ಷಣೆಯಲ್ಲಿಯೆ ಹೆಚ್ಚಿನ ನೆಲೆಗಳು ಬೆಳಕಿಗೆ ಬಂದವು. ಭಾಲ್ಕಿ ತಾಲೂಕಿನ ನಾಗೂರು(ಕೆ) ಮತ್ತು ಚಂದಾಪುರ ರಸ್ತೆಯ ಎಡಬದಿಯಲ್ಲಿರುವ ಮಣ್ಣಿನ ದಿಣ್ಣೆಯಲ್ಲಿ ಹೊಸ ಶಿಲಾಯುಗದ ನಾಲ್ಕು ಗುಂಡಿಗಳಿವೆ. ಇವುಗಳಲ್ಲಿ ಎರಡನ್ನೂ ಅಗೆದು ನೋಡಿದಾಗ ಮೊದಲನೆಯದು ಒಂದು ಮೀಟರ ಆಳ ಮತ್ತು ಆರವತ್ತು ಸೆ.ಮೀ.ವ್ಯಾಸವನ್ನು ಹೊಂದಿದ್ದು ಕಪ್ಪೊತ್ತಿದ ಬಿಳಿ ಬೂದು ಬಣ್ಣದ ಮೃತಪಾತ್ರೆ ಮತ್ತು ಮಾನವನ ಎಲುಬಿನ ಚೂರುಗಳು ದೊರೆತಿವೆ. ಇದೇ ಆಳತೆಯ ಮತ್ತೊಂದು ಗುಂಡಿಯಲ್ಲಿ ದಾಳಿಂಬೆ ಕೆಂಪೊತ್ತಿದ ಬೂದು ಬಣ್ಣದ ಮೃತಪಾತ್ರೆಯ ಚೂರುಗಳು, ಮುಚ್ಚುವ ಬಟ್ಟಲು, ಮಾನವನ ಎಲುಬಿನ ಚೂರುಗಳು ಮತ್ತು ಒಂದು ಅರೆಯುವ ಕಲ್ಲು ದೊರೆತಿವೆ. ಇಲ್ಲಿ ದೊರೆತ ಪಾತ್ರೆಗಳ ಅಂಚಿನ ಬಳಿ ಬೆರಳ ಗುರುತಿನ ಅಲಂಕಾರವನ್ನು ಬಿಟ್ಟರೆ ಉಳಿದ ಯಾವುದೆ ಅಲಂಕಾರವಾಗಲಿ, ಮೈಕಲೇಪವಾಗಲಿ ಇಲ್ಲದುದರಿಂದ ಮಸ್ಕಿ ಮತ್ತು ಹಿಕ್ಕಿಹಾಳ ನಾಗರಿಕತೆಗಿಂದ ಇವು ಹಳೆಯವು ಎನಿಸುತ್ತವೆ. ಇದೇ ತಾಲೂಕಿನ ಗೋರ ಚಿಂಚೋಳಿಯ ಬಳಿಯಲ್ಲಿಯೂ ಕಪ್ಪೊತ್ತಿದ ಬೂದು ಬಣ್ಣದ ಮೃತಪಾತ್ರೆ ಮತ್ತು ಬಟ್ಟಲುಗಳ ಚೂರುಗಳು ದೊರೆತಿವೆ. ನಯಗೊಳಿಸಿದ ಕರಿಕಲ್ಲಿನ ಕೊಡಲಿ ಮತ್ತು ಕೆಲವು ಎಲುಬಿನ ಚೂರುಗಳೂ ದೊರೆತಿವೆ. ಮಧ್ಯಶಿಲಾಯುಗದ ಜೋರ್ವೆ ಸಂಸ್ಕೃತಿಯ ಕೊನೆಯ ಕಾಲಕ್ಕೆ ಸಂಬಂಧಿಸಿದ್ದಂತೆ ತರ್ಕಿಸಲಾಗಿದೆ. ಭಾಲ್ಕಿ, ಭಾತಂಬ್ರಾ, ಲಂಜವಾಡ ಏಣಕೂರು ಮತ್ತು ಬಸವಕಲ್ಯಾಣ ತಾಲೂಕಿನ ಚಿಟ್ಟಾ ಗ್ರಾಮಗಳಲ್ಲಿ ಕಪ್ಪು ಮತ್ತು ಕೇವಲ ಕೆಂಪು ಬಣ್ಣದ ಮೃತಪಾತ್ರೆಯ ಚೂರುಗಳು ದೊರೆತಿವೆ. ಬೀದರ ತಾಲೂಕಿನ ಸಿರ್ಸಿ-ಕಾಡವಾದ ರಸ್ತೆಯ ಬದಿಯಲ್ಲಿರುವ ಧನಗುತ್ತಿಯಲ್ಲಿ ಅನೇಕ ಕಲ್ಲು ಗುಡ್ಡುಗಳಲ್ಲಿ ಕಪ್ಪುಬಣ್ಣದ ಮೃತ ಪಾತ್ರೆಯ ಚೂರುಗಳು ಸಿಕ್ಕಿವೆ.

ಗುಲಬರ್ಗಾ, ಬಿಜಾಪುರ ಮತ್ತು ಧಾರವಾಡ ಜಿಲ್ಲೆಯಕೃಷ್ಣಾ ಮುಖಜ ಭೂಮಿಯಲ್ಲಿ ಹೊಸ ಶಿಲಾಯುಗದ ಅನೇಕ ಕಡೆ ಮಾನವ ನೆಲೆಗಳಿರುವ ಸಂಗತಿ ಕಳೆದ ಶತಮಾನದಲ್ಲಿಯೇ ಪ್ರಕಟವಾಗಿದೆ.

ಈ ಎಲ್ಲ ಅಂಶಗಳನ್ನು ಗಮನಿಸಿದಾಗ ಒಂದು ವಿಷಯ ಸ್ಪಷ್ಟವಾಗುತ್ತದೆ. ಗೋದಾವರಿ ತೀರದಿಂದ ಹಳೆಯ ಶಿಲಯಾಉಗದ ನಾಗರಿಕತೆ ಬೀದರ ಜಿಲ್ಲೆಗೆ ಪ್ರಸಾರಗೊಂಡಿದ್ದು, ಹೊಸ ಶಿಲಾಯುಗದ ಅಷ್ಯೊಲಿಯನ್ ಮತ್ತು ಜೋರ್ವೆ ಸಂಸ್ಕೃತಿಗಳೊಂದಿಗೆ ಬೆಳೆಯುತ್ತ ಹೋಯಿತು. ಆದುದರಿಂದ ಪ್ರಾಚೀನತೆಯ ದೃಷ್ಟಿಯಿಂದ ಕರ್ನಾಟಕದಲ್ಲಿ ಬೀದರ ಜಿಲ್ಲೆಗೆ ಮಹತ್ವದ ಸ್ಥಾನ ಪ್ರಾಪ್ತವಾಗುತ್ತದೆ.

**ಪೌರಾಣಿಕ ನೆಲೆಗಳು**

ಪುಣೆಯ ಡೆಕ್ಕನ ಕಾಲೇಜಿನ ಇತಿಹಾಸ ವಿಭಾಗ ಮತ್ತು ಕರ್ನಾಟಕ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಶಾಸನ ವಿಭಾಗಗಳು ನಡೆಸಿದ ಪರಿವೀಕ್ಷಣೆಯಲ್ಲಿ ಮಾಂಜರಾ ನದಿಯ ದಂಡೆಯಲ್ಲಿ ಯಜ್ಞ ವೇದಿಕೆಯ ಅವಶೇಷಗಳು ಮತ್ತು ಹವಿಸ್ಸನ್ನು ಸಮರ್ಪಿಸುವ ಚಮಚೆಗಳು ಪತ್ತೆಯಾಗಿವೆ. ಭಾಲ್ಕಿ ತಾಲೂಕಿನ ಬರದಾಪುರ ಮತ್ತು ಔರಾದ ತಾಲೂಕಿನ ಕೌಡ್‌ಗಾಂವ ಬಳಿ ಮಾಂಜರಾ ನದಿಯ ದಂಡೆಯಲ್ಲಿಯೂ ಪುರಾಣ ಕಾಲದ ಯಜ್ಞಗಳ ಬೂದಿಯ ರಾಶಿಯಿರುವುದು ಕಂಡುಬಂದಿದೆ. ಭಾಲ್ಕಿ ತಾಲೂಕಿನ ಸೋಮಪುರ ಬಳಿ ಯಜ್ಞ ವೇದಿಕೆ ಕಂಡುಬಂದಿದೆ.

ಪುರಾಣದ ಹೇಳಿಕೆಯ ಮೇರೆಗ ಅಗಸ್ತ್ಯ ಋಷಿಯು ತನ್ನ ಶಿಷ್ಯರೊಂದಿಗೆ ಮೊದಲ ಬಾರಿಗೆ ವಿಂಧ್ಯಾ ಪರ್ವತವನ್ನು ದಾಟಿ ದಕ್ಷಿಣಕ್ಕೆ ಬಂದು ನೆಲೆಸಿದನು. ನಾಂದೇಡ ಜಿಲ್ಲೆಯ ಶಾಸನಗಳಲ್ಲಿಯು ಗೋದಾವರಿ ತೀರದಲ್ಲಿ ಅನೇಕ ಋಷಿಗಳು ಯಜ್ಞ ಮಾಡಿದರೆಂಬ ಉಲ್ಲೇಖ ಬರುತ್ತದೆ.

ರಾಮಾಯಣದಲ್ಲಿ ಕಿಷ್ಕಿಂದೆಯ ಉಲ್ಲೇಖವಿದ್ದರೂ ಬೀದರ ಜಿಲ್ಲೆಗೆ ಸಂಬಂಧಿಸಿದ ಯಾವುದೇ ನಿಖರವಾದ ಉಲ್ಲೇಖವಿಲ್ಲ. ಅದರ ಜನವದಂತಿಯ ಮೇರೆಗೆ ಇಲ್ಲಿಯ ಅನೇಕ ಸ್ಥಳಗಳು ರಾಮ-ಸೀತೆಯರಿಗೆ ಸಂಬಂಧಿಸಿವೆ. ರಾಮಸೀತೆಯರು ವನವಾಸಕ್ಕೆ ಬಂದಾಗ ಬಸವಕಲ್ಯಾಣ ತಾಲೂಕಿನ ಚೆಂಡಕಾಪುರ ಗ್ರಾಮದ ಬಳಿಯಲ್ಲಿರುವ ಒಂದು ತೀರ್ಥದಲ್ಲಿ ಸೀತೆ ಸ್ನಾನ ಮಾಡಿದಳಂತೆ. ಈಗಲೂ ಆ ಸ್ಥಳವು "ಸೀತಾನಹಾನಿಕುಂಡ" ಎಂಬ ಹೆಸರಿನ ಒಂದು ತೀರ್ಥ ಕ್ಷೇತ್ರವಾಗಿದೆ. ರಾವಣ ವಧೆಯ ನಂತರ ರಾಮನ ಹಿಂದಿರುಗಿದಾಗ ಬೀದರ ಬಳಿ ಶಿವಲಿಂಗ ಸ್ಥಾಪಿಸಿದನಂತೆ ಅದು ಈಗ 'ಪಾಪನಾಶಿನಿ' ತೀರ್ಥಕ್ಷೇತ್ರವಾಗಿದೆ. ಬಸವಕಲ್ಯಾಣ ತಾಲೂಕಿನಲ್ಲಿ ರಾಮತೀರ್ಥ ಹೆಸರಿನ ಮೂರು ಗ್ರಾಮಗಳಿವೆ. ಇಲ್ಲಿ ಚಾಲುಕ್ಯ ಕಾಲದ ದೇವಾಲಯದ ಅವಶೇಷಗಳಿವೆ. ಹುಮನಾಬಾದ ತಾಲೂಕಿನಲ್ಲಿಯೂ ರಾಮತೀರ್ಥ ಎಂಬ ಗ್ರಾಮವಿದ್ದು, ಇಲ್ಲಿ ಚಾಲುಕ್ಯರ ಶಾಸನವೂ ದೊರೆತಿದೆ. ಭಾಲ್ಕಿಯ ರಾಮೇಶ್ವರ ಟೇಕಡಿ, ರಾಮತೀರ್ಥವಾಡಿ, ಮುಚಳಂಬಿಯ ರಾಮಲಿಂಗೇಶ್ವರ ಬೀರಗಿಯ ರಾಮಲಿಂಗೇಶ್ವರ, ರಾಜೇಶ್ವರದ ರಾಮೇಶ್ವರ ಮುಂತಾದ ಕಡೆಗಳಲ್ಲಿ ಸೀತಾ-ರಾಮರದೇ ವದಂತಿಗಳಿವೆ.

ಮಹಾಭಾರತದಲ್ಲಿ ಕುಂತಳ, ಕರ್ನಾಟಕಗಳ ಹೆಸರು ಉಲ್ಲೇಖಗೊಂಡಿದೆ. ಪಾಂಡವರು ವನವಾಸಕ್ಕೆ ಬಂದಾಗ ಬೀದರ ತಾಲೂಕಿನ ಉತ್ತರದಲ್ಲಿರುವ ಗೊಟ್ಟಮಗೊಟ್ಟೆ ಅರಣದಲ್ಲಿ ನೆಲಸಿದರೆಂದು ಜನವದಂತಿ. ಗಾಣಗಾಪುರದ ಗಂಗಾಧರ ಸರಸ್ವತಿಯು ನರಸಿಂಹ ಸರಸ್ವತಿಯನ್ನು ಕುರಿತು ಮರಾಠಿಯಲ್ಲಿ 'ಗುರುಚಾರಿತ್ರ' ಎಂಬ ಗ್ರಂಥವನ್ನು ರಚಿಸಿದ್ದಾನೆ. ಇದರಲ್ಲಿ ಬೀದರನ್ನು ವಿದುರಾಪುರವೆಂದು ಕರೆಯಲಾಗಿದೆ. ಈ ಹಿನ್ನೆಲೆಯಲ್ಲಿ ನಳದಮಂತಿಯರು ನೆಲಸಿದ ವಿದುರಾನಗರವೆ ಬೀದರ ಎಂದು, ಪುರಾಣಕಾಲದ ವಿದರ್ಭದೇಶವೆಂಬ ಜನವದಂತಿಯಿದೆ.

ಬೀದರ ಜಿಲ್ಲೆಯು ಹಳೆ ಹೊಸ ಶಿಲಾಯುಗದಲ್ಲಿ ಮೆರೆದಿದ್ದ ಹತ್ತು ಪಟ್ಟು ಇತಿಹಾಸ ಕಾಲದಲ್ಲಿ ಮೆರೆದಿದೆ. ಸುಮಾರು ೫೦ಕ್ಕೂ ಹೆಚ್ಚು ನೂತನ ತಾಮ್ರಯುಗದ ಜನವಸತಿಯ ನೆಲೆಗಳು ಕಾಣಿಸಿಕೊಂಡಿವೆ ಎಂದು ಡಾ.ಆರ್.ಎಂ.ಷಡಕ್ಷರಯ್ಯನವರು ನಡೆಸಿದ ಅಧ್ಯಯನದಿಂದ ತಿಳಿದುಬಂದಿದೆ. ಇದರಲ್ಲಿ ಬಸವ ಕಲ್ಯಾಣ ಪ್ರಾಂತ್ಯವು ವಿಶೇಷವಾದದ್ದು. ಅಂತೆಯೇ ಭಾಲ್ಕಿಯೂ ಅಷ್ಟೆ ಮಹತ್ವದ್ದಾಗಿದೆ. ರಾಜ್ಯ ಪುರಾತತ್ವ ಇಲಾಖೆ ಕೈಗೊಂಡ ಪರಿವೀಕ್ಷಣೆಯಿಂದ ಇಲ್ಲಿ ಅನೇಕ ರಾಜ ಮನೆತನಗಳು ತಲೆದರಿದುದು ಕಂಡುಬರುತ್ತದೆ.

ಶಾತವಾಹನರು, ರಾಷ್ಟ್ರಕೂಟರು, ಚಾಲುಕ್ಯರು, ಚೋಳರು, ಪಲ್ಲವರು, ವಿಜಯನಗರ ಸಾಮ್ರಾಜ್ಯದವರು ಬಹಮನಿಯವರು, ಭಾರತೀಯ ಸಂಸ್ಕೃತಿಗೆ ನೀಡಿದ ಕೊಡುಗೆ ಅಪಾರ. ೧೧ನೆಯ ಶತಮಾನದಲ್ಲಿ ಕಲ್ಯಾಣಿ ಚಾಲುಕ್ಯರ ಆಳ್ವಿಕೆ ಪ್ರಾರಂಭವಾಯಿತು. ಕಲ್ಯಾಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡರು. ಬೀದರದ ಉಜ್ವಲ ಇತಿಹಾಸದ ಮೊದಲ ಅಧ್ಯಾಯ ಆರಂಭವಾಯಿತೆನ್ನಬೇಕು. ೬ನೆಯ ವಿಕ್ರಮಾದಿತ್ಯ (೧೦೭೭-೧೧೨೭) ಅಗ್ರಗಣ್ಯ. ಯುದ್ಧರಂಗದಲ್ಲಿ ನಿಪುಣ; ಸಾಹಿತ್ಯ, ಕಲೆ, ಕವಿಗಳ ಅಭಿಮಾನಿ, ಮೇಧಾವಿ ಕವಿ ಬಿಲ್ಹಣ ಕಾಶ್ಮೀರದಿಂದ ಕಲ್ಯಾಣಕ್ಕೆ ಬಂದು ವಿಕ್ರಮಾದಿತ್ಯನನ್ನು ಕುರಿತು 'ವಿಕ್ರಮಾಂಕದೇವ ಚರಿತ(೦)' ಎಂಬ ಸಂಸ್ಕೃತ ಗ್ರಂಥ ಬರೆದಿದ್ದಾನೆ (ಇದು ಐತಿಹಾಸಿಕ). ವಿಜ್ಞಾನೇಶ್ವರ 'ಮಿತಾಕ್ಷರ' ಗ್ರಂಥ ನಿರ್ಮಿಸಿದ. ಭಾರತೀಯ ಧರ್ಮಶಾಸ್ತ್ರ ಗ್ರಂಥ· ಲೋಕಕ್ಕೆ ಬೀದರ ಜಿಲ್ಲೆಯ ಕಾಣಿಕೆ ಇದಾಗಿದೆ.

೬ನೆಯ ವಿಕ್ರಮಾದಿತ್ಯನ ಕಾಲ ರಾಮ ರಾಜಕಾಲ ಎಂಬಂತೆ ಪ್ರಜೆಗಳ ಅಭ್ಯುದಯದ ಕಾಲವೆಂದು ಶಾಸನಗಳು ಸಾರುತ್ತಿವೆ. ಆರ್ಥಿಕ ದೃಷ್ಟಿಯಿಂದ ವೈಭವದ ಕಾಲ. ಶಿಕ್ಷಣ ಪ್ರಸಾರಕ್ಕೆ ಶಿಕ್ಷಕರಿಗೂ ವಿದ್ಯಾರ್ಥಿಗಳಿಗೂ ಉದಾರ ಸಹಾಯ ನೀಡಿ ಗೌರವಿಸಿದ ಕಾಲವದು. ಪಟ್ಟದ ರಾಣಿ ಚಂದಲಾದೇವಿ ಪ್ರಸಿದ್ಧ ಕಲಾವಿದೆ. ಅಭಿನವ ಶಾರದೆ; ಸೋಮಯಾಜಿ-ವಿಜ್ಞಾನೇಶ್ವರರು ಸುಪ್ರಸಿದ್ಧ ಶಿಕ್ಷಣ ತಜ್ಞರು. ೩ನೆಯ ಸೋಮೇಶ್ವರನ ಕಾಲದಲ್ಲಿ ಕನ್ನಡ ಹಾಗೂ ಸಂಸ್ಕೃತಗಳ ಬೆಳವಣಿಗೆ ಸರಿಸಮಾನಾಗಿದ್ದವು.

ಬೀದರ ಜಿಲ್ಲೆಯ ಮಹೋನ್ನತ ಪುಟ ಕಲ್ಯಾಣದ ವಚನಕ್ರಾಂತಿ. ೧೨ನೇ ಶತಮಾನದ ವೇಳೆಯಲ್ಲಿ ಕಲ್ಯಾಣದಲ್ಲಿ ನಡೆದ ಶರಣರ ಕ್ರಾಂತಿಯ ಕಾಲ ಬೀದರ ಇತಿಹಾಸದ ನವೋದಯ ಕಾಲ. ಅಲ್ಲಮಪ್ರಭು,

ಬಸವಣ್ಣ, ಚನ್ನಬಸವಣ್ಣ, ಅಕ್ಕಮಹಾದೇವಿ ಇನ್ನಿತರ ಶಿವಶರಣಶರಣೆಯರ ಸಮ್ಮಿಲನ ಕಲ್ಯಾಣವನ್ನು ಕೈಲಾಸದ ಸಾದೃಶವನ್ನಾಗಿ ಮಾಡಿತ್ತು.

ಶಿವಶರಣ ಶರಣೆಯರು ಮಾಡಿದ ಸಾಮಾಜಿಕ ಪರಿವರ್ತನೆಯನ್ನು ವಚನಕ್ರಾಂತಿ ಎನ್ನುತ್ತಾರೆ. ಬಸವಣ್ಣ ಕ್ರಾಂತಿಯ ಮೂಲ ಪುರುಷನಾದ. ಕ್ರಾಂತಿಯೆಂದರೆ ವೀರಶೈವ ಮತದ ಪುನರುತ್ಥಾನವಲ್ಲ. ಅದು ಸಾಮಾಜಿಕ ಘೋರ ಶೋಷಣೆಯಾದ ಅಸಮಾನತೆಯನ್ನು ಹೋಗಲಾಡಿಸುವ ಮಹಾ ಅಂದೋಲನವಾಗಿತ್ತು. ಮಾನವ ಧರ್ಮವನ್ನು ತಿಳಿಯುವ ಕಾಲ. ಬಾಳಿನ ಮೌಲ್ಯಗಳ ಪುನರ್ವಿಮರ್ಶೆಯ ಪರ್ವಕಾಲ. ಸಮಾಜಕ್ಕೂ ಮಾನವನಿಗೂ ಹಾಗೂ ಧರ್ಮಕ್ಕೂ ಹೊಸ ವ್ಯಾಖ್ಯಾನ ಬರೆದ ಕಾಲ ಅದಾಗಿತ್ತು.

ಭದ್ರವಾಗಿ ಬೇರೂರಿದ ಸಮಾಜದಲ್ಲಿಯ ಅಸಡ್ಡೆ, ಜಾತಿ, ಮತ, ಪಂಥ, ಕುಲ, ಗೋತ್ರಗಳ ಗೋಡೆಯನ್ನಡ್ಡ ಕೆಡುವಿ ಸಮಾನತೆ ತಂದು ಕೊಟ್ಟ ಕಾಲ. ದೇಶ ವಿದೇಶಗಳ ವೈಚಾರಿಕ ಮಿಲನ. ಅಜರಾಮರವಾಗಿ ನಿಂತ ವಚನ ಸಾಹಿತ್ಯದ ಸೃಷ್ಟಿಯ ಕಾಲ. ಇದು ಅಮೃತ ಸಾಹಿತ್ಯ. ಕ್ರಿ.ಶ.೧೨೦೦ ಸುಮಾರಿಗೆ ಕಲ್ಯಾಣದ ಚಾಲುಕ್ಯರ ಪತನ. ದೇವಗಿರಿಯಾದನವರ ಆಳ್ವಿಕೆ ಪ್ರಾರಂಭ. ದೆಹಲಿ ಸುಲ್ತಾನರ ಕಣ್ಣು ದಕ್ಷಿಣದ ಸಂಪತ್ತಿನತ್ತ ಹೊರಳಿತು. ದಕ್ಷಿಣ ಪ್ರಾಂತ್ಯಗಳ ಹಿಂದೂ ಸರದಾರರ ಪತನವಾಗ ತೊಡಗಿತ್ತು. ಹೀಗಾಗಿ ಬೀದರ ದೆಹಲಿಯ ಕೈವಶವಾಯಿತು. ೧೩೨೫ರಲ್ಲಿ ಮಹಮ್ಮದ ತುಘಲಕನ ದಾಳಿ ಬೀದರ ಮೇಲೆ ಎರಗಿತ್ತು. ೧೩೪೭ರ ವೇಳೆಗೆ ದಕ್ಷಿಣದಲ್ಲಿ ಬಹಮನಿರಾಜ್ಯದ ಉದಯವಾಯಿತು. ಬಹಮನಿ ಸುಲ್ತಾನರಲ್ಲಿ ಅಗ್ರಗಣ್ಯ ಅಹಮದಶಹನು ಅತ್ಯಂತ ಪ್ರಸಿದ್ಧನು. ಬೀದರನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡ. ಇದು ಬೀದರದ ಸಾಂಸ್ಕೃತಿಕ ಜೀವನದ ಹೊಸ ತಿರವು. ನಗರದ ನವೀಕರಣ ಪ್ರಾರಂಭವಾಯಿತು. ಸುಂದರ ಅರಮನೆ ಭೂಮಿಯ ಮೇಲಿನ ಸ್ವರ್ಗವೆಂದು ಪ್ರಸಿದ್ಧಿಯನ್ನು ಪಡೆದಿತ್ತು. ಬಡವರಿಗೆ ಅಸ್ಪತ್ರೆ, ಧರ್ಮಛತ್ರಗಳು ನಿರ್ಮಾಣವಾದವು. ದೇಶ ವಿದೇಶಗಳಿಂದ ವ್ಯಾಪಾರಸ್ತರನ್ನು ಸೆಳೆದಿತ್ತು. ಇದು ಸೂಫಿ ಸಂತರ ಸಮಾಗಮ ತಾಣವಾಗಿತ್ತು. ಹೀಗಾಗಿ ಬೀದರ ಅಂತಾರಾಷ್ಟ್ರೀಯ ಸ್ಥಾನ ಪಡೆದಿತ್ತು. ಮೂರನೆಯ ಅಮಹದ ಶಹನ ಪ್ರಧಾನ ಮಂತ್ರಿ ಮಹಮ್ಮದ ಗವಾನ ಆಡಳಿತದಲ್ಲಿ ನಿಪುಣ ಧಾರ್ಮಿಕ ಸಹಿಷ್ಣುತೆಯ ವ್ಯಕ್ತಿ; ಶಿಕ್ಷಣ ತಜ್ಞ. ಆದರೂ ಸದಾ ಸರಳ ಜೀವನ ಬಯಸುವ ವ್ಯಕ್ತಿ. ೧೪೭೨ರಲ್ಲಿ ನಗರದಲ್ಲಿ ಮದ್ರಸಾ ನಿರ್ಮಾಣ ಮಾಡಿ ವಿಶ್ವವಿಖ್ಯಾತಿ ಗಳಿಸಿಕೊಂಡನು. ಈ ಮದ್ರಸಾಕ್ಕೆ ಗವಾನ ಮದ್ರಸಾ ಎಂದೇ ಕರೆಯುವ ವಾಡಿಕೆ ಬಿತ್ತು.

ಗವಾನ ಪರ್ಶಿಯಾದ ಗಿಲಾನ್ ಎಂಬ ರಾಜ್ಯದ ಗಿಲಾನ್ ಎಂಬ ಗ್ರಾಮದಲ್ಲಿ ಜನಿಸಿದನು. ಸೂಫಿ ಪಂಥೀಯನಾಗಿದ್ದ ಈತನು ಗಿಲಾನಿನಲ್ಲಿ ರಾಜಕೀಯ ಕ್ಷೋಭೆ ಉಂಟಾದಾಗ ಗಿಲಾನ್ ರಾಜ್ಯವನ್ನು

ತೊರೆದು ಗವಾನ ಚಿಕ್ಕಪ್ಪನೊಂದಿಗೆ ಮಕ್ಕಾ ಸೇರಿದನು. ಆ ಸಮಯದಲ್ಲಿ ಪರ್ಷಿಯಾದ ಮುಜಿಬುಲ್ ಕಿರ್ಮಾನಿ ಎಂಬ ಸೂಫಿ ಪಂಥನು ಬೀದರದಲ್ಲಿ ನೆಲಸಿ ಪ್ರಸಿದ್ಧಿಯನ್ನು ಪಡೆದಿದ್ದನು. ಈತನನ್ನು ಕಾಣಲೆಂದು ಬೀದರಗೆ ಬಂದ ಗವಾನ ಈತನ ವಿದ್ವತ್ತು, ಸುಸಂಸ್ಕೃತತನ, ವರ್ತನೆ ಮತ್ತು ಪ್ರಾಮಾಣಿಕತೆಯಿಂದಾಗಿ ಬಹಮನಿ ಸುಲ್ತಾನ ಎರಡನೆ ಅಲಾವುದ್ದೀನ್‌ನು ತನ್ನ ಮಂತ್ರಿಯನ್ನಾಗಿ ನೇಮಿಸಿದನು. ಅವರ ಭಾಷೆಯಲ್ಲಿ ಅಮೀರ್-ಉಲ್-ಉಮ್ರಾ ಎಂಬ ಪದವಿ ಹುಮಾಯೂನ್ ನಿಜಾಂ ಷಾ(ಉದ್ದೀನ್) ಮೂರನೆಯ ಮಹಮದನ ಕಾಲದಲ್ಲಿ ಇವನು ಪ್ರಧಾನ ಮಂತ್ರಿಯಾದನು.

ವಿಶ್ವವಿಖ್ಯಾತ ಬೀದರದ ಗವಾನನ ಮದ್ರಸಾ ತನ್ನ ಸ್ವಂತ ಹಣದಲ್ಲಿಯೇ ಸ್ಥಾಪಿಸಿದ್ದಾನೆಂದು ಹೇಳಲಾಗಿದೆ. ಒಂದು ಗ್ರಂಥಾಲಯವೂ ವ್ಯವಸ್ಥೆಗೊಳಿಸಿದನು. ಈ ಯುಗದಲ್ಲಿ ಬೀದರದ ಸುವರ್ಣಯುಗ ಆರಂಭವಾಯಿತೆನ್ನಬೇಕು. ವ್ಯಾಪಾರದಲ್ಲಿ ಆಡಳಿತದಲ್ಲಿ, ವಿದ್ಯಾಭ್ಯಾಸದಲ್ಲಿ ವೃದ್ಧಿಗೊಂಡಿತಲ್ಲದೆ ಜಿಲ್ಲೆಯ ಸಂಸ್ಕೃತಿ ಹೊರನಾಡಲ್ಲದೆ ಪರ್ಷಿಯನ್, ರಷ್ಯನ್ ದೇಶಗಳಿಗೆ ಪರಿಚಯಿಸಿ ಆ ದೇಶಗಳ ಸಂಸ್ಕೃತಿ, ಆಡಳಿತ ಅಭ್ಯಾಸ ರೀತಿ ನೀತಿ ಅಲ್ಲಿನ ಪರಂಪರೆಯನ್ನು ಇವರು ಸ್ವೀಕರಿಸಿದರು. ಕನ್ನಡ ಭಾಷೆ, ಸಂಸ್ಕೃತಿ, ಕಲೆ ಹಾಗೂ ಸಾಹಿತ್ಯಗಳ ಬೆಳವಣಿಗೆಯ ವಸಂತಕಾಲವಾಗಿತ್ತು. ಆದರೆ ಪ್ರವರ್ಧಮಾನಕ್ಕೇರಿದ ಸ್ಥಳೀಯ ಸಂಸ್ಕೃತಿಯ ಮೇಲೆ ಕ್ರಮೇಣ ಪರಿಣಾಮ ಉಂಟು ಮಾಡಿತ್ತು.

ಮಹಮ್ಮದ ಗವಾನ ಸ್ವತಃ ಧರ್ಮ, ಸಾಹಿತ್ಯ, ವೈದ್ಯಕೀಯ, ಗಣಿತ, ಹಾಸ್ಯ ಪತ್ರವ್ಯವಹಾರ ಮೊದಲಾದ ವಿಷಯಗಳನ್ನು ಕುರಿತು ಹಲವಾರು ಗ್ರಂಥಗಳನ್ನು ರಚಿಸಿದ್ದಾನೆ. ಅವುಗಳಲ್ಲಿ ಮುಖ್ಯವಾದುದು "ಮನ್ಜಿರುಲ್-ಇನ್-ಷಾ", "ರಿಯಾಜ್-ಉಲ್-ಇನ್‌ಷಾ" ಇತ್ಯಾದಿ. ಗವಾನನನ್ನು ಸಹಪಾಟಿಗಳು ಬೇರೆ ಅಧಿಕಾರಿಗಳು ಹೊಟ್ಟೆಯುರಿದು ಸುಲ್ತಾನನ ಕೈಯಿಂದಲೇ ಮರಣ ದಂಡನೆ ಮಾಡಿಸಿದರು. ಗವಾನನ ಮರಣ ನಂತರ ಆಡಳಿತ ಕುಸಿಯಿತು. ರಾಜ್ಯದಲ್ಲಿ ಮಸುಕು ಆವರಿಸಿತು.

ಈ ಕಾಲಕ್ಕೆ ರಷ್ಯದ ಪ್ರವಾಸಿ ನಿಕೆಟನ್ ಬೀದರಕ್ಕೆ ಸಂದರ್ಶನ ನೀಡಿದ. ಇಡೀ ಹಿಂದುಸ್ತಾನದಲ್ಲಿ ಬೀದರ ಪ್ರಸಿದ್ಧ ನಗರವೆಂದು ಬಣ್ಣಿಸಿದನು. ೧೬೮೭ರಲ್ಲಿ ಗವಾನನ ಕೊಲೆಯಾದ ನಂತರ ಮೊಘಲ ಅರಸ ಔರಂಗಜೇಬ್‌ನ ದಾಳಿ ಈ ಕಡೆ ಧಾವಿಸಿತ್ತು. ಬೀದರ ಮೊಘಲರ ಕೈವಶವಾಯಿತು. ಅಪಾರ ಸಂಪುತ್ತು ಲೂಟಿಯಾಗ ತೊಡಿಗಿತ್ತು.

ಹಿಂದೊಮ್ಮೆ ಬಹಮನಿಯ ಅರಸರ ಕಾಲದಲ್ಲಿ ಬೀದರ ತನ್ನ ಸಂಪತ್ತು ಮತ್ತು ಸಾಂಸ್ಕೃತಿಕ ಹಿರಿಮೆಯಿಂದ ಜಗತ್ತಿನ ಲಕ್ಷಣವನ್ನು ತನ್ನೆಡೆಗೆ ಸೆಳೆದಿತ್ತು. ಜಗತ್ಪ್ರಸಿದ್ಧ ವ್ಯಾಪಾರ ಕೇಂದ್ರವಾಗಿತ್ತು. ಅಂತಹ ಹಿರಿಮೆ ಈಗ ಇಲ್ಲ. ಆದರೂ ಬೀದರನ ಹೆಸರು ದೇಶ ವಿದೇಶಗಳಲ್ಲಿ ಮಾರುಕಟ್ಟೆಯಲ್ಲಿ

ಚಿರಪರಿಚಿತ. ಅದಕ್ಕೆ ಮುಖ್ಯಕಾರಣ ಬೀದರನ ಬಿದರಿ ಕಲೆ. ಇದು ಸ್ಥಳೀಯವಾಗಿ ನಿರ್ಮಾಣವಾಗುತ್ತಿದುದರಿಂದ ಇದಕ್ಕೆ ಬಿದರಿ ವರ್ಕ್ಸ್ ಎಂದು ಹೆಸರು. ಸತುವು ಹಾಗೂ ತಾಮ್ರಗಳ ಲೋಹ ಮಿಶ್ರಣದಿಂದ ತಯಾರಾದ ಕುಶಲ ಕಲಾಕೃತಿಗಳ ಮೋಹಕ, ಸೌಂದರ್ಯಕ್ಕೆ ಮಾರು ಹೋಗುವುದು ಅನಿವಾರ್ಯ. ಒಡವೆಗಳೂ ಇನ್ನೂ ಸೂಕ್ಷ್ಮ. ದೇವತಾ ಮೂರ್ತಿಗಳು, ಮನೆಯಲಂಕಾರಿಕ ವಸ್ತುಗಳು ಈ ಲೋಹದಿಂದ ತಯಾರಿಸುತ್ತಾರೆ. ಪೆಟ್ಟಿಗೆ, ಕೈಗುಂಡಿ, ಹೂದಾನಿ, ಹೂಜಿ, ಮಡಕೆ ದೀಪಾಲಂಕಾರಗಳೂ ಅನೇಕಾನೇಕ. ಇದು ಬೀದರಿನ ಘನತೆ ಹೆಚ್ಚಿಸಿದೆ.

ಬೀದರ ಕೋಟೆ ದಕ್ಷಿಣ ದೇಶಗಳ ಕೋಟೆಗಳಿಗಿಂತ ಭದ್ರ ಹಾಗೂ ಸುಂದರವಾಗಿದೆ. ಅಣದೂರಿನಲ್ಲಿರುವ ಬಹಮನಿ ಸುಲ್ತಾನರ ಗುಂಬಜಗಳ ಹಾಗೂ ಮಹಮ್ಮದ ಗವಾನನ ವಿಶ್ವವಿಖ್ಯಾತ ಬಹಮನಿ ಕಾಲದ ಅನುಪಮ ಕಾಲಸಂಪ್ರತಿ, ಕಲ್ಯಾಣಿ ಚಾಲುಕ್ಯರ ದೇಗುಲಗಳು ಕಲೆಯ ಕಣಜಗಳು. ಶಿವಪುರ, ನಾರಾಯಣಪುರ ಹಾಗೂ ಜಲಸಂಗಿಗಳಲ್ಲಿ ನಿರ್ಮಾಣಗೊಂಡ ದೇಗುಲಗಳ ವೈಭವಶಾಲಿಯಾದ ಕಲೆ ಮೆರೆದದ್ದು ಹೇಳಿ ಕೊಡುತ್ತದೆ. ಜಲಸಂಗಿಯ ಕಲ್ಲೇಶ್ವರ ದೇವಾಲಯ ಒಂದು ಅಪೂರ್ವ ಕಲೆಯ ಬೀಡು. ಹೊಯ್ಸಳ ಕಲೆಗೆ ಚಾಲುಕ್ಯರ ಶೈಲಿ ಪೂರಕ ಶಕ್ತಿ. ಬೀದರನ ಕೋಟೆಯಲ್ಲಿ ಅಳಿದುಳಿದ ತಕ್ತಮಹಲ್, ಸಭಾಸದನ, ಸೋಲಾಖಂಬೆ, ಮಸೀದಿ ಇವು ಇತಿಹಾಸದ ಸ್ಮಾರಕಗಳಲ್ಲಿ ಬಹಮ್ಮನಿ ಬರೀದಶಾಹಿ ಸುಲ್ತಾನರ ವೈಭವ ಕಲಾತ್ಮಕ ಬದುಕಿನ ದರ್ಶನವಾಗಿದೆ. ಒಟ್ಟು ೧೮ ಜನ ಬಹಮನಿ ಅರಸರು ಆಳಿದರು. ತದನಂತರ ಈ ಪ್ರಾಂತ್ಯ ಮೊಘಲರ ಕೈವಶವಾಯಿತು. ಕೆಲಭಾಗ ಮರಾಠರು ಹಿಡಿದುಕೊಂಡಿದರು. ಹೈದರಾಬಾದ ನಿಜಾಮನು ಈ ಕಡೆ ಹಾಯ್ದನು. ದೇಶದಲ್ಲಿ ಬ್ರಿಟಿಷ್ ಆಡಳಿತವೂ ಜಾರಿಗೆ ಬಂತು. ಬ್ರಿಟಿಷ್‌ರ ಆಸರೆ ನಿಜಾಮ ಪಡೆದು ಸುರಕ್ಷಿತವಾಗುಳಿದು ಬೀದರನ ಮೇಲೆ ಹಲ್ಲೆ ಮಾಡಿದನು. ಮರಾಠರು ಶಕ್ತಿ ಬ್ರಿಟಿಷ್‌ರೊಂದಿಗೆ ಹೋರಾಡಲು ಅಶಕ್ತವಾಯಿತು. ಮರಾಠರ ನಿಜಾಮನಿಗೆ ಒಂದಾಗೋಣ ಎಂದು ಕೇಳಿದರೆ ಒಪ್ಪದೆ ಹೋದನು. ಆಂಗ್ಲರೊಡನೆ ಕಾದಾಡುವವರು ಮೈಸೂರಿನ ಹೈದರಾಲಿ, ಟಿಪ್ಪು, ಕಿತ್ತೂರು ರಾಣಿ ಚೆನ್ನಮ್ಮ ಇವರುಗಳು ಬಿಟ್ಟು ಆಂಗ್ಲರ ಗುಲಾಮರಾಗಿ ಎಲ್ಲಾ ಸಾಮಂತ ಸುಲ್ತಾನರಲ್ಲಿ ಒಬ್ಬನಾದ ಹೈದರಾಬಾದ ನಿಜಾಮ ಪ್ರಭುತ್ವಕ್ಕೆ ಬಂದನು. ನಿರಂಕುಶ ಸಾರ್ವಭೌಮತ್ವದ ಆಳ್ವಿಕೆಗೆ ಬೀದರಿನ ಜನರು ತತ್ತರಿಸಿದರು. ಇವರು ಸ್ವಾತಂತ್ರ್ಯಕ್ಕಾಗಿ ಹಂಬಲಿಸಿದರು. ಆ ಆಳಿಕೆ ಸೆಪ್ಟೆಂಬರ್ ೧೭ ೧೯೪೮ರಲ್ಲಿ ಮುಕ್ತಾಯಗೊಂಡಿತು.

**ಬೀದರ ಜಿಲ್ಲೆಯ ಶಾಸನಗಳು**

ಬಸವಕಲ್ಯಾಣ ಸಮೀಪದ ನಾರಾಯಣಪುರದ ಶಿಲಾಶಾಸನವೊಂದು ಬಸವಕಲ್ಯಾಣದ ಕೋಟೆಯಲ್ಲಿದೆ. ಚಾಲುಕ್ಯ ವಿಕ್ರಮಾದಿತ್ಯನ ೧೧೧೭ರಲ್ಲಿ ನಾರಾಯಣಪುರದ ದೇವಾಲಯಕ್ಕೆ ದಾನ ಕೊಟ್ಟ ವಿಷಯವಿದೆ.

ನಾರಾಯಣಪುರ ಕೆರೆಯ ಸಮೀಪದ ಶಾಸನ ೩ನೆಯ ಸೋಮೇಶ್ವರನ ಕಾಲದ್ದು(೧೧೩೨) ಅದರಲ್ಲಿ ನಾರಾಯಣ ಪುರಕ್ಕೆ ದಾನಕೊಟ್ಟ ವಿಷಯ ಬರುತ್ತದೆ.

ರಂಜೋಳ ಗ್ರಾಮದ ವಿಶಾಲವಾದ ಶಿವಾಲಯದ ಶಿಲಾಶಾಸನವೊಂದು ಸುಂದರವಾಗಿ ಕನ್ನಡ ಲಿಪಿಯಲ್ಲಿ ಕೆತ್ತಲ್ಪಟ್ಟಿದ ಅಟ್ಟಳೆ ನಾಡನ್ನು ಆಳಿದ ಸಿಂಧರ ವಿಷಯವಿದೆ. ಗೋರ್ಟಾ ಗ್ರಾಮದ ರಸ್ತೆಬದಿಯಲ್ಲಿ ಬಿದ್ದ ವಿಶಾಲವಾದ ಶಾಸನವೊಂದು ಅಜ್ಞಾನದಿಂದ ಹಾಳಾಗಿ ಹೋದರೂ ಶಿವನ ಸ್ತೋತ್ರದಿಂದ ಆರಂಭವಾಗಿದ್ದು ಗೋರ್ಟಾದ ಮೊದಲಿನ ಹೆಸರು ಗೋರಂಟಿ ಎಂದು ತಿಳಿಯುತ್ತದೆ. ಇದು ಅಗ್ರಹಾರವಾದ ಊರು. ನೃತ್ಯ ಸಂಗೀತದ ವಿಷಯ ಶಾಸನದಿಂದ ತಿಳಿದುಬರುತ್ತದೆ.

೬ನೆಯ ವಿಕ್ರಮಾದಿತ್ಯನ ಹಲವು ಮಹಾಯುದ್ಧಗಳನ್ನು ಮಾಡಿದ ಉಲ್ಲೇಖವಿದೆ. ಶಾಸನದಲ್ಲಿ ಭಲ್ಲುಂಕಿ ಎಂಬತು ನಾಲ್ಕು ಎಂದು ಬರೆಯಲಾಗಿದೆ. ಭಲ್ಲುಂಕಿ ಈಗ ಭಾಲ್ಕಿಯಾಗಿದೆ. ಇದರ ಅಧೀನದಲ್ಲಿ ಎಂಬತ್ತುನಾಲ್ಕು ಹಳ್ಳಿಗಳಿದ್ದವೆಂದು ತಿಳಿದುಬರುತ್ತದೆ. ಬಸವಕಲ್ಯಾಣ ಸಮೀಪವಿರುವ ಹುಲಸೂರಿನ್ನು ಹುಲಚೇರು ಎಂದು ಬರೆಯಲ್ಪಟ್ಟಿದೆ.

ಬಸವ ಕಲ್ಯಾಣದ ಸಂಗ್ರಹಾಲಯದಲ್ಲಿ ಸಣ್ಣ ಸಣ್ಣ ಶಾಸನಗಳಿವೆ. ಇವು ಜೈನರ ಚಟುವಟಿಕೆಯನ್ನು, ಮತ್ತು ರನ್ನನಿಗೆ ಆಶ್ರಯವಿತ್ತ ಅತ್ತಿಮಬ್ಬೆ ತನ್ನ ಕಾಣಿಕೆಯನ್ನು ಸಲ್ಲಿಸಿದ್ದು ತಿಳಿದುಬರುತ್ತದೆ. ಕೋಟೆಯಲ್ಲಿಯ ಶಾಸನ ಚಾಲುಕ್ಯ ರಾಜನಾದ ಜಗದೇಕಮಲ್ಲನಿಗೆ ಸಂಬಂಧಿಸಿದುದ್ದಾಗಿದೆ. ಇಲ್ಲಿ ಮಧುಕೇಶ್ವರ ದೇವಾಲಯವಿತ್ತೆಂದು ತಿಳಿದುಬರುತ್ತದೆ.

ಬೀದರ ಸಮೀಪ ಅಣದೂರು ಗ್ರಾಮದ ಶಿಲಾಲೇಖ ಚಾಲುಕ್ಯ ಎರಡನೆಯ ಜಗದೇಕಮಲ್ಲನ ಕಾಲದ್ದು. ಅಟ್ಟಳೆ ನಾಡು ಆಳಿದ್ದು ಬರ್ಮಯ್ಯ ಆತನ ದಂಡನಾಯಕನೆಂಬ ಸಾಮಂತನ ಕುರಿತಾಗಿದೆ. ಹಾಲಹಳ್ಳಿಯ ಶಾಸನವು ಚಾಲುಕ್ಯ ಭೂಲೋಕ ಮಲ್ಲನ ಕಾಲದ್ದು. ಅಟ್ಟಳೆ ನಾಡು ಆಳುವ ಹಜ್ಜ ಹೆಸರನ್ನು ಹಾಗೂ ಅವನ ಹೆಂಡತಿ ಹಮ್ಮಲದೇವಿಯ ಹೆಸರು ಸಿಗುತ್ತದೆ. ಇದರ ಕಾಲ ೧೧೩೯. ಬೀದರ ಜಿಲ್ಲೆಯ ಮುಚಳಂಬಿ, ಭಾಲ್ಕಿ, ಮೋರಖಂಡಿ, ಮರಕಲ್, ಬನ್ನಳಿ ಹಾಗೂ ಇತರ ಕಡೆಗಳಲ್ಲಿಯ ಶಾಸನಗಳು ಸಿಗುತ್ತವೆ.

**ಬೀದರ ಜಿಲ್ಲೆಯ ಸಂಸ್ಕೃತಿ ಮತ್ತು ಮಹಿಳೆ**

ಯಾವುದೇ ಭಾಷೆ, ಸಂಸ್ಕೃತಿ ಹಾಗೂ ಧರ್ಮ ಉಳಿಯಬೇಕಾದರೆ ಸ್ತ್ರೀಯೇ ಕಾರಣ ಎಂದು ಹೇಳಬಹುದು. ಅದೇ ರೀತಿ ಇತಿಹಾಸ, ರಾಜಕೀಯ ಹಾಗೂ ಸಾಹಿತ್ಯದ ಮೇಲೆ ತನ್ನ ಪ್ರಭಾವವನ್ನು ಬೀರಿ ಯುಗ ಯುಗಗಳಿಂದಲೂ ನವಚೇತನ ಶಕ್ತಿಯಾಗಿದ್ದಾಳೆ ಸ್ತ್ರೀ.

ರಾಜನ ರಾಣಿಯರು ಪತಿಯೊಂದಿಗೆ ಕಾದು ಮಡಿದವರು ನಂದಾದೀಪವಾಗಿ ಉಳಿದಿದ್ದಾರೆ. ಒಂದನೆಯ ಪುಲಕೇಶಿಯೊಂದಿಗೆ ಆತನ ಪಟ್ಟಮಹಿಷಿ ಜಯ ಸಾಧಿಸಿದ್ದಾಳೆ. ಸಾಮ್ರಾಜ್ಞೆಯರಾದ ಲೋಕ ಮಹಾದೇವಿ, ತ್ರೈಲೋಕ ಮಹಾದೇವಿ ತಮ್ಮ ಚಾಲುಕ್ಯ ರಾಜೇಶ್ವರನೊಂದಿಗೆ ಭಾಗವಹಿಸಿ ಗೆಲುವಿಗೆ ಕಾರಣರಾಗಿದ್ದಾರೆ. ಕಾಕತೀಯ ರುದ್ರಮಹಾದೇವಿಯು ಬೀದರನ್ನು ವಶಮಾಡಿಕೊಂಡು ಆಳಿದ್ದಾಳೆ. ಬಿಜ್ಜಳ ದೇವಿಯು ದೊರೆಯೊಂದಿಗೆ ಭಾಗವಹಿಸಿ ವಿಜಯಿಯಾಗಿದ್ದಾಳೆ. ಇದರ ನಿಮಿತ್ಯವಾಗಿಯೇ ಆಕೆಯನ್ನು ರಾಯಚೂರಿನ ಮಾನ್ವಿ ಪ್ರಾಂತ್ಯಕ್ಕೆ ಆಡಳಿತದ ಸೂತ್ರಧಾರಿಯಳನ್ನಾಗಿ ನೇಮಿಸಲಾಗಿತ್ತು. ರಾಣಿ ಸವ್ವಲಾದೇವಿ ತಲಕಾಡು ಆಳುತ್ತಿದ್ದಾಗ ಮಂಗಳವೇಡೆಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಡಳಿತ ನಿರ್ಮಿಸಿದ ಸಂಗತಿ ಬಿಲ್ಹಣನ ವಿಕ್ರಮಾಂಕದೇವ ಚರಿತ್ರೆಯಲ್ಲಿ ಉಲ್ಲೇಖವಿದೆ.

ತಾರೀಖ್ ಬರೀದ ಸುಲ್ತಾನನ ರಾಣಿಯು ತನ್ನ ಅದ್ವಿತೀಯ ರಾಜ ನೈಪುಣ್ಯದಿಂದ ವಿಶೇಷ ಸಹಾಯಕಳಾಗಿದ್ದಾಳೆಂಬ ಸಂಗತಿ ತಿಳಿದುಬರುತ್ತದೆ. ಗೋರ್ಟಾ ಹಾಗೂ ಮುಚಳಂಬಿಯಲ್ಲಿ ಮಹಾಸತಿಯರು ಕಾಣುತ್ತೇವೆ. ಕನ್ನಡ ಸಾಹಿತ್ಯದ ಮಹಿಳಾ ಜ್ಯೋತಿ ಅಕ್ಕಮಹಾದೇವಿ ಬೀದರ ಜಿಲ್ಲೆಯ ಅಷ್ಟೆಯಲ್ಲ, ಇಡೀ ಕರ್ನಾಟಕದಲ್ಲಿಯೇ ಪ್ರಥಮ ಕವಯತ್ರಿ ಎನಿಸಿದ್ದಾಳೆ, ಮುಕ್ತಾಯಕ್ಕ, ಅಕ್ಕನಾಗಮ್ಮ, ನಿಲಾಂಬಿಕೆ, ಗಂಗಾಂಬಿಕೆ ಹಾಗೂ ಲಕ್ಕಮ್ಮ ಇವರೆಲ್ಲರನ್ನು ಬೀದರ ಜಿಲ್ಲೆ ಕನ್ನಡ ಸಾಹಿತ್ಯಕ್ಕೆ ಕೊಟ್ಟಿತ್ತು. ಇನ್ನೊಬ್ಬ ಶರಣೆ ಜಯದೇವಿ ತಾಯಿ ಲಿಗಾಡೆಯವರು ಈ ಪ್ರಾಂತೀಯರೆಂದೇ ದುಡಿದಿದ್ದಾರೆ. ಸೊಲ್ಲಾಪುರ ಬೀದರಪ್ರಾಂತ್ಯಕ್ಕೆ ಸೇರಿಸಬೇಕೆಂಬುದು ಮಹಾ ಹಂಬಲ ಅವರದಾಗಿತ್ತು.

**ಭುಲಾಯಿ ಪದಹಾಡುವುದು :** ಈ ಜಿಲ್ಲೆಯ ವಿಶೇಷ. ನಾಗರ ಪಂಚಮಿಯ ಹಬ್ಬದಲ್ಲಿ ಹೆಂಗಸರೆಲ್ಲ ವೃತ್ತಾಕಾರದಲ್ಲಿ ನಿಂತು ಕೈ ಕೈ ಹಿಡಿದು ಹಾಡು ಹೇಳುತ್ತಾ ತಿರುಗುತ್ತಾರೆ. ಇಬ್ಬರು ಮೊದಲು ಹಾಡು ಹಾಡುತ್ತಾ ಕೈ ನೆಲಕ್ಕೆ ಹಚ್ಚಿ ಶುರು ಮಾಡಿ ಎದ್ದರೆ ಹಿಂದಿನವರು ಅವರೂ ಕೈ ನೆಲಕ್ಕೆ ಹಚ್ಚಿಯೇ ಶುರು ಮಾಡಬೇಕೆಂಬುದು ಭುಲಾಯಿ ಹಾಡಿನ ಪದ್ಧತಿ. ಹಿಂದೆ ಇದು ಸುಮಾರು ದಿನಗಳ ಕಾಲ ನಡೆಯುತ್ತಿತ್ತು. ಈಗ ಅದು ಕೇವಲ ಎರಡೇ ದಿವಸ ಆಡುವುದು ಜಾರಿಯಲ್ಲಿದೆ. ಅದೂ ಇಷ್ಟವುಳ್ಳವರು.

ಆಧುನಿಕರಲ್ಲಿ ಪ್ರೇಮಾಸಿರ್ಸೆ, ವಿಜಯಶ್ರೀ ಸಬರದ, ಗಂಗಾಂಬಿಕೆ, ಯಶೋಧಮ್ಮ ಸಿದಬಟ್ಟೆ, ಭಾರತಿ ವಸ್ತ್ರದ್, ನೀಲಾ ಕೆ., ದಯಮಣಿ, ಸಾವಿತ್ರಿ ಮರೂರಕರ್, ಸಾಧನ ರಂಜೋಳಕರ್, ಇಂದುಮತಿ ಬಂಡಿ, ಉಜ್ವಲಾ ಇವರಲ್ಲದೆ ಉಮಾದೇವಿ, ಟಿ.ಎಸ್.ರಶ್ಮಿ ಮುಂತಾದವರು ಉದಯನ್ಮುಖ ಭುಲಾಯಿ ಹಾಡಿನ ಬರೆಹಗಾರರಾಗಿದ್ದಾರೆ.

**ಸಂಗೀತ :** ಕಲ್ಯಾಣ ಚಾಲುಕ್ಯರ ಆರನೆಯ ವಿಕ್ರಮಾದಿತ್ಯನ ರಾಣಿಯರಾದ ಚಂದಲದೇವಿ ಮತ್ತು ಕೇಚಲಾದೇವಿಯವರು ನೃತ್ಯ ಕಲೆಯಲ್ಲಿ ನಿಪುಣತೆ ಹೊಂದಿದರು. ಇವರು ಅಭಿನವ ಶಾರದೆ ಎಂಬ

ಬಿರುದ್ದು ಪಡೆದವರು. ದಂಡಾಧಿಪತಿ ದೇವಿಗಾರನ ಪತ್ನಿ ರಬ್ಬಾದೇವಿ 'ವೀಣಾವಾದ್ಯ' ಪ್ರತಿಭಾ ಸರಸ್ವತಿ ಎಂಬ ಬಿರುದು ಪಡೆದಿದ್ದಾಳೆ. ಜಯಲಕ್ಷ್ಮಿ ಕುಲಕರ್ಣಿಯವರು ಸಂಗೀತ ವಿದ್ವತ್ ಮುಗಿಸಿ ಆಕಾಶವಾಣಿ ಕಲಾವಿದೆಯಾಗಿದ್ದಾರೆ.

ವಿದ್ಯೆ : ಜಲಸಂಗಿಯ ಕಲ್ಲೇಶ್ವರ ದೇವಾಲಯದಲ್ಲಿರುವ ಶಾಸನ ಬರೆಯುತ್ತಿರುವ ಮಹಿಳೆಯ ಶಿಲ್ಪ ಕಲಾಕೃತಿಯಿಂದ ತಿಳಿದುಬರುವ ಅಂಶವೆಂದರೆ ಸಾವಿರಾರು ವರ್ಷಗಳ ಹಿಂದೆಯೇ ಮಹಿಳೆಯರು ಅಕ್ಷರಸ್ತರಾಗಿದ್ದರು ಎಂದು ತಿಳಿದುಬರುತ್ತದೆ. ಈಗ ಪ್ರಾಥಮಿಕ ಶಾಲೆಯಿಂದ ವಿಶ್ವವಿದ್ಯಾಲಯದವರೆಗೆ ವಿದ್ಯಾರ್ಥಿನೀಯರೇ ಹೆಚ್ಚಿನ ಅಂಕಗಳು ಪಡೆಯುತ್ತಿದ್ದಾರೆ. ಜ್ಯೋತಿ ಬಿರಾದರ,ಬಿ.ಎ. ಪ್ರೀತಿ ಪಾಟೀಲ್ ಬಿ.ಎಸ್.ಸಿ, ಚನ್ನಬಸವೇಶ್ವರ ಕಾಲೇಜು, ಭಾಲ್ಕಿಯ ಸವಿತಾ ದಾಡಗೆಯವರು ರ್‍ಯಾಂಕ್ ಗಳಿಸಿದುದು ಗಮನಾರ್ಹ. ವಿಜಯಶ್ರೀ ಸಬರದ, ಜಯಶ್ರೀ ಸಿದ್ನಾಳ, ಪ್ರೇಮ ಸಿರ್ಸೆ, ನಾಗವನಜಾ ಮುಂತಾದವರು ಪಿಎಚ್.ಡಿ.ಪದವಿ ಪಡೆದಿರುತ್ತಾರೆ.

ಸಾಮಾಜಿಕ ಕಾರ್ಯಗಳು : ಬೀದರ ಜಿಲ್ಲೆಯಲ್ಲಿ ಅನೇಕ ಮಹಿಳಾ ಮಂಡಳಗಳು ಹುಟ್ಟಿಕೊಂಡಿವೆ. ಇವುಗಳಿಗೆ ಆಶ್ರಯವಾಗಿ ಮಹಿಳಾ ಸಮಖ್ಯ ಕರ್ನಾಟಕ ಬೀದರ ಘಟಕದಲ್ಲಿ ಜಿಲ್ಲಾ ಸಂಯೋಜಕರಾಗಿ ಶ್ರೀಮತಿ ಉಮಾ ಒಡೆಯರ್ ಸಂಪನ್ಮೂಲ ವ್ಯಕ್ತಿಯಾಗಿ ವಜ್ರಮಣಿಯವರು ಸಹಾಯಕ ಸಂಪನ್ಮೂಲ ವ್ಯಕ್ತಿಯಾಗಿ ಕಾರ್ಯನಿರತರಾಗಿದ್ದಾರೆ. ಈ ಸಂಸ್ಥೆ ಮಹಿಳಾ ಮಂಡಳಗಳಿಗೆ ಆಸರೆ ನೀಡುತ್ತಲಿದೆ. ಯೇಸು ನಿಲಯ ಭಾಲ್ಕಿಯಲ್ಲಿ ಆರ್ಬಿಟ್ ಸಂಸ್ಥೆಯು ಅನೇಕ ಮಹಿಳಾ ಮಂಡಳಗಳಿಗೆ ಆಸರೆ ನೀಡುತ್ತಲಿದೆ. ಫಾ. ವಿಕ್ಟರ್ ಮಚಾಡೊ, ಸಂತೋಷ ಡಯಾಸ್ ಮುಖ್ಯರಾಗಿದ್ದಾರೆ. ಇಲ್ಲಿ ಮಹಿಳೆಯರ ಅಭಿವೃದ್ಧಿಗಾಗಿ ಪುರುಷರ ಸೇವೆ ಗಣನೀಯ. ಶಕುಂತಲಾ ತಂಬಾಕೆ ವಕೀಲರಾಗಿ ಸೇವೆಯಲ್ಲಿದ್ದಾರೆ. ಕಾಲೇಜು ಪ್ರಾಧ್ಯಾಪಕರೂ, ಪ್ರಾಚಾರ್ಯರಾಗಿ ಶ್ರೀಮತಿ ಲೀಲಾವತಿ ಚಾಕೊತೆ ನಿವೃತ್ತಗೊಂಡಿದ್ದಾರೆ. ಪೋಲಿಸ್ ಇಲಾಖೆಯಲ್ಲಿಯೂ ಮಹಿಳೆಯರು ಮುಂದಿದ್ದಾರೆ.

ರಾಜಕೀಯ : ಅನ್ನಪೂರ್ಣಬಾಯಿ ರಗಟೆ, ಬಸವಕಲ್ಯಾಣ ಶಾಸಕಿ ಶಿವಕಾಂತಾ ಚತುರೆ, ಮಹಿಳಾ ಮತ್ತು ಮಕ್ಕ ಕಲ್ಯಾಣ ಮಂತ್ರಿ, ರಾಜೇಶ್ವರಿಸ್ವಾಮಿ ಜಿಲ್ಲಾಪಂಚಾಯತ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ. ಈ ಭಾಗದ ಮಹಿಳೆಯನ್ನು ಹೊಗಳುವ ಒಂದು ಜಾನಪದ ಜೀವಂತವಾಗಿದೆ.

ಧರಿ ಬಿದರ ಸ್ತ್ರೀಧೀರ ಮಾಧುರಿ
ಕೊಳ್ಳಾಗ ಕಲ್ಲಾ ಉಡ್ಯಾಣ ಪುರಾಣ
ಧರಿ ಮ್ಯಾಗಿನ ಹೆಣ್ಣೆ ಪಡವಾಡೀ, ಆದರ
ಗುಡ್ಡದ ಮ್ಯಾಗಿನ ಹೆಣ್ಣು ಮಣಿಯ್ಕೆ

**ವಾಸ್ತುಶಿಲ್ಪ :** ಬೀದರ ಜಿಲ್ಲೆಯ ವಾಸ್ತುಶಿಲ್ಪ ಚರಿತ್ರೆಯು ಇಲ್ಲಿಯ ಕೋಟೆಕೊತ್ತಲಗಳು ರಚನೆಯಲ್ಲಿ ಮಂದಿರ ಮಸೀದಿಗಳ ನಿರ್ಮಾಣದಲ್ಲಿ, ಅರಮನೆ ಗುರುಮನೆಗಳ ವಾಸ್ತುಶಿಲ್ಪವು ಒಂದು ಜನಾಂಗದ ಅಭಿರುಚಿಯ ಚರಿತ್ರೆಯಾಗಿರುವುದರಿಂದ ಇಲ್ಲಿ ಆಯಾ ಕಾಲದ ಶಿಲ್ಪವು ಇತಿಹಾಸಕ್ಕನುಗಣವಾಗಿ ನಿಂತಿವೆ. ಬಸವಕಲ್ಯಾಣದ ಕೋಟೆ ಚಾಲುಕ್ಯರ ಕಾಲದ್ದು, ೧೨ ಅಡಿ ಎತ್ತರ ೬೯ ಸೆ.ಮಿ.ಉದ್ದವಿರುವ ನವಗದ ತೋಫನ್ನು ಎತ್ತರದ ಕಟ್ಟದ ಮೇಲೆ ಇರಿಸಿರುವುದು ಶ್ಲಾಘನೀಯ.

ಪೀರನ ದರ್ಗಾ, ಗೋರಿಗಳು, ಶಿವಶರಣರ ಗುಹೆಗಳು, ಕಂಬಳಿಮಠ, ಗಚ್ಚಿನ ಮಠ, ಹುಲಕುಂಟಿ ಸದಾನಂದ ಸ್ವಾಮಿ ಮಠ, ಬಸವಣ್ಣನ ಗುಡಿ, ಅನುಭವ ಮಂಟಪ, ನಾರಾಯಣಪುರ, ಶಿವಪುರ, ಗೋರಟಾ, ಜಲಸಂಗಿ ಮುಂತಾದ ಕಡೆಗಳಲ್ಲಿ ಗುಡಿ ಗುಂಡಾರಗಳು, ಕಾಣಸಿಗುತ್ತವೆ.

ಬೀದರ ಕೋಟೆ ನಾಲ್ಕು ಕಿ.ಮೀ.ಸುತ್ತಳತೆಯನ್ನು ಹೊಂದಿದೆ. ಕೋಟೆಯ ಮಧ್ಯ ಚೌಬೇರಾ ಗವಾನನ ಮದ್ರಸಾ. ಇದು ಪರ್ಷಿಯನ್ ಮಾದರಿಯದು. ಅಂದು ಇದು ವಿಶ್ವವಿದ್ಯಾಲಯದ ಮನ್ನಣೆ ಪಡೆದಿತ್ತು. ರಂಗೀನ್ ಮಹಲ್ ಅಲಂಕಾರಗಳಿಂದ ಕೂಡಿದ್ದು, ಮರದ ಸುಂದರವಾದ ನಾಜೂಕಿನ ಕೆತ್ತನೆಗಳಿಂದ ಆವೃತಗೊಂಡಿದೆ. ಮುತ್ತಿನ ಚಿಪ್ಪುಗಳಿಂದ ಕೂಡಿದೆ.

ಮೊಘಲ ಆಳ್ವಿಕೆಯ ನಿರ್ಮಾಣಗೊಂಡ ಹಲವು ವಸ್ತುಗಳೆಂದರೆ,ಸಿಂಧ ಅರಸನಾದ ಕುಮಾರಹೆಮ್ಮಡಿಯ ಭಾಲ್ಕಿಯ ಕೋಟೆ, ಭಾತಂಬ್ರಾ ಬೊಮ್ಮಣ್ಣ ದಂಡನಾಯಕನ ಕೋಟೆ, ಹುಲಸೂರು ಕೋಟೆ, ಹುಮನಾಬಾದ ಕೋಟೆ ಮುಂತಾದವು. ಬೀದರಿನ ನರಸಿಂಗ ಝುರಣಿ, ಹುಮನಾಬಾದ ಬಸವಕಲ್ಯಾಣ, ಔರಾದ, ಭಾಲ್ಕಿ, ಚಿಟುಗಪ್ಪಾ ಮೊದಲಾದ ಊರುಗಳಲ್ಲಿ ಹಳೆಯ ಮಸೀದಿಗಳು ಕಾಣಸಿಗುತ್ತವೆ. ಹುಮನಾಬಾದನ ವೀರಭದ್ರೇಶ್ವರ ದೇವಾಲಯ ಬೀದರನ ಪ್ರಾಚೀನ ದೇವಾಲಯಗಳಲೊಂದು. ಕರಕನಹಳ್ಳಿಯ ಬಕ್ಕಪ್ರಭು ಮಠ, ಚಾಂಗಲೇರದ ವೀರಭದ್ರೇಶ್ವರ ದೇವಾಲಯ, ಮಾಣಿಕ ನಗರದ ಮಾಣಿಕಪ್ರಭು ದೇವಾಲಯಗಳು ಜಿಲ್ಲೆಯ ವಾಸ್ತುಶಿಲ್ಪಕ್ಕೆ ಸಾಕ್ಷಿಯಾಗಿ ನಿಂತಿವೆ.

**ಜಾನಪದ :** ಬೀದರ ಜಿಲ್ಲೆಯಲ್ಲಿ ಗೊಂದಲಿಗರು, ಭೂತೇರು, ಪುರವಂತರು ಮುಂತಾದ ಧಾರ್ಮಿಕ ಕಲಾ ತಂಡಗಳು ಬಹುರೂಪಿಗಳಂತಹ ವೃತ್ತಿಕಲಾವಿದರು ಮೋಹರಂ ಹಬ್ಬ ಹುಲಿಕುಣಿತ ಅಲಾಯಿ ಕುಣಿತ, ಪೈತ್ರಿಕುಣಿತ ಮುಂತಾದ ಕುಣಿತಗಳು ದೊಡ್ಡಾಟ, ಡಪ್ಪಿನಾಟ ಇವುಗಳು ಜಾನಪದೀಯ ರಂಗ ಪ್ರಕಾರಗಳು. ಭಾಲ್ಕಿ ತಾಲೂಕಿನ ಭಾತಂಬ್ರಾದ ಶ್ರೀ ವಿಠಲಗೊಂದಲಿಗರ ಮೇಳ ಪ್ರಮುಖವಾದುದು. ಇವರಿಗೆ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ೧೯೪೪ರ ಪ್ರಶಸ್ತಿ ನೀಡಿ ಗೌರವಿಸಲಾಗಿದೆ.

ಹುಮನಾಬಾದನ ಮಾಣಿಕ ನಗರದ ಗೊಂದಲಿಗರೂ ಪ್ರಶಸ್ತಿ ಪಡೆದಿದ್ದಾರೆ. ಗುಂಡಪ್ಪಾ ಅಲ್ಲುರ್, ಗುಂಡಪ್ಪಾ ಹಳ್ಳಿಖೇಡ, ಮಾಣಿಕ, ಸಿದ್ಧರಾಮ ಚಿಟಗುಪ್ಪಾ, ಹುಮನಾಬಾದನ ಪಾಂಡುರಂಗ, ರಾಜೇಶ್ವರದ ಮಾಣಿಕ ಜಿಲ್ಲೆಯ ಇನ್ನುಳಿದ ಗೋಂದಳ ಕಲಾವಿದರಿದ್ದಾರೆ.

ಬೀದರ ಜಿಲ್ಲೆಯ ಭೂತೇರ ಯಾವ ಒಂದು ಜಾತಿಗೆ ಸೀಮಿತರಲ್ಲ. ಇವರು ಎಣ್ಣೆಯಿಂದ ತೊಯ್ದ ಕಮಟು ದೊಡ್ಡ ಜುಬ್ಬಾ ಧರಿಸಿರುತ್ತಾರೆ. ಕೊರಳಿಗೆ ಕವಡೆ, ಕೈಯಲ್ಲಿ ದೀವಟಿಗೆ, ದೇವಿ ಚಿತ್ರವುಳ್ಳ ತಗಡುಸರ, ಕಿರುಗೆಜ್ಜೆ, ತೆಲೆಜಡೆ, ಇನ್ನೊಂದು ಕೈಗೆ ಚೌಡಕಿ ಹಿಡಿದಿರುತ್ತಾರೆ. ಹೆಚ್ಚಾಗಿ ಬಿದರ ನಗರ ಸುತ್ತಲಿದ್ದಾರೆ. ಮನ್ನಾಎಕ್ಕೆಳ್ಳಿಯ ಮಾಣಿಕ, ಅಣದೂರದ ಪಾರಮ್ಮಾ ಮತ್ತು ಅಂಬವ್ವಾ, ಮಂದಕನಳ್ಳಿಯ ಪ್ರಭು, ದುಬಲಗುಂಡಿಯ ಮನೋಹರ ಮುಂತಾದವರು ಪ್ರಸಿದ್ಧರು.

**ಪುರುವಂತರು :** ಹಬ್ಬ ಉತ್ಸವ, ಮದುವೆಗಳಲ್ಲಿ ಕುಣಿಯುತ್ತಾರೆ. ಕೆನ್ನೆಗೆ ಒಂದು ಅಡಿಯಷ್ಟು ಉದ್ದವಿರುವ ಚೂಪಾದ ದಬ್ಬಣ(ಒಂದು ಚೂಪಾದ ಸೂಜಿಗಿಂತಲೂ ದೊಡ್ಡದಾಗಿರುತ್ತದೆ). ಇವರು ವಿರಾವೇಶದಿಂದ ಕುಣಿಯುತ್ತಾ 'ಕರ್ಣಿಸೋ ಕರ್ಣಿಸೋ' ಎನ್ನುತ್ತ ಕೈಮಾಡಿ ಹೇಳುತ್ತಾನೆ. ಸುತ್ತನಿಂತ ಜನರಲ್ಲಿ 'ಓಂ ನಮಃ ಶಿವಾ' ಎಂದು ಹೇಳುತ್ತಾರೆ.

**ಬಹುರೂಪಿಗಳು :** ಇವರಿಗೆ ಜಾತಗಾರರೆಂದು ಕರೆಯುತ್ತಾರೆ. ಇವರು ಭಸ್ಮಾಸುರ, ನರಕಾಸುರ ಹರಿಶ್ಚಂದ್ರ, ವಿಶ್ವಾಮಿತ್ರ ಹೀಗೆ ಪೌರಾಣಿಕ ಪುರುಷರ ವೇಶದಲ್ಲಿಹಾಡುತ್ತಾ ತಕ್ಕ ಪಾತ್ರದಲ್ಲಿರುತ್ತಾರೆ.

**ಬಯಲಾಟ :** ಬೀದರ ಜಿಲ್ಲೆಯಲ್ಲಿ ಕೊಳಾರದ ಇಮಾಮಸಾಬ್ ತಂದೆ ಪೀರಸಾಬ್ ಇವರು ದ್ರೌಪದಿ ವಸ್ತ್ರಾಪಹರಣ, ಕನಕಾಂಗಿ, ಐರಾವಣ ಮೈರಾವಣ ಎಂದು ದೊಡ್ಡಾಟಗಳು ಬರೆದಿದ್ದಾರೆ. ಇವರಿಗೆ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ಪ್ರಶಸ್ತಿ ೧೯೮೫ರಲ್ಲಿ ನೀಡಿ ಗೌರವಿಸಲಾಗಿದೆ.

**ಕೋಲಾಟ :** ಕೋಲಾಟವು ಜನಪ್ರಿಯವಾದ ಹಳ್ಳಿಯ ಗಂಡುಕಲೆಯಾಗಿತ್ತು. ಸಂಗೀತ, ಸಾಹಿತ್ಯ ಹಾಗೂ ನೃತ್ಯ ಹೀಗೆ ಸಮ್ಮಿಶ್ರಣ ಕೂಟವಿದ್ದಿತ್ತು. ಆದರೆ ಲಂಬಾಣಿ ಜನರಲ್ಲಿ ಪ್ರತ್ಯೇಕ ಸ್ತ್ರೀಯರೇ ಕೋಲಾಟ ಆಡುತ್ತಾರೆ. ಇದು ಇನ್ನು ಆಡುತ್ತಾರೆಂಬುದು ವಿಶೇಷ. ಹೋಳಿ ಹುಣ್ಣಿಮೆಗೆ ತಪ್ಪದೆ ಆಡುತ್ತಾರೆ.

ಹಣಮಂತಪ್ಪ ಬಿರಾದಾರ ಕೋಸಮ್, ವಿಶ್ವನಾಥ ಮೇತ್ರೆ ಮದಕಟ್ಟೆ, ರುದ್ರಪ್ಪಾ ಕುರ್ನೆ, ಕುರಬಖೇಳಗಿ, ಮನೋಹರ ಕೀಕುಳಗೆ ದುಬಲಗುಂಡಿ ಕಲ್ಲಪ್ಪಾ ಭಾಲ್ಕಿ, ಭೀಮಣ್ಣಾ ಕಟ್ಟೆತೂಗಾಂವ್, ಮಾಣಿಕಪ್ಪ ಸಂಗೊಳಗಿ ಪ್ರತಾಪನಗರ, ನರಸಪ್ಪ ಹಡಪದ ಕಮಲನಗರ, ದೇವೇಂದ್ರಪ್ಪ ಸುತಾರ ಧನ್ನೂರು, ತುಕಾರಾಮ್ ಕಮಲಾಸುರ್ ಔರಾದ, ಅರ್ಜುನ್ ಸೆಂಬೆಳ್ಳಿ ಮುಂತಾದವರು ಬೀದರ ಜಿಲ್ಲೆಯ ಕೋಲಾಟ ಕಲಾವಿದರು. ಇದರ ಮೇಲೆ ಡಾ.ಸೋಮನಾಥ ನುಚ್ಚಾ ಅವರು ವಿಶೇಷ ಅಧ್ಯಯನ ಕೈಗೊಂಡು ಪಿಎಚ್.ಡಿ.ಪದವಿ ಪಡೆದು ಕೊಂಡಿದ್ದಾರೆ.

## ಬೀದರ ಜಿಲ್ಲೆಯಲ್ಲಿ ಲಿಂಗಾಯತ ಮಠಗಳು

ಬೀದರ ಜಿಲ್ಲೆ ಲಿಂಗಾಯತ ಜಿಲ್ಲೆಯನ್ನುವಷ್ಟರ ಮಟ್ಟಿಗೆ ಇಲ್ಲಿ ಲಿಂಗಾಯತರೇ ಬಹುಮಂದಿ, ಅವರ ಮುಖ್ಯ ಕಸುಬು ಒಕ್ಕಲುತನ. ಮುಂದಿನ ಪೀಳಿಗೆಯು ಪೇಟೆಯ ವ್ಯವಹಾರದತ್ತ ಕಣ್ಣು ಹರಿಸುತಲಿದ್ದಾರೆ.

ಭಾಲ್ಕಿ ತಾಲೂಕಿನ ಖಟಕ ಚಿಂತೋಳಿಯಲ್ಲಿ ಹುಲಿಕುಂಟಿ ಮಠವಿದೆ. ಮಠಾಧಿಪತಿ ಶಿವಾನಂದಸ್ವಾಮಿ, ಭಾತಂಬ್ರಾ ವಿರಕ್ತಮಠವಿದೆ ಮಠಾಧಿಪತಿ ಶಿವಯೋಗೀಶ್ವರ ಸ್ವಾಮಿಗಳು. ಭಾಲ್ಕಿಯಲ್ಲಿ ವಿರಕ್ತಮಠ, ಮಹಾಂತೇಶ್ವರ ಮಠ, ಉರಿಲಿಂಗ ಪೆದ್ದಿಯಮಠ ಮುಂತಾದ ಮಠಗಳಿವೆ. ಇಲ್ಲಿನ ಹಿರೇಮಠ ಸಂಸ್ಥಾನ ಲಿಂಗಾಯತರ ಜೀವಾಳ, ಇದು ೧೫೦ ಎಕರೆ ಭೂಮಿ ಹೊಂದಿದೆ. ಇದರ ಶಾಖಾ ಮಠಗಳು ಮೋರ್ಗಿ, ಕಾರಾಮುಂಗಿ, ಮಾವಿನಹಳ್ಳಿ, ಬಮ್ಮೆಪುರ, ಬೋರೋಳ, ಗಾದಗಿ, ಕಮಾಲನಗರ, ಶಾಹಪುರ್(ಅಂಧ್ರ) ಮುಂತಾದ ಹಿರೇಮಠ ಸಂಸ್ಥಾನ ಸುಮಾರು ೧೪ನೇ ಶತಮಾನದಷ್ಟು ಹಳೆಯದು ಎಂದು ಹೇಳಬಹುದು. ಧನ್ನೂರು ಜಾಂತಿ, ಗಣಜಿ, ಬ್ಯಾಲಹಳ್ಳಿ, ವರವಟಿ, ಗೌಡಗಾಂವ್, ಡೋಣಗಾಪುರ, ಲಖನಗಾಂವ್, ಸಾಯಗಾಂವ್ ಮೆಹಕರ ಮುಂತಾದ ಕಡೆಗಳಲ್ಲಿ ಲಿಂಗಾಯತ ಮಠಗಳಿವೆ. ಔರಾದ ತಾಲೂಕಿನ ಕುಶನೂರು(ಠಾಣಾ) ವಿರಕ್ತಮಠವಿದೆ. ಇದು ೧೪ನೇ ಶತಮಾನದಲ್ಲಿ ಎಡೆಯೂರು ಸಿದ್ಧಲಿಂಗೇಶ್ವರರು ಸ್ಥಾಪಿಸಿದ್ದಾರೆಂದು ಈಗಿನ ಶ್ರೀಗಳಾದ ನಿರಂಜನ ಸ್ವಾಮಿಗಳು ಅಭಿಪ್ರಾಯ. ಈ ಮಠ ಏಳು ಎಕರೆ ಜಮೀನು ಹೊಂದಿದೆ. ಶಿವಲಂಗೇಶ್ವರ ಸಂಸ್ಥಾನ ಮಠವಿದೆ. ಇದು ೫೦ ಎಕರೆ ಭೂಮಿಯನ್ನು ಹೊಂದಿದೆ. ಕಮಾಲನಗರ, ಸಂಗಮ, ಬೆಡಕುಂದಾ, ಕುಶನೂರು, ಚಿಕ್ಕಲೂರು, ವಡಗಾಂವ್, ಕೌಠಾ, ಜೊನ್ನಿಕೇರಿ, ಹಾವಾಗಿ, ಡೊಣಗಾಂವ್ ಹೆಡಗಾಪುರ, ಮುಧೋಳ ಮತ್ತು ಸಂತಪೂರಗಳಲ್ಲಿ ಲಿಂಗಾಯತ ಮಠಗಳಿವೆ.

ಬೀರದನ ನಾವದೇಗೆರಿ, ಮಡಿವಾಳೇಶ್ವರ ಮಠ, ಗುನ್ನಾಳ್ಳಿಯ ವಿರಕ್ತಮಠ, ಲಾಡಗೇರಿಯ ರುದ್ರಮುನಿಸ್ವಾಮಿಗಳ ಮಠ, ಚಿದ್ರಿಯ ಈರಂತ ಮಠ, ಮುಪ್ಪೈನ ಮಠ, ಯದಲಾಪುರದ ಶಿವಾಚಾರ್ಯ ಸಂಸ್ಥಾನ ಮಠ, ಹಳೆಂಬರದ ಹೆಂಡಿಮಠ ಮತ್ತು ಮಾಲಿಮಠ, ಕಮಠಾಣದ ಗುರುಸ್ಥಲದ ಮಠ, ಬಗದಾಲದ ವಿರಕ್ತಮಠ, ಹುಮನಾಬಾದ ತಾಲೂಕಿನ ಬಸವತೀರ್ಥಮಠ, ಮುರುಘಮಠ, ಕೆಂಪಯ್ಯನವರ ಮಠ, ಬಸವತೀರ್ಥ ಮಠವು, ೧೨ನೆಯ ಶತಮಾನದ ವಿರಕ್ತಮಠವಾಗಿದೆ. ದುಬಲಗುಂಡಿಯ ಕುಂಬಾರಗೇರಿ ಮಠ, ಹುಡುಗಿಯ ಕರಿಬಸವೇಶ್ವರ ಮಠ, ಇಟಾಗದ ವಿರಕ್ತಮಠ, ಚಾಂಗಲೇರದ ಮಠ, ಕಲ್ಲೂರದ ಹಿರೇಮಠ, ಬೆಮಳಖೇಡದ ಗುರುಸ್ಥಲ ಮಠ, ಚಿಟಗುಪ್ಪದ ಅಯ್ಯಪ್ಪಸ್ವಾಮಿ ಮಠ ಹೀಗೆ ಜಿಲ್ಲೆಯಲ್ಲಿ ಅತಿ ಹೆಚ್ಚಿ ಮಠಗಳು ಈ ತಾಲೂಕಿನಲ್ಲಿವೆ.

ಬಸವಕಲ್ಯಾಣ ತಾಲೂಕಿನ ಹುಲಕುಂಟಿ ಮಠ, ಕಣಗಿಲಮಠ, ಕಟಗೀಮಠ, ಕೆಳ್ಳಿಮಠ, ಉರಿಲಿಂಗ ಪೆದ್ದಿಮಠ, ಜೇಡರ ದಾಸಿಮಯ್ಯನ ಮಠ, ಬಸವರಾಜದೇವರ ಮಠ, ದಾಸೋಹಮಠ, ಮುಖ್ಯವಾಗಿ

ಹುಲಸೂರಿನ ಗುರುಬಸವೇಶ್ವರ ಸಂಸ್ಥಾನ ಮಠ; ಇದು ೧೨ನೆಯ ಶತಮಾನದ್ದು, ಪ್ರಭುದೇವರು ಸ್ಥಾಪಿಸಿದ್ದಿರಬೇಕೆಂಬ ನಂಬಿಕೆ. ೭೧ ಎಕರೆ ಭೂಮಿಯನ್ನು ಹೊಂದಿದೆ. ಹಾರ್ಕುಡ್ ಮಠ, ಬ್ರಹ್ಮಮಠ ಮುಂತಾದವು ಒಟ್ಟಾರೆ ಹೇಳಬೇಕಾದರೆ ಬೀದರ ಜಿಲ್ಲೆಯ ಲಿಂಗಾಯ ಮಠಗಳು ಧಾರ್ಮಿಕ, ಶೈಕ್ಷಣಿಕ ಸಾಮಾಜಿಕ ಮತ್ತು ಸಾಂಸ್ಕೃತಿಕ ಕ್ಷೇತ್ರದಲ್ಲಿ ಸಾಧಿಸಿದ ಸಾಧನೆ ಗಮನಾರ್ಹವಾದುದು.

**ಬೀದರ ಜಿಲ್ಲೆಯಲ್ಲಿ ಬುಡಕಟ್ಟು ಜನಾಂಗ**

೧೯೮೧ರ ಜನಗಣತಿಯ ಪ್ರಕಾರ ಬೀದರ ಜಿಲ್ಲೆಯಲ್ಲಿ ಒಟ್ಟು ೧೯ ಬುಡಕಟ್ಟುಗಳನ್ನು ಗುರುತಿಸಲಾಗಿದೆ. ಅವುಗಳಲ್ಲಿ ಗೊಂಡರು (ರಾಜಗೊಂಡ ನಾಯ್ಕಪೋಂಡಸೇರಿ) ಒಟ್ಟು ಬುಡಕಟ್ಟಿನ ಜನಸಂಖ್ಯೆಯಲ್ಲಿ ಶೇ.೯೧. ಕೋಯ(ಬಿನೆಕೋಯ, ರಾಕೋಯಸೇರಿ) ಶೇ.೪. ಬೀದರ ಜಿಲ್ಲೆಯಲ್ಲಿ ಮುಖ್ಯವಾಗಿ ೫ ಬುಡಕಟ್ಟುಗಳನ್ನು ಗುರುತಿಸಬಹುದು. ಅವುಗಳೆಂದರೆ ಗೊಂಡ, ಟೊಕ್ರಿಕೋಳಿ ಬೇಡ, ಪಾರ್ದಿ ಮತ್ತು ಅಲೆಮಾರಿ, ಗೊಂಡರ ಕಸುಬು ಕುರುಸಾಕಾಣಿಕೆ, ಕುರಿಹಾಲು ಮಾರಾಟ ಮತ್ತು ಕಂಬಳಿ ಹೆಣೆಯುವುದು. ಟೋಕ್ರಿಕೋಳಿ ನದಿಗಳಲ್ಲಿ ಟೋಕ್ರಿ ಹಾಕಿ ಜನರಿಗೆ ದಾಟಿಸುವುದು, ಮೀನು ಹಿಡಿಯುವುದು. ಬೇಡರ ಕಸುಬು ಬೇಟೆಯಾಡುವುದು, ಪಾರ್ದಿ ಬಲೆಬೀಸಿ ಮೊಲ ಹಿಡಿಯುವುದು, ಅಲೆಮಾರಿಯರ ಕಸುಬು ಊರೂರು ಅಲೆದಾಡಿ ಭಿಕ್ಷೆ ಬೇಡುವುದು ಯಾವುದೋ ಸಣ್ಣಪುಟ್ಟ ಕೆಲಸ ಮಾಡುವುದು.

ಕಬ್ಬಲಿಗರನ್ನು ಟೋಕ್ರಿ ಕೋಳಿಯಂದು ಕರೆಯುವುದುಂಟು. ಇವರು ದಷ್ಟಪುಷ್ಟರು, ಇವರ ದೇಹದಾರ್ಢ್ಯತೆ ನೋಡಿ ನಿಜಾಮನು ಇವರಿಗೆ ಗ್ರಾಮದ ಹಾಗೂ ಮುಖಂಡರ ರಕ್ಷಣೆಯ ಹೊಣೆಗಾರಿಕೆಯನ್ನು ಕೊಟ್ಟಿದ.

**ಪಶುಸಂಗೋಪನೆ :** ಬೀದರ ಜಿಲ್ಲೆಯ ಮುಖ್ಯ ಕುಸುಬಾದ ಒಕ್ಕಲುತನ ಅದರ ಜೊತೆಗೆ ಬರುವಂಥ ಪಶು ಸಾಕಾಣಿಕೆ. ಹಸು, ಎಮ್ಮೆ, ಎತ್ತು ಇವುಗಳು ಶ್ರೀಮಂತರಲ್ಲಿ ಹೆಚ್ಚಿನ ಪ್ರಮಾಣದಲ್ಲಿದ್ದರೆ, ಬಡವರಲ್ಲಿ ಕುರಿ, ಆಡು ಮತ್ತು ಕೋಳಿ ಸಾಕಾಣಿಕೆ ನಡೆಯುತ್ತದೆ. ದೇವಣಿ ತಳಿಯ ಹಸು ಮತ್ತು ಎತ್ತುಗಳು ಹೆಚ್ಚಿನ ಸಂಖ್ಯೆಯಲ್ಲಿ ಸಾಕಲಾಗುತ್ತದೆ. ಈ ತಳಿಯ ಪಶು ಹಣೆ ಎತ್ತರ, ಮುಖ ಉದ್ದವಾಗಿರುತ್ತದೆ.

**ಸಸ್ಯವಿವರ :** ಬೀದರ ಜಿಲ್ಲೆಯ ಎಲ್ಲ ಭಾಗಗಳಲ್ಲಿಯೂ ವಿಶೇಷವಾಗಿ ಕಂಡುಬರುವ ಗಿಡ ಮರಗಳೆಂದರೆ ಮಾವು, ಹುಣಸೆ, ಆಲ, ಬೇವು ಮತ್ತು ನೇರಿಳೆಗಳು. ಬೋರೆ, ಅತ್ತಿ, ಸಾಗುವಾನಿ, ಬಿದಿರು, ಶ್ರೀಗಂಧ ಮುಂತಾದವುಗಳು ಕೂಡ ವಿರಳವಾಗಿ ಕಂಡುಬರುತ್ತವೆ. ಘಟ್ಟವಾಡಿ ಪ್ರದೇಶದಲ್ಲಿ ತುಮುರಿ, ಮುತ್ತುಗ, ಸೀತಾಫಲ ಮುಂತಾದವುಗಳು ಮತ್ತು ತೊರೆಪಟ್ಟಿಯಲ್ಲಿ ಜಾರಿ ಮರಗಳು ಹೆಚ್ಚಾಗಿ ಕಂಡುಬರುತ್ತವೆ.

**ಕೃಷಿ :** ಏಕದಳಗಳಾದ ಜೋಳ, ಭತ್ತ ಕಳವೆ ಸಜ್ಜೆ, ಮೆಕ್ಕೆಜೋಳ ಇತರ ತೃಣಧಾನ್ಯಗಳು ಒಟ್ಟು ೧೧೬೫೦೦ ಹೆಕ್ಟರ್ ಕ್ಷೇತ್ರದಲ್ಲಿ ೧೧೨೩೫೫ ಟನ್ ಆಹಾರ ಉತ್ಪಾದನೆ ಗುರಿ ದ್ದರೆ, ೪೩೪೩೪ ಹೆಕ್ಟರಿನಲ್ಲಿ ೩೬೩೩೬ ಟನ್ ಉತ್ಪಾದನೆಯನ್ನು ಸಾಧಿಸಲಾಗಿದೆ.

ದ್ವಿದಳ ತೊಗರಿ, ಉದ್ದು, ಹೆಸರು, ಹುಲ್ಲುಲಿ, ಅಲಸಂದಿ, ಅವರೆ ಬೆಳೆದರೆ ಹಿಂಗಾರಿನಲ್ಲಿ ಕಡಲೆ ಮಾತ್ರ ಪ್ರಧಾನವಾಗಿದೆ. ತೊಗರೆ ಮುಂಗಾರಿನಲ್ಲಿ ಬಿತ್ತಿದರೂ ಡಿಸೆಂಬರ್ ಜನವರಿಯಲ್ಲಿ ರಾಶಿ ನಡೆಯುತ್ತದೆ. ಎಣ್ಣೆ ಕಾಳುಗಳಾದ ಶೇಂಗಾ, ಸೂರ್ಯಕಾಂತಿ, ಎಳ್ಳು, ಕಾರಳು/ ಗುರೆಳು, ಖುಸುಬೆ,ಸೋಯಾ, ಆವರೆ, ಅಗಸೆ, ಬೆಳೆಯುತ್ತಾರೆ. ವಾಣಿಜ್ಯ ಬೆಳೆ ಕಬ್ಬುಮಾತ್ರ ಸಾಧ್ಯವಾದರೆ ಪಾಕ, ಬೆಲ್ಲ ಮಾಡುವುದು, ಇಲ್ಲದಿದ್ದರೆ ಸಕ್ಕರೆ ಕಾರ್ಖಾನೆಯಾದ ಬೀದರ ಸಹಕಾರ ಸಕ್ಕರೆ ಕಾರ್ಖಾನೆ ಇಲ್ಲದಿದ್ದರೆ ಖಾಂಡಸಾರಿ ಸಕ್ಕೆ ಕಾರ್ಖಾನೆಗೆ ಕಳುಹಿಸುವುದು ಮಾಡುತ್ತಾರೆ.

**ಪರಿಸರ :** ಜಿಲ್ಲೆಯ ಹವಾಗುಣ ಶಾಂತ, ಸುಗಂಧವಿದ್ದು ಬಯಲು ಪ್ರದೇಶ, ಬಿಸಿಲಿನ ತಾಪ ಅತಿ ಹೆಚ್ಚೇನಿಲ್ಲ. ಹೀಗಿದ್ದುದರಿಂದ ವಾಯು ಸೇನೆ ತರಬೇತಿ ಕೇಂದ್ರ ಸರಕಾರ ತೆರೆದಿದೆ. ಆದರೆ ಬರುಬರುತ್ತಾ ಇಲ್ಲಿ ಕೈಗಾರಿಕೀಕರಣ ಹೆಚ್ಚಾದುದರಿಂದ ಮಾಲಿನ್ಯ ಹೆಚ್ಚಾಯಿತು. ಬೀದರ ನಗರದ ನವಬಾದ ಕಡೆ ಅನೇಕ ಫ್ಯಾಕ್ಟರಿಗಳು ತೆರೆಯಲಾಗಿದೆ.

೧. ಸೋಲ್‌ಫಾರ್ಮಾ ಸೂಟಿಕಲ್ಸ್ ಖಾಸಿ ನಿಯಮಿತ
೨. ಎ.ರಿ.ಐ.ಪಿ.ಐ.ಕೆಮಿಕಲ್ಸ್ ಖಾಸಗಿ ನಿಯಮಿತ
೩. ಸೌತ್‌ವಿಕ್ ಡ್ರಗ್ಸ್ ಖಾಸಗಿ ನಿಯಮಿತ
೪. ವಾಣಿ ಆರ್ಗ್ಯಾನಿಕ್ಸ್ ಖಾಸಗಿ ನಿಯಮಿತ
೫. ಸಿ.ವೆಲ್.ಡ್ರಾಗ್ಸ್ ಖಾಸಗಿ ನಿಯಮಿತ
೬. ಶೋನಾಕ್ ಲ್ಯಾಬರೋಟರೀಸ್
೭. ಎಲ್.ಎಸ್.ಕೆ.ಫಾರ್ಮಾ ಸೂಟಿಕಲ್ಸ್
೮. ಕಾರಂಜಾ ರಬ್ಬರ ಕಾರ್ಖಾನೆ
೯. ಬೀದರ ಸಹಕಾರ ಸಕ್ಕರೆ ಕಾರ್ಖಾನೆ ಹಳ್ಳಿಖೇಡ್
೧೦. ನಾಗಂಜಾ ಸಹಕಾರ ಸಕ್ಕರೆ ಕಾರ್ಖಾನೆ ಜನವಾಡಾ

ಇವೆಲ್ಲ ಕಾರ್ಖಾನೆಗಳಿಂದ ಹೊರಬರುವ ನೀರಿನಲ್ಲಿ ಆಮ್ಲಗಳ ಲೋಹಗಳು ಜಲಜನಕಯುಕ್ತ ಇಂಗಾಲ ಸಂಯುಕ್ತಗಳ ವಿಷಭರಿತ ರಾಸಾಯನಿಕ ವಾಸ್ತುಗಳು ಸೇರಿವೆ. ಸುತ್ತಲಿನ ಪ್ರದೇಶವನ್ನು ಕಲುಷಿತಗೊಳಿಸುತ್ತಿವೆ. ಹುಮನಾಬಾದ ಕಾರ್ಖಾನೆಗಳಲ್ಲಿ ಮಾಲಿನ್ಯಾವಸ್ಥೆಯಲ್ಲಿವೆ. ಭಾಲ್ಕಿಯ ಸಮೀಪದ ಮಹಾತ್ಮಗಾಂಧಿ ಸಹಕಾರ ಸಕ್ಕರೆ ಕಾರ್ಖಾನೆ ನಿಯಮಿತ ಭಾಲ್ಕಿ ಇಲ್ಲಿ ತಯರಾಗುತ್ತಲಿದೆ. ಇದರಿಂದಲೂ ಮಾಲಿನ್ಯವಾಗುತ್ತದೆ. ಉಳಿದ ಕಡೆಗಳಲ್ಲಿ ತಂಗಾಳಿ ಬಹು ಸುಗಂದ ಹಾಯಾಗಿದೆ.

## ರಷ್ಯಾನ್ ಪ್ರವಾಸಿ ಕಂಡ ಬೀದರ

ಕ್ರಿ.ಶ.೧೪೭೭ರಲ್ಲಿ ಅಫುನಾಶಿ ನಿಕಿಟಿನ್ ಬೀದರ ನಗರಕ್ಕೆ ಭೇಟಿಕೊಟ್ಟಾಗ ಅಲ್ಲಿ ಮಹಮ್ಮದ ಶಾಹ ತೃತೀಯ ಆಡಿಳತವಿತ್ತು. ಮಹಮ್ಮದ ಗವಾನ ಅಂದಿನ ಮಂತ್ರಿ. ನಿಶ್ವಾರ್ಥಿದಕ್ಷ ಶಿಕ್ಷಣ, ಕಲೆ ಉಚ್ಛ್ರಾಯ ಸ್ಥಿತಿಗೆ ತಲುಪಿತು. ಅಂದಿನ ಕಾಲದಲ್ಲಿ ತೆರೆದ ವಿದ್ಯಾಕೇಂದ್ರ ಮೆಚ್ಚುವಂಥದ್ದು. ಬೀದರ ಒಂದು ದೊಡ್ಡನಗರ. ಬೀದರಿನಲ್ಲಿ ಕುದುರೆ, ರೇಷ್ಮೆ ಹಾಗೂ ಇತರ ಅರಬಗಳ ವಸ್ತುಗಳು ಮಾರಾಟವಾಗುತ್ತಿವೆ. ಗುಲಾಮರ ಮಾರಾಟವೂ ನಡೆಯುತ್ತದೆ. ಕಾಲ್ನಡಿಗೆಯೊಂದಿಗೆ ಪ್ರಯಾಣಿಸುವುದು ಇಲ್ಲಿನ ಜನಗಳ ನಡಿಗೆ ಚುರುಕು, ಆನೆ, ಕುದುರೆ, ಕಾಲ್ದಾಳಗಳ ಯುದ್ಧ ಸೈನೆ ಇದೆ. ಪರ್ಶಿಯನ್ ಸೈನಿಕರೆ ಕುದುರೆ ಸವಾರರು. ಗವಾನನ ಆಡಳಿತದಲ್ಲಿ ಎರಡು ಲಕ್ಷ ಸೈನ್ಯವಿದೆ. ಅರಮನೆ ತುಂಬ ಸ್ವರ್ಣಲೇಪವಿದೆ. ಗೋಡೆಗಳು ಕುಸುರಿಕೆಲಸದಿಂದ ಅಲಂಕರಿಸಲಾಗಿದೆ.

## ೧.೪. ಕರ್ನಾಟಕದ ಏಕೀಕರಣ : ಬೀದರ ಜಿಲ್ಲೆಯ ಪ್ರಮುಖರು

ಶ್ರೀ ಚನ್ನಬಸವ ಪಟ್ಟದ್ದೇವರು, ಭಾಲ್ಕಿ : ಹೈದರಾಬಾದಿನ ನಿಜಮನ ಆಳ್ವಿಕೆಯ ಕಾಲದಲ್ಲಿ, ಕನ್ನಡದ ಭಾಗಗಳು ಉಪೇಕ್ಷೆಗಳಾದವು. ಉರ್ದು ಮತ್ತು ಮರಾಠೀ ಭಾಷೆಗಳು ಕನ್ನಡವನ್ನು ಮೂಲೆಗುಂಪು ಮಾಡಿದವು. ಅಂತಹ ವಿಷಮ ಪರಿಸ್ಥಿತಿಯಲ್ಲಿ ಕನ್ನಡಪರ ಧ್ವನಿಯನ್ನು ರಕ್ಷಿಸಿದವರು ಶ್ರೀ ಚನ್ನಬಸವಪಟ್ಟದೇವರು. ೧೯೨೪ರಲ್ಲಿ ಪಟ್ಟಾಭಿಷೇಕವಾದ ಕೂಡಲೆ ಮೊದಲ ಕಾರ್ಯಯೋಜನೆಗಳಲ್ಲಿ ಕನ್ನಡ ಪ್ರಚಾರ ಮಾಡುವುದು ಒಂದಾಗಿತ್ತು. ಈ ನಿಟ್ಟಿನಲ್ಲಿ ಆಂಧ್ರಪ್ರದೇಶದ ಮೋರಗಿಯಲ್ಲಿ ಕನ್ನಡ ಶಾಲೆಯೊಂದನ್ನು ಆರಂಭಿಸುವ ಸಲುವಾಗಿ ಹೈದಾರಾಬಾದ್ ನಿಜಾಮನ ಸರಕಾರಕ್ಕೆ ಅರ್ಜಿ ಸಲ್ಲಿಸಿ ಪಟ್ಟದ್ದೇವರು ಪಟ್ಟ ಪಾಡು ಅಷ್ಟಿಷ್ಟಲ್ಲ. ಇವರು ಒಮ್ಮೆ ಗುಲಬರ್ಗಾ, ಒಮ್ಮೆ ಹೈದರಾಬಾದಿಗೆ ಹೀಗೆ ನಾಲ್ಕು ವರ್ಷಗಳ ಕಾಲ ಓಡಾಡಬೇಕಾಯಿತು. ಯಾವಾಗ ಹೋದರೂ ನಿಜಾಮನ ಗುಮಾಸ್ತ ಪಟ್ಟದ್ದೇವರ ಫೈಲಿಗೆ ಬೆಲೆ ಕೊಡದೇ ಹೋದ. ಆಗ ಎಂಟಾಣೆ ಕೊಟ್ಟು ಫೈಲನ್ನು ಮೇಲೆ ತರುವಂತೆ ಮಾಡಿ ಅನುಮತಿ ಪಡೆಯಬೇಕಾಯಿತು. ಎಂಟಾಣೆಗೆ ಅಂದು ಬೆಲೆ ಬಹಳಿತ್ತು.

ಲಾತೂರ್, ಉದಗೀರ, ಹಣೆಗಾಂವ(ಮಹಾರಾಷ್ಟ್ರ) ಕಾರಾಮುಂಗಿ, ಜಹಿರಾಬಾದ, ಮೋರ್ಗಿ (ಆಂಧ್ರಪ್ರದೇಶ) ಭಾಲ್ಕಿ ಹಾಗೂ ಬೀದರ ಮೊದಲಾದ ಕಡೆಗಳಲ್ಲಿ ಶಾಲೆಗಳಲ್ಲಿ ಕನ್ನಡ ಬೋಧನೆ ಆರಂಭಿಸಲು ಸಾಧ್ಯವಾಯಿತು. ಕನ್ನಡ ಮನೆಯಲ್ಲೊಬ್ಬರಾದರೂ ಕಲಿಯಬೇಕೆಂದು ಒತ್ತಡ ಹೇರಿದರು.

೧೯೫೦-೫೭ರ ವರ್ಷಗಳಲ್ಲಿ ಬೀದರ ವಿಭಾಗದಲ್ಲಿ ಕರ್ನಾಟಕ ಏಕೀಕರಣ ಆಂದೋಲನ ಸಮಿತಿಯನ್ನು ಸ್ಥಾಪಿಸಿ ಶ್ರೀ ಸಿದ್ಧಲಿಂಗಪ್ಪ ಕಾಕನಾಳೆಯವರನ್ನು ಅದರ ಅಧ್ಯಕ್ಷರನ್ನಾಗಿ ಮಾಡಿ ಶ್ರೀ ಭೀಮಣ್ಣ

ಖಂಡ್ರೆಯವರ ಶಕ್ತಿಯಿಂದ ಹೋರಾಟಕ್ಕೆ ಭದ್ರವಾದ ತಳಹದಿ ಹಾಕಿದರು. ಕಾಕನಾಳೆ ಮತ್ತು ಖಂಡ್ರೆ ಶ್ರೀಗಳ ಎಡಗೈ ಬಲಗೈಯಾಗಿ ನೆರವಾದರು. ಈ ಹೋರಾಟದಲ್ಲಿ ಪ್ರಭುರಾವ ಕಂಬಳಿವಾಲೆ ಅವರೂ ಪ್ರಮುಖ ಪಾತ್ರವಹಿಸಿದರು.

೧೯೫೦ರಲ್ಲಿ ಭಾಲ್ಕಿ ರೈಲ್ವೆ ಸ್ಟೇಷನಿನಲ್ಲಿ ರೈಲ್‌ರೋಕೊ ಸತ್ಯಾಗ್ರಹ ನಡೆಸಿದರು. ಅಂದು ಕನ್ನಡ ವಿರೋಧಿಗಳು ನಡೆಸಿದ ಕಲ್ಲು ತೂರಾಟದಲ್ಲಿ ಅನೇಕ ಮಂದಿ ಗಾಯಗೊಂಡಿದ್ದರು. ಕನ್ನಡ ಕಲಿಯುವ ವಿದ್ಯಾರ್ಥಿಗಳ ಊಟೋಪಚಾರಕ್ಕಾಗಿ ಶ್ರೀಗಳು ಜೋಳಿಗೆ ಹಾಕಿ ಹಿಟ್ಟು ಬೇಡಿ ಉಣಿಸಿದರು. ರಜಾಕರ ಹಾವಳಿ ಕಾಲಕ್ಕೆ ಶ್ರೀಗಳು ಕನ್ನಡ ಕಲಿಯುವ ಹುಡುಗರನ್ನು ಸೋಲಾಪುರದ ಕುಂಟೋಜಿ ಮಠಕ್ಕೆ ಕರೆದುಕೊಂಡು ಹೋಗಿ ಅವರ ಕನ್ನಡ ಕಲಿಕೆ ಮುಂದುವರಿಯುವಂತೆ ಮಾಡಿದರು.

**ಲೋಕನಾಯಕ ಶ್ರೀ ಭೀಮಣ್ಣ ಖಂಡ್ರೆ :** ೧೩ನೇ ಸೆಪ್ಟೆಂಬರ್ ೧೯೪೮ರಲ್ಲಿ ಭಾರತದ ಸೇನೆ ಹೈದರಾಬಾದ್ ಮೇಲೆ ಆಕ್ರಮಣ ಮಾಡಿ, ನೈಜಾಮರನ್ನು ಶರಣಾಗುವಂತೆ ಮಾಡಿತು. ಸೇನೆಯ ಒಂದು ತುಕಡಿ ಬೀದರದ ಮೂಲಕ ಸೋಲಾಪುರದಿಂದ ಹೈದರಾಬಾದ್ ಪ್ರಾಂತ್ಯವನ್ನು ಪ್ರವೇಶಿಸಿ ಹೈದರಾಬಾದ್ ಕಡೆ ಧಾವಿಸಿತು. ೧೭.೦೯.೧೯೪೮ರ ನೈಜಾಮ ಒಪ್ಪಂದಕ್ಕೆ ಸಹಿ ಮಾಡಿ ನೈಜಾಮ್ ಪದವಿಯನ್ನು ಕಳೆದುಕೊಂಡು ಬರೀ ರಾಜ ಪ್ರಮುಖನಾದನು. ಈ ಸಮಯದಲ್ಲಿ ಭೀಮಣ್ಣಾ ಖಂಡ್ರೆಯವರಿಗೆ ೨೧ ವರ್ಷ ವಯಸ್ಸಾಗಿತ್ತು. ಇವರು ಶಿವಲಿಂಗಪ್ಪ ಪಾರ್ವತಿಯವರಿಗೆ ೮.೦೧.೧೯೨೭ರಲ್ಲಿ ಭೀಮಣ್ಣ ಖಂಡ್ರೆಯವರ ವೀರಶೈವ ಕುಟುಂಬದಲ್ಲಿ ಜನ್ಮತಾಳಿದರು.

ತಾಯಿ ಜೋಳ ಬೀಸುತ್ತಾ ಹಾಡುವುದನ್ನು ಭೀಮಣ್ಣನವರು ಕೇಳುತ್ತಾ ತೊಡೆಯ ಮೇಲೆ ಮಲಗುತ್ತಿದ್ದರು. ಭಾಲ್ಕಿಯಲ್ಲಿಯೇ ಪ್ರಾಥಮಿಕ ಶಿಕ್ಷಣ ಮುಗಿಸಿ ಮಾಧ್ಯಮಿಕ ಅಭ್ಯಾಸಕ್ಕೆಂದು ಬೀದರನ್ನು ಸೇರಿದರು. ಒಂಭತ್ತನೆಯ ತರಗತಿಯಾದ ನಂತರ ಓದುವುದು ನಿಲ್ಲಿಸಿ ಮುನ್ಸಿಫಾಜಲ್ ಪರೀಕ್ಷೆಯಲ್ಲಿ ಹೈದರಾಬಾದ್ ಸಂಸ್ಥಾನಕ್ಕೆ ಪ್ರಥಮ ರ್‍ಯಾಂಕ್ ಪಡೆದುಕೊಂಡರು. ಸಮಾಜದ ಕಳಕಳಿ ಸ್ವಾತಂತ್ರ್ಯದ ಹಂಬಲದಿಂದಾಗಿ ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕಿದರು. ಇದರ ಪರಿಣಾಮ ಖಂಡ್ರೆಯವರ ಮನೆತನವೆಲ್ಲ ಜೇಲು ಸೇರಬೇಕಾಗಿ ಬಂತು. ಇವರ ಆಸ್ತಿಯನೆಲ್ಲ ಜಪ್ತಿ ಮಾಡಲಾಯಿತು(Consfiscation by Govt.). ರಾಮಚಂದ್ರ ವೀರಪ್ಪರೂ ಈ ಕುಟುಂಬದ ಜೊತೆ ಪೋಲೀಸರ ಬೂಟಿನೇಟು ತಿಂದರು. ಹೈದರಾಬಾದ್ ಸಂಸ್ಥಾನ ಭಾರತದಲ್ಲಿ ಲೀನವಾಯಿತು. ಇವರ ಆಸ್ತಿ ಹಿಂದಿರುಗಿಸಲಾಯಿತು. ೧೯೫೯ರಲ್ಲಿ ಉಸ್ಮಾನಿಯ ವಿಶ್ವವಿದ್ಯಾಲಯ ಹೈದರಾಬಾದಿನಿಂದ ಎಲ್.ಎಲ್.ಬಿ.ಪಾಸು ಮಾಡಿ ವಕೀಲ ವೃತ್ತಿಯನ್ನು ಭಾಲ್ಕಿಯಲ್ಲಿ ಆರಂಭಿಸಿದರು.

೧೯೬೨ರಲ್ಲಿ ಸಮಾಜವಾದಿ ಪಕ್ಷದ ವತಿಯಿಂದ ಭಾಲ್ಕಿಯ ಶಾಸನ ಸಭೆಯಿಂದ ಚುನಾಯಿತರಾದರು. ೧೯೬೪ರ ನಂತರ ಕಾಂಗ್ರೆಸ್ಸನ್ನು ಸೇರಿ ಇಲ್ಲಿಯವರೆಗೆ ಬೀದರಿನ ಕಾಂಗ್ರೆಸ ಪಕ್ಷದ ಒಂದು ಶಕ್ತಿಯಾಗಿದ್ದಾರೆ. ೧೯೬೭, ೧೯೭೮ ಮತ್ತು ೧೯೮೩ರಲ್ಲಿ ಭಾಲ್ಕಿ ಕ್ಷೇತ್ರದಿಂದ ಶಾಸಕರಾದರು. ಬೀದರ ಜಿಲ್ಲೆಯಲ್ಲಿ ಭೀಮಣ್ಣನವರು ನಡೆಸಿದ ಚರಿತ್ರಾರ್ಹ ಚಳುವಳಿ ಬೀಜ ಚಳುವಳಿ ಎಂದು ಹೆಸರಾಗಿದೆ (೧೯೭೧-೭೩). ಈ ಅವಧಿಯಲ್ಲಿ ಉತ್ತರ ಕರ್ನಾಟಕ ಪ್ರಾಂತ್ಯದಲ್ಲಿ ಭೀಕರ ಬರಗಾಲ ಬಂದೆರಗಿತು. ೨೧.೦೧.೧೯೮೦ರಂದು ನಡೆಸಿದ ರಾಜ್ಯ ರೈತ ಸಮ್ಮೇಳನ ಭಾಲ್ಕಿಯಲ್ಲಿ ಎಂದು ಕಾಣದ ಕೇಳದ ಮಹಾ ಸಮ್ಮೇಳನ ಜರಗಿ ಹೋಯಿತು.

೨೦.೦೯.೧೯೭೬ರ ಭಾಲ್ಕಿಯ ಚನ್ನಬಸವೇಶ್ವರ ಕಾಲೇಜಿನಲ್ಲಿ ೨೦೧೫ ಜನರಿಗೆ ೩೫೦ ವೈದ್ಯರಿಂದ ಶಸ್ತ್ರಚಿಕಿತ್ಸೆ ಜರಗಿತು. ಇದು ಇವರ ಜಾಗತಿಕ ದಾಖಲೆ. ೧೯೯೩ರಲ್ಲಿ ಕರ್ನಾಟಕ ರಾಜ್ಯದ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆಯ ಸಚಿವರಾಗಿ ಸೇವೆ ಸಲ್ಲಿಸಿದ್ದಾರೆ. ಪ್ರಭುರಾವ ಕಂಬ್ಳಿವಾಲೆ ಅವರು ಕನ್ನಡ ಕಲಿಯದ, ಬರೆಯಲು ಬಾರದ ಭೀಮಣ್ಣನವರನ್ನು ಕನ್ನಡ ಪ್ರಚಾರಕ್ಕೆ ಪ್ರವೇಶ ಮಾಡಿಸಿದರು. ೧೯೫೬ನೇ ಏಪ್ರಿಲ್‌ನಲ್ಲಿ ಭಾಲ್ಕಿ ತಾಲೂಕಿನ ಭಾತಂಬ್ರಾ ಗ್ರಾಮದಲ್ಲಿ ಹೈದರಾಬಾದ್ ಪ್ರದೇಶ ಕನ್ನಡ ಸಾಹಿತ್ಯ ಪರಿಷತ್ತಿನ ಐದನೆಯ ಸಮ್ಮೇಳನವನ್ನು ನಡೆಸಲಾಯಿತು. ಇಲ್ಲಿ ಭೀಮಣ್ಣನವರ ನೇಪಥ್ಯದ ಪಾತ್ರವಾಗಿತ್ತು.

೧೯೬೩ರಲ್ಲಿ ಶಾಂತಿವರ್ಧಕ ಶಿಕ್ಷಣ ಸಂಸ್ಥೆಯ ಚುನಾಯಿತ ಅಧ್ಯಕ್ಷರಾಗಿ ಶಾಲಾ ಕಾಲೇಜು ಸ್ಥಾಪಿಸಿ ಜಿಲ್ಲೆಯಲ್ಲಿಯ ಹೆಸರಾಂತ ಸಂಸ್ಥೆ ಅದಾಗಿದೆ. ಈ ಸಂಸ್ಥೆಯ ಅಧ್ಯಕ್ಷರಾಗಿ ೧೯೯೫ರವರೆಗೆ ಇದ್ದರು. ಈಗ ಅವರ ಮಗ ಈಶ್ವರ ಖಂಡ್ರೆಯವರು ಅದರ ಅಧ್ಯಕ್ಷತೆಯ ಕಾರ್ಯಭಾರ ಹೊತ್ತಿದ್ದಾರೆ.

**ಪ್ರಭುರಾವ್ ಕಂಬ್ಳಿವಾಲೆ, ಬೀದರ್ :** ಬೀದರ್ ಜಿಲ್ಲೆ ಕನ್ನಡಿಗರ ಜಿಲ್ಲೆಯಾಗಿ ಕರ್ನಾಟಕಕಕ್ಕೆ ಸೇರುವಂತೆ ಮಾಡಿದ ಧೀಮಂತ ಕನ್ನಡ ಹೋರಾಟಗಾರರಲ್ಲಿ ಪ್ರಭುವರಾವ ಕಂಬಳಿವಾಲೆಯವರೂ ಒಬ್ಬರು. ಮೂಲತಃ ಉದಗೀರದಲ್ಲಿ ವಕೀಲರಾಗಿ ಸೇವೆ ಸಲ್ಲಿಸುತ್ತಿದ್ದ ಈ ಕಟ್ಟಾ ಕನ್ನಡಾಭಿಮಾನಿ ಕನ್ನಡ ಚಳುವಳಿಗಾಗಿ ತನ್ನ ಜೀವಮಾನವನ್ನೇ ಮುಡಿಪಾಗಿಡುವಂತೆ ಮಾಡಿದ ಒಂದು ಘಟನೆ ೧೯೫೨ರಲ್ಲಿ ಬೀದರಿನ ಗಣೇಶೋತ್ಸವ ಸಮಾರಂಭದಲ್ಲಿ ಖ್ಯಾತ ಲೇಖಕ ಮಾಸ್ತಿ ನರಸಿಂಗರಾಯರು ಕನ್ನಡದಲ್ಲಿ ಭಾಷಣ ಮಾಡುತ್ತಿದ್ದಾಗ ಮರಾಠಿಯ ಪ್ರಭಾವಿ ಪುಡಾರಿಗಳು ಅವರ ಭಾಷಣಕ್ಕೆ ಅಡ್ಡಿ ಒಡ್ಡಿದ್ದಕ್ಕಾಗಿ ಅವರು ತಮ್ಮ ಭಾಷಣವನ್ನು ಉರ್ದು ಭಾಷೆಯಲ್ಲಿ ಮುಗಿಸಬೇಕಾಯಿತು. ಇದನ್ನರಿತ ಶ್ರೀ ಕಂಬಳಿವಾಲೆಯವರು ಅದೇ ಬೀದರನಲ್ಲಿ ಯಾವ ಆತಂಕ ಅಡೆತಡೆಗಳೂ ಇಲ್ಲದೆ ನಿರರ್ಗಳವಾಗಿ ಕನ್ನಡದಲ್ಲಿ ಮಾತನ್ನಾಡಲು ಸಾಧ್ಯವಾಗುವಂಥ ಪರಿಸ್ಥಿತಿಯನ್ನು ನಿರ್ಮಾಣ ಮಾಡಿ ಕೊಡುವುದಾಗಿ ಮಾಸ್ತಿ ನರಸಿಂಹರಾಯರಿಗೆ ಪ್ರಭುರಾವ್ ವಚನವಿತ್ತರು. ಅಂದಿನಿಂದ ಅವರ ಕನ್ನಡಪರ ಹೋರಾಟ ತೀವ್ರವಾಯಿತು.

ಕನ್ನಡಪರ ಚಳುವಳಿ ತೀವ್ರಗೊಳಿಸುವ ಉದ್ದೇಶದಿಂದ ಉದಗೀರನ್ನು ಬಿಟ್ಟು ೧೯೫೩ರಲ್ಲಿ ಬೀದರಿಗೆ ಬಂದು ನೆಲೆಸಿದರು. ಬೀದರದಲ್ಲಿ ಕನ್ನಡಿಗರ ಸಭೆಗಾಗಿ ೨೦೦ ಮಂದಿಗೆ ಆಮಂತ್ರಣ ಕಳುಹಿಸಿದರು. ಸಭೆಗೆ ಹಾಜರಾದವರು ಕೇವಲ ೫ ಮಂದಿ ಮಾತ್ರ. ಈ ಸಭೆಯಲ್ಲಿ ನಡೆದ ಚರ್ಚೆಯ ಫಲವಾಗಿ ಬೀದರ ಜಿಲ್ಲಾ ಕನ್ನಡ ಶಿಕ್ಷಣ ಸಮಿತಿ ಅಸ್ತಿತ್ವಕ್ಕೆ ಬಂದಿತು. ಜಿಲ್ಲೆಯಲ್ಲಿ ಕನ್ನಡ ಶಾಲೆಗಳನ್ನು ಸ್ಥಾಪಿಸುವುದು, ಕನ್ನಡ ಭಾಷೆಯ ಪ್ರಚಾರ ಮಾಡುವುದು, ಪ್ರತಿವರ್ಷ ನಾಡಹಬ್ಬ ಆಚರಿಸುವುದು ಮತ್ತು ಸಾಹಿತಿ, ವಿದ್ವಾಂಸರನ್ನು ಆಮಂತ್ರಿಸಿ ಕನ್ನಡದಲ್ಲಿ ಅವರ ಭಾಷಣಗಳ ಏರ್ಪಾಟು ಮಾಡುವುದು ಈ ಶಿಕ್ಷಣ ಸಮಿತಿಯ ಮುಖ್ಯ ಕಾರ್ಯ ಯೋಜನೆಗಳಾಗಿದ್ದವು.

೧೯೫೩ ರಿಂದ ಜಿಲ್ಲೆಯಲ್ಲಿ ನಾಡಹಬ್ಬ ಬಹು ವಿಜೃಂಭಣೆಯಿಂದ ಆಚರಿಸುತ್ತ ಬರಲಾಯಿತು. ಈ ಸಮಾರಂಭಕ್ಕೆ ನಾಡಿನ ಗಣ್ಯರನ್ನು ಆಮಂತ್ರಿಸಿ ಕನ್ನಡದ ಬಗ್ಗೆ ಜಾಗೃತಿ ಮೂಡಿಸುವಂತೆ ಮಾಡಿದರು. ಪಟ್ಟಣ ಹಳ್ಳಿಗಳಲ್ಲಿ ಕನ್ನಡ ಶಾಲೆಗಳನ್ನು ಸ್ಥಾಪಿಸಲು ತುಂಬ ಶ್ರಮಿಸಿದರು.

ಬೀದರಿನಿಂದ ಉತ್ತರಕ್ಕೆ ಅರವತ್ತು ಮೈಲು ದೂರದಲ್ಲಿ ಗೋದಾವಿರ ತೀರಕ್ಕೆ ಸಮೀಪದಲ್ಲಿ ಇರುವ ದೇಗಲೂರು ಮತ್ತು ಅದರ ಅಸುಪಾಸಿನ ಹಳ್ಳಿಗಳಲ್ಲಿ ಕನ್ನಡಿಗರಿದ್ದುದನ್ನರಿತ ಶ್ರೀ ಕಂಬಳಿವಾಲೆ ಗುರುತಿಸಿದರು. ಕವಿರಾಜ ಮಾರ್ಗದಲ್ಲಿ ಕಾವೇರಿಯಿಂದ ಉತ್ತರದಲ್ಲಿ ಗೋದಾವರಿಯವರೆಗೆ ಕನ್ನಡ ನಾಡು ಹಬ್ಬಿದಿದ್ದಿತ್ತು ಎಂಬುದರ ಹಿನ್ನೆಲೆಯಲ್ಲಿ ಸೆಣಸಾಡಿದರು ಶ್ರೀ ಕಂಬಳಿವಾಲೆ. ಇಡೀ ಪ್ರದೇಶವನ್ನು ಕನ್ನಡ ನಾಡಿಗೆ ಸೇರುವಂತೆ ಮಾಡಲು ಅಲ್ಲಿ ಕನ್ನಡದ ಪ್ರಚಾರ ಮಾಡಿದರು. ೧೯೫೫ರ ಮೇ ತಿಂಗಳಿನಲ್ಲಿ ದೇಗಲೂರಿನಲ್ಲಿ ಕನ್ನಡ ಸಮ್ಮೇಳನವನ್ನು ಯಶಸ್ವಿಯಾಗಿ ನಡೆಸಲಾಯಿತು. ಇದು ಪ್ರಭುರಾವ ಕಂಬಳಿವಾಲೆಯವರಲ್ಲಿದ ಕನ್ನಡಪರ ಹುಮ್ಮಸ್ಸು ಸ್ಪಷ್ಟಿಕರಿಸುತ್ತದೆ. ಆದರೆ ಮರಾಠಿಗರ ಪ್ರಭಾವದಿಂದಾಗಿ ಆ ಪ್ರಾಂತ್ಯ ಮಹಾರಾಷ್ಟ್ರದಲ್ಲಿ ಲೀನವಾಯಿತು.

೧೯೫೬ರಲ್ಲಿ ಬೀದರ್ ಜಿಲ್ಲೆಯ ಭಾಲ್ಕಿ ತಾಲೂಕಿನ ಭಾತಂಬ್ರಾ ಗ್ರಾಮದಲ್ಲಿ ಹೈದರಾಬಾದ್ ಪ್ರದೇಶ ಕನ್ನಡ ಸಾಹಿತ್ಯ. ಪರಿಷತ್ತಿನ ಐದನೆಯ ಸಮ್ಮೇಳನ ನಡೆಯಲು ಪರಿಷತ್ತಿನ ಕಾರ್ಯಕಾರೀ ಮಂಡಳಿ ನಿರ್ಧರಿಸಿತ್ತು. ಅಂದಿನ ಪರಿಷತ್ತಿನ ಅಧ್ಯಕ್ಷರು ಮಾನ್ವಿ ನರಸಿಂಗರಾಯರು ಉಪಾಧ್ಯಕ್ಷ ಪ್ರಭುರವರು ಈ ಸಮ್ಮೇಳನ ನಡೆಸುವ ಪೂರ್ಣ ಜವಾಬ್ದಾರಿ ಕಂಬಳಿವಾಲೆಯವರದು. ಏಪ್ರಿಲ್ ೨೯ರಂದು ಆರಂಭಗೊಡಿತ್ತು. ಅಂದಿನ ಲೋಕಸಭಾ ಸದಸ್ಯರಾಗಿದ್ದ ದಿ.ನಿಜಲಿಂಗಪ್ಪನವರು ಸಮ್ಮೇಳನ ಉದ್ಘಾಟಿಸಿದರು. ಗೋಷ್ಠಿಯಲ್ಲಿ ಮಹಿಳಾ ಗೋಷ್ಠಿ ನಡೆದದ್ದು ಗಮನಾರ್ಹ. ಹೈದಾರಾಬಾದ್ ರಾಜ್ಯ ಸಮಾಜಕಲ್ಯಾಣ ಇಲಾಖೆಯ ಉಪಮಂತ್ರಿಯಾಗಿದ್ದ ಶ್ರೀಮತಿ ಸಂಗಂ ಲಕ್ಷ್ಮಿಬಾಯಿವರು ಈ ಗೋಷ್ಠಿ ಉದ್ಘಾಟಿಸಿದರು. ಗೋಷ್ಠಿ ಅಧ್ಯಕ್ಷತೆ ಶ್ರೀಮತಿ ಸುಮತಿದೇವಿ ಅಪ್ಪುರೆವಹಿಸಿದರು.

ಕನ್ನಡದಲ್ಲಿ ಭಾಷಣ ಮಾಡಲು ಬೀದರ್‌ನಲ್ಲಿ ಸರಿಯಾದ ಪರಿಸ್ಥಿತಿಯನ್ನು ಮಾಡಿಕೊಡುವುದಾಗಿ ಪ್ರಭುರಾಯರು ಮಾಡಿದ ಭೀಷ್ಮಪ್ರತಿಜ್ಞೆ ನೆರವೇರಿದ್ದು ೧೯೬೦ರಲ್ಲಿ. ಆ ವರ್ಷ ೪೧ನೇ ಅಖಿಲ ಕರ್ನಾಟಕ ಕನ್ನಡ ಸಾಹಿತ್ಯ ಸಮ್ಮೇಳನ ಬೀದರಿನಲ್ಲಿ ನಡೆಯಿತು. ಈ ಸಮ್ಮೇಳನಕ್ಕೆ ಪ್ರಭುರಾಯರೇ ಸ್ವಾಗತಾಧ್ಯಕ್ಷರಾಗಿದ್ದರು. ವಿಮರ್ಶಾಗೋಷ್ಠಿಯ ಅಧ್ಯಕ್ಷರಾಗಿ ಬಂದಿದ ಮಾಸ್ತಿ ನರಸಿಂಗರಾಯರು ಕನ್ನಡದಲ್ಲಿ ಮಾಡಿದ ಭಾಷಣವನ್ನು ಸುಮಾರು ಹದಿನೈದು ಸಾವಿರ ಮಂದಿ ಶಾಂತಚಿತ್ತದಿಂದಾಲಿಸಿದರು.

**ಪಂಡಿತ ತಾರಾನಾಥ :** ಪಂಡಿತ ತಾರಾನಾಥರ ವ್ಯಕ್ತಿತ್ವವೇ ಒಂದು ಹುಚ್ಚು ಹೊಳೆ. ವೈರಾಗ್ಯ ಯೋಗಕಲೆ ಹರಿತು ಬುದ್ಧಿಗಳ ಉಂಡೆಯಿದ್ದಂತೆ ತಾರಾನಾಥರ ವ್ಯಕ್ತಿತ್ವ. ೧೮೯೧ರಂದು ಮಂಗಳೂರಿನ ಬ್ರಾಹ್ಮಣ ಕುಟುಂಬದಲ್ಲಿ ಹುಟ್ಟಿದರು. ಚಿಕ್ಕ ವಯಸ್ಸಿನಲ್ಲಿಯೇ ತಂದೆ ರಂಗರಾಯರನ್ನು ಕಳಂದುಕೊಂಡು. ತಾಯಿ ರಾಜೀವಮ್ಮಳ ಗರಡಿಯಲ್ಲಿಯೇ ಬೆಳೆದರು. ತಾಯಿ ತನ್ನ ಮಗು ಪರೋಪಕಾರಿಯಾಗಿ ಬಾಳಲಿ ಎಂದು ಆಕೆಯ ಹಂಬಲ.

ನಂತರ ತಾರಾನಾಥರು ಚಿಕ್ಕಮ್ಮನ ಮನೆಯಲ್ಲಿ ಬೆಳೆದರು. ಹೀಗಾಗಿ ಅವರಿಗೆ ಹೈದರಾಬಾದ್‌ನಲ್ಲಿಯೇ ಉಳಿಯಬೇಕಾಯಿತು. ಹೈದರಾಬಾದ್ ನಿಜಾಮ ಕಾಲೇಜಿನಲ್ಲಿ ವ್ಯಾಸಂಗ ಮಾಡಿ ಅಲ್ಲಿಯೇ ವೈದ್ಯಕೀಯ ಆರಂಭಿಸಿದರು. ವೈದ್ಯಕೀಯಕ್ಕೂ ಸಾಹಿತಿಗೂ ದೂರದ ನಂಟಾದರೂ ಇವೆರಡೂ ಒಡಗೂಡಿ ಬಂದವು ತಾರಾನಾಥರಿಗೆ.

ಚಿಕ್ಕಂದಿನಿಂದಲೇ ಅನ್ಯಾಯದ ವಿರುದ್ಧ ಹೋರಾಡುವ ವ್ಯಕ್ತಿ, ಬೀದರನ ಪ್ರೌಢಶಾಲೆಯೊಂದರಲ್ಲಿ ವಿಜ್ಞಾನ ಶಿಕ್ಷಕರಾಗಿ ನೇಮಕಗೊಂಡರು. ಇವರಿಗೆ ಮಂತ್ರ ಜಂತ್ರವು ಬರುತ್ತಿತ್ತು. ಬೀದರಿನಲ್ಲಿ ಅವರ ಶಿಷ್ಯ ವೃಂದ ಬೆಳೆದಿತ್ತು. ಒಂದು ಸಾರಿ ಬೀದರಿನಲ್ಲಿ ಕಾಲರ ಹರಡಿತು. ಅತೀ ಶ್ರಮದಿಂದ ಅದನ್ನು ಅಡಗಿಸಲು ಪ್ರಯತ್ನಿಸಿದ್ದು ಗಮನಾರ್ಹ. ಈ ಕಾಲಕ್ಕಾಗಲೇ ಬೀದರಿನಲ್ಲಿ ಮೆಥೋಡಿಸ್ಟ ಕ್ರೈಸ್ತ ಸಂಸ್ಥೆ ಬೇರೂರಿತು. ನಾರ್ಮಾಫೆಂಡ್ರಿಕ್ ಎಂಬ ಶಾಲೆಯೂ ಆರಂಭಗೊಂಡಿತು. ತಾರಾನಾಥರು ಬೈಬಲ್ ಹಾಗೂ ಖುರ್ ಆನ್ ಮೇಲೆ ನಿರರ್ಗಳವಾಗಿ ಮಾತನಾಡುತ್ತಿದ್ದರು. ಖುರ್ ಆನ ಪಠಣ ಮಂತ್ರಗಲು ಮುಲ್ಲಾಗಳನ್ನು ಹೊಟ್ಟೆಯುರಿಯುವಂತೆ ಮಾಡಿತು. ಅದರ ತೊಂದರೆಯು ಶ್ರೀ ತಾರಾನಾಥರು ಅನುಭವಿಸಿದರು.

ವೈಭವಯುತವಾಗಿ ಹುಟ್ಟು ಹಬ್ಬವನ್ನಾಚಾರಿಸುತ್ತಿದ್ದ ನಿಜಾಮನಿಗೆ ಕಾಣಿಕೆ ಸಲ್ಲಿಸಬೇಕು. ಅದನ್ನು ವಿರೋಧಿಸುವಂತೆ ಒಂದು ತಿಂಗಳಿನ ಸಂಬಳ ದೇಶ ರಕ್ಷಣೆಗೆ ವೀರಯೋಧನ ಹೆಂಡತಿಗೆ ಕೊಟ್ಟು ಕೇವಲ ಒಂದೇ ಒಂದು ಪೈಸೆಯನ್ನು ನಿಜಾಮನಿಗೆ ಕಳುಹಿಸಿದನು. ಇದನ್ನರಿತ ನಿಜಾಮನು ಇವರ ಮೇಲೆ ಕೆಂಡಕಾರಿ ಬೀದರಿನವರನ್ನು ಇನ್ನೂ ಹೆಚ್ಚು ಕಾಡತೊಡಗಿದನು. ನಾನು ಮಂಗಳೂರಿನವನು ಎಂದು

ಅವರು ಎಂದೂ ಯೋಚಿಸಿದವರಲ್ಲ. ಸದಾ ಅನ್ಯಾಯದ ವಿರೋಧ ಹೋರಾಡುವಾತ ತಾರಾನಾಥರಿಗೆ ನಿಜಾಮನು ಜೈಲಿಗೆ ಹಾಕಿದನು. ಇದನ್ನರಿತ ಬೀದರಿನ ಜನ ಠಾಣೆಯ ಮೇಲೆ ಕಲ್ಲು ತೂರಲಾರಂಭಿಸಿದರು. ಸಾಕು ಸಾಕು ಎಂದು ಸ್ವತಃ ತಾರನಾಥರೇ ಜನರಲ್ಲಿ ಮನವಿ ಮಾಡಿಕೊಂಡರು. ಈ ಕುರಿತ ಲಾವಣಿಪದ ಬೀದರಿನಲ್ಲಿ ಇನ್ನೂ ಜೀವಂತವಾಗಿ ಇದೆ.

ನಿಜಾಮ ಆಳ್ವಿಕೆಯ ಲಂಚ ವ್ಯಭಿಚಾರ ಒಂದು ಧರ್ಮದಂತೆಯೇ ಬೇರು ಬಿಟ್ಟುದುದನ್ನು ನೀತಿ ನಿಯಮಗಳ ತಲೆ ಕೆಳಗಾದುದು ತಾರಾನಾಥರು ಸಹಿಸದೇ ಹೋದರು. ಇದರ ವಿರುದ್ಧ ದಂಗೆ ಎದ್ದು ನಿಜಾಮನ ಸಿಂಹ ಸ್ವಪ್ನವಾದರು. ಇದರ ಪರಿಣಾಮವಾಗಿ ಇವರನ್ನು ರಾಯಚೂರು ಜಿಲ್ಲೆಯ ಯಾವುದೋ ಕಡೆಗೆ ನಿಜಾಮರ ನಿರಂಕುಶರು ಕಳುಹಿಸಿಬಿಟ್ಟರು.

**ಜಯದೇವಿತಾಯಿ ಲಿಗಾಡೆ :** ಸಾಹಿತಿಯಾಗಿ, ಸಮಾಜ ಸೇವಕಿಯಾಗಿ ಖ್ಯಾತಿ ಪಡೆದ ಮಹಿಳೆ. ಸೊಲ್ಲಾಪುರದ ಶ್ರೀಮಂತರಾದ ಮಡಿಕೆ ಚನ್ನಬಸ್ಸನವರ ಮಗಳು. ಶ್ರೀಮಂತರ ಚೆನ್ನಮಲ್ಲಪ್ಪ ಲಿಗಾಡೆಯವರು ಧರ್ಮಪತ್ನಿ. ಧಾರ್ಮಿಕ ವಾತಾವರಣದಲ್ಲಿ ಬೆಳೆದರು. ಖಾದಿಧಾರಿಗಳು ಶ್ರೀ ಸಿದ್ಧರಾಮೇಶ್ವರ ಪುರಾಣ ೧೯೬೫ ಇವರ ಮಹಾಕೃತಿ. ಹೀಗೆ ಅನೇಕ ಕವನ ಸಂಗ್ರಹಗಳು ಬರೆದಿದ್ದಾರೆ. ಕರ್ನಾಟಕದ ಬಗ್ಗೆ ಬಹಳ ಹೆಮ್ಮೆ ಸಮೃದ್ಧ 'ಕರ್ನಾಟಕಾಂಚೆ ರೂಪರೇಷಾ' ಪುಸ್ತಕ ಮರಾಠಿಯಲ್ಲಿ ಬರೆದು ಕರ್ನಾಟಕದ ಬಗ್ಗೆ ಮರಾಠಿಯರಿಗೆ ಪರಿಚಯ ಮಾಡಿಕೊಟ್ಟವರು ಎರಡನೆಯ ಮಹಾಯುದ್ಧದ ಕಾಲದಲ್ಲಿ ಬ್ರಿಟಿಷರು ಸೈನ್ಯದಲ್ಲಿ ವೀರಶೈವ ಘಟಕವೊಂದನ್ನು ರಚಿಸಲು ಯೋಚಿಸಿ ಇವರ ನೆರವು ಕೇಳಿದರು. ಆದರೆ ಇವರು ಒಪ್ಪಲಿಲ್ಲ. ಹೈದರಾಬಾದಿನಲ್ಲಿ ೧೯೪೮ರಲ್ಲಿ ರಜಾಕರರ ಭಯಾನಕ ಕೃತ್ಯಗಳಿಗೆ ಹೆದರಿ ಬಂದವರಿಗೆ ಆಶ್ರಯ ನೀಡಿದರು. ಕರ್ನಾಟಕ ಏಕೀಕರಣಕ್ಕಾಗಿ ಶ್ರಮಿಸಿದರು. ಹೈದರಾಬಾದ್ ಕರ್ನಾಟಕ ಭಾಗದಲ್ಲಿ ಕನ್ನಡ ಶಾಲೆಗಳಿಗೆ ಶಿಕ್ಷಕರನ್ನು ತಮ್ಮ ವೆಚ್ಚದಿಂದ ನೇಮಿಸಿದರು. ಸೊಲ್ಲಾಪುರವು ಕಲ್ಯಾಣ ನಾಡಿಗೆ ಸೇರಿಸಬೇಕೆಂದು ನ್ಯಾಯವಾದ ಬೇಡಿಕೆಯನ್ನು ಸರಕಾರ ನಡೆಸಿಕೊಡದಿದ್ದಾಗ ಬಸವಕಲ್ಯಾಣಕ್ಕೆ ಬಂದು ನೆಲೆಸಿದರು.

ಪಂಡಿತ ತಾರಾನಾಥ, ಶ್ರೀ ಚನ್ನಬಸವ ಪಟ್ಟದ್ದೇವರು, ಪ್ರಭುರಾವ ಕಂಬಳಿವಾಲೆ ಮುಂತಾದ ಧುರೀಣರ ಜೊತೆ ಸೇರಿಕೊಂಡು ಈ ಭಾಗದ ಏಕೀಕರಣಕ್ಕಾಗಿ ದುಡಿದವರು. ಸೋಲ್ಲಾಪುರದಲ್ಲಿ ಅದರ ಸುತ್ತಲಿನ ೮-೧೦ ಹಳ್ಳಿಗಳಲ್ಲಿ ಜಯದೇವಿ ತಾಯಿ ಲಿಗಾಡೆಯವರು ಅಕ್ಕನ ಜಯಂತಿ, ಬಸವ ಜಯಂತಿ, ನಾಡಹಬ್ಬಗಳ ಆಚರಣೆಯ ಮೂಲಕ ಕನ್ನಡತನವನ್ನು ಜಾಗೃತವಾಗಿರಿಸಿದರು. ಅವರು ಸ್ಥಾಪಿಸಿದ ಅಕ್ಕನ ಬಳಗ ಆ ನಿಟ್ಟಿನಲ್ಲಿ ಮಹತ್ವದ ಪಾತ್ರವಹಿಸಿತ್ತು. ಅಕ್ಕಲಕೋಟೆಯ ಅಚ್ಚಗನ್ನಡ ಪ್ರಾಂತ್ಯವಾದರೂ ಅದು ಕರ್ನಾಟಕ ಬಿಟ್ಟಿರುವುದಕ್ಕೆ ಮರುಗಿದರು. ಅಲ್ಲಿ ಜಯದೇವಿ ತಾಯಿ ಲಿಗಾಡೆಯವರ ಧ್ವನಿಗೆ ಓ ಗೊಟ್ಟವರೆಂದರೆ ದುದುನಿಯ ಕಲ್ಯಾಣ ಶೆಟ್ಟರು.

ಗುಲಬರ್ಗಾ ಭಾಗದಲ್ಲಿ ಶಂಕರಗೌಡ ಪಾಟೀಲರ ಉಪವಾಸ ಸತ್ಯಾಗ್ರಹದ ಪತ್ರಿಕೆಗೆ ಮುಂಬೈನ ಆಸ್ಪತ್ರೆಯಲ್ಲಿದ್ದ ತಾಯಿಯವರು ರಕ್ತದ ಸಹಿ ಮಾಡಿ ಗೌಡರ ಪ್ರತಿಕ್ರಿಯೆಗೆ ಸಮ್ಮತಿಸಿದರು. ಅಕ್ಕಲಕೋಟ ಸೊಲ್ಲಾಪುರದ ಜನರಿಗೆ ತಮ್ಮ ಹಕ್ಕು ಬಾಧ್ಯತೆಯ ಬಗ್ಗೆ ಎಚ್ಚರಿಸುತ್ತ ಬಂದರು. ೧೯೫೫ರಲ್ಲಿ ಅಂದಿನ ಪ್ರಧಾನಿ ಇಂದಿರಾಗಾಂಧಿಯವರು ಹುಬ್ಬಳ್ಳಿಗೆ ಬಂದಾಗ ಜಯದೇವಿ ತಾಯಿ ಲಿಗಾಡೆಯವರು ಬೀದರ ಜೊತೆಗೆ ಅಕ್ಕಲಕೊಟೆ, ಸೋಲ್ಲಾಪುರ ಮುಂತಾದ ಪ್ರಾಂತ್ಯ ಕರ್ನಾಟಕಕ್ಕೆ ಸೇರಬೇಕೆಂಮ ಒತ್ತಾಯಿಸಿದರು. ಮರಾಠಿಯ ಪರವಾಗಿ ಎದ್ದ ಧ್ವನಿ ಪ್ರಬಲವಾಯಿತು. ಕರ್ನಾಟಕ ಕೂಗು ಮಂಡಾಯಿತು. ರಕ್ತದಿಂದ ಮಾಡಿದ ಸಹಿ ಶಂಕರಗೌಡ ಪಾಟೀಲ್‌ರ ಮೇಲೆ ಬಹಳ ಪರಿಣಾಮ ಬೀರಿತ್ತು. ಅದೊಂದು ಮಹತ್ವದ ಪತ್ರವೆಂದು ಪರಿಗಣಿಸಲಾಗಿದೆ. ನನಗೆ ಬಹಳವಾಗಿ ಸಮ್ಮತಿಸಿದವರೆಂದರೆ ಜಯದೇವಿ ತಾಯಿ ಲಿಗಾಡೆ ಎಂದು ಶಕರಗೌಡ ಪಾಟೀಲ್‌ರೇ ಹೇಳಿದ್ದಾರೆ. ಒಟ್ಟಾರೆಯಾಗಿ ಹೇಳುವುದಾದರೆ ಈ ಭಾಗವ ಏಕೀರಣಕ್ಕಾಗಿ ದುಡಿದ ಮಹನೀಯರಲ್ಲಿ ಬಹುಮುಖ್ಯ ಪಾತ್ರವನ್ನು ವಹಿಸಿದವರು ಅದೂ ಸ್ತ್ರೀಯು ಎಂದರೆ ಬಹಳ ಹೆಮ್ಮೆಯ ವಿಷಯ.

## ೧.೫. ಭಾರತದ ಸ್ವಾತಂತ್ರ್ಯ ಸಂಗ್ರಾಮ ಹಾಗೂ ರಜಾಕಾರ ಹಾವಳಿ

**ಸ್ವಾತಂತ್ರ್ಯ ಸಂಗ್ರಾಮ :** ೧೮೮೫ರ ಚಲೇಜಾವ್ ಚಳುವಳಿ ಈ ಭಾಗಕ್ಕೂ ಬಹುಪರಿಣಾಮವನ್ನುಂಟು ಮಾಡಿತ್ತು. ತಾತ್ಯಾಟೋಪಿಯ ಸಂಬಂಧಿಯ ಮುಖಂಡತ್ವದಲ್ಲಿ ಭಾಲ್ಕಿಯಲ್ಲಿ ಒಂದು ಕಾನ್‌ಫೆರನ್ಸ್ ನಡೆಯಿತು. ಗಾಂಧಿಜಿಯವರ ಪ್ರಭಾವ ಹಾಗೂ ವಿಷಮ ಆರ್ಥಿಕ, ರಾಜಕೀಯ ಸ್ಥಿತಿಗತಿಗಳಿಂದಾಗಿ ಚಳುವಳಿಯ ರಭಸತೆ ಹೆಚ್ಚಿತ್ತು. ಕಾಂಗ್ರೆಸ್ ಹಾಗೂ ಸಮಾಜವಾದಿಗಳ ನಾಯಕರು ಹೋರಾಡಿದರು. ಇಲ್ಲಿ ಆರ್ಯ ಸಮಾಜದ ಪಾತ್ರ ಸ್ಮರಣೀಯ.

೧೭೨೧ರ ವೇಳೆಗೆ ಬೀದರನ್ನು ಸುಬೇದಾರ ನಿಜಾಮ ಉಲ್ಮುಲ್ಕನೇ ಸ್ವಾತಂತ್ರನಾಗಿ ಆಳಿದ ಅಂದಿನಿಂದ ಬೀದರಿನ ಮೇಲೆ ಶೋಷಣೆಯಾಗುತ್ತಲೇ ಬಂದಿದೆ. ೧೮೫೨ರ ಒಪ್ಪಂದದ ಪ್ರಕಾರ ಬೀದರ ಬ್ರಿಟಿಷ್ ವಶವಾಯಿತು. ತೆಲಂಗಾಣ ಮತ್ತು ಮರಾಠವಾಡ ಎಂದು ಎರಡು ಪ್ರಮುಖ ಭಾಗಗಳನ್ನಾಗಿ ನಿಜಾಮನ ಪ್ರಾಂತ್ಯದಲ್ಲಿ ಕರ್ನಾಟಕದ ಮೂರು ಜಿಲ್ಲೆಗಳಾದ ಬೀದರ, ಗುಲಬರ್ಗಾ ಹಾಗೂ ರಾಯಚೂರುಗಳು ಮರಾಠವಾಡಕ್ಕೆ ಸೇರಿದವು.

೧೮೬೦ರಲ್ಲಿ ನಿಜಾಮನಿಗೂ ಬ್ರಿಟಿಷರಿಗೂ ಆದ ಒಪ್ಪಂದದ ಪ್ರಕಾರ ರಾಯಚೂರು, ಗುಲಬರ್ಗಾ ಮತ್ತು ಬೀದರ ಜಿಲ್ಲೆಗಳು ನಿಜಾಮನ ಪಾಲಿಗೆ ಲಭಿಸಿದವು. ಬ್ರಿಟಿಷರ ನೆರವು ಪಡೆಯುತ್ತಲೆ ಇದ್ದ ನಿಜಮನು ಉಂಬಳಿಯಂತೆ ಹಲವು ಪ್ರದೇಶಗಳನ್ನು ಬ್ರಿಟಿಷರಿಗೆ ಬಿಟ್ಟು ಕೊಟ್ಟನು. ಭಾಷೆ ಪರಸಿ ಅಥವಾ

ಹೇರಳವಾದ ಪಾರಸಿ ಮಿಶ್ರಿತವಾದ ಮರಾಠಿ ಆದಿಲ್‌ಶಾಹಿ ಆಡಳಿತದ ಕೊನೆಯ ಭಾಗದಲ್ಲಿ ದರಬಾರಿ ಭಾಷೆ ಫಾರಸಿ ಆಗಿದ್ದರೂ ಸೀಮಿತುಗಳಲ್ಲಿಯೂ ಭಾಷೆಯು ಸಂಪೂರ್ಣ ಮರಾಠಿಯೆ ಆಗಿತ್ತು.

ಕನ್ನಡಿಗರ ರಾಜ್ಯ ಹೋದೊಡನೆ ರಾಜಕೀಯ ಸಂಸ್ಥೆಗೆ ಸಂಬಂಧಪಟ್ಟ ಪಾರಿಭಾಷಿಕ ಶಬ್ದಗಳನ್ನು ಜನರು ಮರೆತು ಬಿಟ್ಟರು. ಪೇಶ್ವೆ ರಾಜ್ಯದ ಉದಯದಿಂದ ಮರಾಠಿಯೇ ಸಾರ್ವತ್ರಿಕವಾದ ಬರಹದ ಭಾಷೆಯಾಯಿತು. ಕನ್ನಡವು ಬರೇ ಸಂತೆ, ಪೇಟೆ, ಹಳ್ಳಿ, ಮನೆ ಮಾರುಗಳಲ್ಲಿ ಮಾತ್ರ ಉಳಿಯಿತು. ಬಾಲಕರ ಅಕ್ಷರಭ್ಯಾಸವಾಗುವುದು ರೂಢಿ ಮೋಡಿಯಲ್ಲಿಯೇ ಆಯಿತು. ಮೋಡಿ ಎಂದರೆ ಮುರಿ ಎಂಬರ್ಥ(ಕನ್ನಡ ಮುರಿ).

ವ್ಯವಹಾರಸ್ಥ ಜನರು ಮರಾಠಿ ಕಲಿತರು. ಬ್ರಾಹ್ಮಣರು ಮರಾಠಿಗೆ ಮನಸೋತು ಕನ್ನಡವನ್ನು ತಿರಸ್ಕಾರದಿಂದ ಕಂಡರು. ಬಣಜಿಗರಂತೆ 'ಕನ್ನಡೇನು ಕಲೀತಿ' ಎಂಬಂತಾಯಿತು. ಮಠಗಳಲ್ಲಿ ಜಂಗಮರು ಮತ್ತು ಅಯ್ಯನವರು ತಮ್ಮ ಉಪಜೀವನದ ಸಾಧನವೆಂದು ಕನ್ನಡ ಕಲಿಯುತ್ತಿದ್ದರು.

೧೮೫೩ರ ಒಪ್ಪಂದದ ಪ್ರಕಾರ ನಿಜಾಮನಿಂದ ಬಳುವಳಿಯಾಗಿ ಬೀದರ, ಉಸ್ಮಾನಾಬಾದ ಹಾಗೂ ರಾಯಚೂರು ಜಿಲ್ಲೆಗಳನ್ನು ಬ್ರಿಟಿಷರು ಪಡೆದರು. ಬೀದರ ಪ್ರಾಂತ್ಯವು ನಳದುರ್ಗ ಜಿಲ್ಲೆಗೆ ಸೇರಿತ್ತು. ಈ ಪ್ರಾಂತ್ಯಗಳಿಗೆ ಅಧಿಕಾರಿಗಳಾಗಿ ಬಂದವರು ಉತ್ತರ ಭಾರತದ ಮುಸಲ್ಮಾನರಾಗಿದ್ದರಿಂದ ಆಡಳಿತ ಭಾಷೆಯ ಪಾರಸಿಯ ಬದಲು ಉರ್ದು ಆಯಿತು. ತಾಲ್ಲೂಕು ಮಟ್ಟದಲ್ಲಿ ಉರ್ದು ಮತ್ತು ದೇಶಿ ಭಾಷೆ ಬಲ್ಲವರನ್ನು ನೇಮಿಸಲಾಗುತ್ತಿತ್ತು. ಇಮಾಮ್‌ಜಂಗ್ ಬಹದ್ದೂರ್ ಸುಬೇದಾರನ ವರ್ಗಾವಣೆಯಾದುದರಿಂದ ಉರ್ದು ಬದಲು ಮರಾಠಿಯೇ ವ್ಯವಹಾರದ ಭಾಷೆಯಾಗಿ ಮುಂದುವರಿಯಿತು.

೧೯೨೧ರ ವೇಳೆಗೆ ಶಿಕ್ಷಣ ಕ್ಷೇತ್ರವನ್ನು ಕ್ರೈಸ್ತ ಮಿಷನರಿ ಸಂಸ್ಥೆಗಳು ಶಿಕ್ಷಣ ಕ್ಷೇತ್ರವನ್ನು ಪ್ರತ್ಯೇಕ ಇಲಾಖೆಯನ್ನಾರಂಭಿಸಿದರು. ಕನ್ನಡ ಭಾಷಿಕರ ಪ್ರಾಂತ್ಯಗಳು ಬ್ರಿಟಿಷ್ ಆಡಳಿತದಲ್ಲಿ ೨೦ ಘಟಕಗಳಲ್ಲಿ ಹಂಚಿ ಹೋದವು. ಅದರಲ್ಲಿ ಹೈದರಾಬಾದ್ ಸಂಸ್ಥಾನ ಘಟಕದಲ್ಲಿ ಬೀದರ ಕೂಡ ಸೇರಿತ್ತು. ಹೀಗಾಗಿ ಬೀದರ ಗುಲಾಮನ ಗುಲಾಮಗಿರಿಯಲ್ಲಿಯೇ ಸತ್ತು ಬದುಕಿತ್ತು.

ಆಸಫ್‌ಜಾಹಿ ಮನೆತನ ನಿಜಾಮನ ಆಳ್ವಿಕೆಯ ೧೭೨೪ರಲ್ಲಿ ನಿಜಾಮ-ಉಲ್-ಮುಲ್ಕ್‌ನು ಮೊಗಲರಿಂದ ದಖ್ಖನ್ನಿನ ಸುಬೇದಾರಿಯನ್ನು ಗಳಿಸಿಕೊಂಡು ಹೈದರಾಬಾದಿನಿಂದ ಆಳಲಾರಂಭಿಸಿದಂದಿನಿಂದ ಪ್ರಾಬಲ್ಯ ತಳೆದು ಬೀದರ ಪ್ರಾಂತೀಯ ರಾಜಧಾನಿಯಾಗಿ ಮುಂದುವರಿಯಿತು. ಅರಬರು, ಅಫಘನ್ನರು, ರೋಹಿಲರು ಕೊನೆಯಲ್ಲಿ ಸಿಖ್ಖರನ್ನು ಆಡಳಿತ ಸೇವೆಯಲ್ಲಿ ನೇಮಿಸಿಕೊಳ್ಳಲಾಯಿತು. ಕ್ರಿ.ಶ.೧೮೪೬ರಲ್ಲಿ

ಮಿಲಿಟರಿ ಅಧಿಕಾರಿಗಳ ಆಡಳಿತದ ಬದಲಾಗಿ ನಿಜಾಮ ರಾಜ್ಯವನ್ನು ಜಿಲ್ಲೆಗಳಾಗಿ ವಿಂಗಡಿಸಲಾಯಿತು. ರಾಜಧಾನಿಯಿಂದ ಪ್ರಾಂತೀಯ ರಾಜಧಾನಿಯಾಗಿದ್ದ ಬೀದರ ಈಗ ವಿಭಾಗದ ಕೇಂದ್ರವಾಯಿತು. ನಂತರ ೧೯೦೫ರಲ್ಲಿ ಬೀದರನ್ನು ಕೇವಲ ಜಿಲ್ಲಾ ಕೇಂದ್ರವನ್ನಾಗಿಸಲಾಯಿತು. ಈ ನಡುವೆ ಕ್ರಿ.ಶ.೧೮೮೯-೨೦ರಲ್ಲಿ ಉದಗೀರದ ದೇಶಮುಖ ಶಿವಲಿಂಗಪ್ಪ ಹಾಗೂ ಕ್ರಿ.ಶ.೧೮೫೨ರಲ್ಲಿ ಲಿಂಗಪ್ಪ ದಂಗೆಯೆದ್ದರು. ಈ ದಂಗೆ ಬೇಗನೇ ಅಡಗಿಸಲಾಯಿತು.

ಕ್ರಿ.ಶ.೧೮೮೧ರಲ್ಲಿ ಬೀದರನಲ್ಲಿದ್ದ ಶಾಲೆಯನ್ನು ಹೈಸ್ಕೂಲಾಗಿ ಪರಿವರ್ತಿಸಲಾಯಿತು. ಪಂಡಿತ ತಾರಾನಾಥರು ಈ ಹೈಸ್ಕೂಲಿನಲ್ಲಿ ಶಿಕ್ಷಕರಾಗಿದ್ದರು. ನಂತರ ೧೮೮೨ರಲ್ಲಿ ಸ್ಥಾಪಿತ ಆರ್ಯಸಮಾಜ ರಾಜಕೀಯ, ಸಾಮಾಜಿಕ ಕ್ರಾಂತಿಯನ್ನು ತರಲೆತ್ನಿಸಿತು. ನಿಜವಾದ ರಾಜಕೀಯ ಪರಿವರ್ತನೆಯ ಅಲೆ ಪ್ರಾರಂಭಗೊಂಡದ್ದು, ಕ್ರಿ.ಶ.೧೯೨೦ರಿಂದೀಚೆ. ಕ್ರಿ.ಶ.೧೯೨೨ರಲ್ಲಿ ಬೀದರಿನ ಜಿಲ್ಲೆ ಸಹಕಾರಿ ಬ್ಯಾಂಕಿನ ಸ್ಥಾಪನೆಯಾಯಿತು. ಜಿಲ್ಲೆಯ ಪ್ರಗತಿ ಆಮೆ ವೇಗ.

ಆಗಸ್ಟ್ ೧೫, ೧೯೪೭ರಂದು ಭಾರತ ಬ್ರಿಟಿಷ್‌ರಿಂದ ಸ್ವಾತಂತ್ರ್ಯಗೊಂಡಾಗ ಆ ಸೌಭಾಗ್ಯ ಇಲ್ಲಿಯವರಿಗೆ ದೊರೆಯಲಿಲ್ಲ. ಅಷ್ಟೇ ಅಲ್ಲ ರಜಾಕಾರ ಹಾವಳಿ ಭರವಾಯಿತು. ರೊಚ್ಚಿಗೆದ್ದ ಹಿಂದೂಗಳು ಮುಸಲ್ಮಾನರ ಯುವಕರನ್ನು ಹಿಂದೆ ಮುಂದೆ ನೋಡದೆ ಕೊಲೆ ಮಾಡ ತೊಡಗಿದರು. ಈ ಮುಂಚೆ ಮುಸಲ್ಮಾನರು ಹಿಂದುಗಳ ಮನೆಗಳು ಹೊಕ್ಕು ಲೂಟಿ ಮಾಡುವದು, ಹೆಣ್ಣುಮಕ್ಕಳ ಮಾನಭಂಗ, ಕನ್ಯೆಯರ ಅಪಹರಣ ಮಾಡುವುದು ಹಿಂದುಗಳು ಸಹಿಸದೆ ಹೋದರು. ಮುಸಲ್ಮಾನರ ಒತ್ತಾಯಕ್ಕೆ ಮಣಿಯದ ಸ್ತ್ರೀಯ ತೊಟ್ಟಿಲ ಕೂಸು ಮುಸಲ್ಮಾನರ ಈಟಿಗೆ ಧ್ವಜವಾಗುತ್ತಿತ್ತು. ಹೆದರಿ ಹಿಂದುಗಳು ಸೋಲಾಪುರ ಲಾತೂರು ಕಡೆಗೆ ಓಡಿ ಹೋದರು.

**ರಜಾಕಾರ ಹಾವಳಿ :** ರಾಯಕೋಡ ಹತ್ಯಾಕಾಂಡ, ನೈಜಾಮ ಕಾರಿನ ಮೇಲೆ ಬಾಂಬ್ ದಾಳಿ, ಗ್ರಾಮಗಳಲ್ಲಿ ಜನತಾ ಸರಕಾರಗಳ ಸ್ಥಾಪನೆ, ಬೀದರ ಜಿಲ್ಲೆಯಲ್ಲಿ ಹರಿದ ತಂತಿ ಕಡಿದ ಸೇಂದಿ ಮರಗಳ ಹೋರಾಟದ ತೀವ್ರತೆಯನ್ನು ಎತ್ತಿ ಸಾರುತ್ತಿದ್ದರೆ, ಭಾಲ್ಕಿಯ ಸುತ್ತಮುತ್ತಲಿನ ಪ್ರದೇಶದ ವ್ಯಾಪ್ತಿಗೆ ಬರುವ ಹೊನ್ನಾಳಿ ಗೋರ್ಟಾ, ಮುಚಳಂಬಿ, ಮಾಳೆಗಾಂವ್ ಮತ್ತು ಕಾದೇಪೂರ್ ಮುಂತಾದ ಕಡೆಗಳಲ್ಲಿ ರಜಾಕಾರ ಅರೆ ಸೈನಿಕ ಪಡೆಗಳೊಂದಿಗೆ ಜನರು ನೇರವಾಗಿ ಕೊರಡಿ, ಕತ್ತಿ, ಬರ್ಚಿ ಹಿಡಿದು ಹೋರಾಟ ನಡೆಸಿದರು. ಗೋರ್ಟಾದ ಕಾಳಗದಲ್ಲಿ ಎರಡೂ ಕಡೆಯವರು ಸಾವನ್ನಾಪ್ಪಿದಾಗ ಪರಿಸ್ಥಿತಿ ತುಂಬಾ ಗಂಭೀರವಾದ ರೂಪತಾಳಿ ಸಂಸ್ಥಾನದ ತುಂಬಾ ಇದೇ ರೀತಿಯ ಪರಿಸ್ಥಿತಿಯನ್ನಾವರಿಸಿತು.

ಭಾರತ ಸರಕಾರದ ಗೃಹಮಂತ್ರಿಗಳಾಗಿದ್ದ ಸರದಾರ ವಲ್ಲಬಾಯಿ ಪಟೇಲರ ಮುಂಜಾಗ್ರತ ಕ್ರಮದಿಂದಾಗಿ ಯುದ್ಧೋಪಾದಿಯ ೧೯೪೮ ಸೆಪ್ಟೆಂಬರ್ ೧೭ರಂದು ನಿಜಾಮನ ರಿಯಾಸತ್ತು ಭಾರತದ ಅವಿಭಾಜ್ಯ

ಅಂಗವಾಗಿ ಕರಗಿ ಹೋಯಿತು. ಬೀದರ ಭಾಗದಲ್ಲಿ ಶ್ರೀ ಭೀಮಣ್ಣ ಖಂಡ್ರೆ, ಸಿದ್ಧಲಿಂಗಪ್ಪ ಕಾಕನಾಳೆ, ರಾಮಚಂದ್ರ ವೀರಪ್ಪ ಹಾಗೂ ಮಹಾದೇವಪ್ಪ ಲೊಖೊಂಡೆ, ಬಸವರಾಜ ಚಿಟಗುಪ್ಪ, ಪ್ರಭುರಾವ್ ಕಂಬಿವಾಲೆ, ಆರ್.ವಿ.ಬೀಡಪ್ಪ ಮಾದಪ್ಪ ಮೂಲ್ಗೆ ನಿಡೇಬಾನ ಮುಂತಾದವರು ಗೃಹಸಚಿವರಿಗೆ ಬೆಂಬಲಿಗರಾದರು.

ಹೈದರಾಬಾದಿನಲ್ಲಿ ಭಾರತದ ಏಜೆಂಟ್ ಜನರಲ್‌ರಾಗಿದ್ದಕ್ಕೆ ಎಂ.ಮುನಷಿಯವರು ಕೊಟ್ಟ ಎಚ್ಚರಿಕೆ ನಿಜಾಮನ ಮೇಲೆ ಯಾವುದೇ ಪರಿಣಾಮವಾಗಲಿಲ್ಲ. 'ನಿಜಾಮಕೆ ಖಿಲಾಫ್ ಜೊ ಉಠಾಯೆಗಾ ಹಾಥ್, ಉಸೆ ಕಾಟಕರ್ ಫೇಕ್‌ದಿಯಾಜಾಯೆಗಾ' ಎಂದು ಕಾಸಿಮ್ ರಿಜ್ವಿ ಪ್ರಚೋದನಕಾರಿ ಭಾಷಣಗಳನ್ನು ಮಾಡ ತೊಡಗಿದನು. 'ಇಸ್ಲಾಮ್ ಖತರೆಮೆಂ ಹೈ!' ಎಂದು ಮುಸ್ಲಿಂ ಬಾಂಧವರಿಗೆ ಧರ್ಮಯುದ್ಧಕ್ಕೆ ಅಣಿಯಾಗುವಂತೆ ಘೋಷಿಸ ತೊಡಗಿದರು. ರಾಷ್ಟ್ರೀಯ ಧುರೀಣರನ್ನು ತುಂಬಿದ ಸಭೆಗಳಲ್ಲಿ ಅವಮಾನಗೊಳಿಸಲಾರಂಭಿಸಿದನು. ಈ ಮಧ್ಯ ಅಪ್ಪಟ ರಾಷ್ಟ್ರೀಯವಾದಿ ಉರ್ದುಪತ್ರಿಕೆಯ ಸಂಪಾದಕನ ಘೋರ ಹತ್ಯ ನಡೆದು ಸಂಸ್ಥಾನದ ಸಾಮಾಜಿಕ ಪರಿಸ್ಥಿತಿ ತೀರ ಉಲ್ಬಣಗೊಂಡಿತ್ತು.

ಪಂಡಿತ ವಿನಾಯಕ್‌ರಾವ್ ವಿದ್ಯಾಲಂಕರಾ ಅವರ ನೇತೃತ್ವದ ಹೈದರಾಬಾದ್ ವಿಮೋಚನಾ ಹೋರಾಟ ಸಮಿತಿ ಹೋರಾಟವನ್ನು ತೀವ್ರಗೊಳಿಸಿದಾಗ ಅದು ಒಂದು ವಿರೋಚಿತ ಹೋರಾಟದ ರೂಪ ತಾಳಿ ಆರ್ಯಸಮಾಜ ಎಂಬ ಜಾತ್ಯಾತೀತ ಮನೋಭಾವದ ಧಾರ್ಮಿಕ ಸಂಸ್ಥೆ ಈ ಹೋರಾಟವನ್ನು ಸಮರ್ಥಿಸ ತೊಡಗಿತ್ತು.

೧೯.೦೯.೧೯೪೮ರಂದು ಸೈನಿಕ ಕಾರ್ಯಚರಣೆಯ ಮೂಲಕವೇ ಭಾರತ ಒಕ್ಕೂಟವು ಹೈದರಾಬಾದ್ ಸಂಸ್ಥಾನವನ್ನು ಕಸಿದುಕೊಳ್ಳುವುದರಲ್ಲಿ ಪೂಜ್ಯ ಮ.ಘ.ಚ.ಚನ್ನಬಸವಪಟ್ಟದೇವರು, ಪ್ರಭುರಾವ ಕಂಬಳಿವಾಲೆ, ಜಯದೇವಿತಾಯಿ ಲಿಗಾಡೆ ಮುಂತಾದವರ ಪಾತ್ರ ಗಣನೀಯವಾದುದು. ಬೀದರನ ಸರದಾರ ಶರಣಗೌಡ ಇನಾಮದಾರರು ಕನ್ನಡ ಪರ ಧ್ವನಿಯನ್ನು ಕಾಪಾಡಿಕೊಂಡು ಬಂದವರು.

೧೯೪೯ ಮಾರ್ಚ್ ೫, ೬ ಹಾಗೂ ೭ರಂದು ೩೨ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದ ಉತ್ತಂಗಿ ಚನ್ನಪ್ಪನವರು ಕನ್ನಡದ ಎಲ್ಲ ಜನತೆಯು ಒಂದೆಡೆಗೆ ಬಂದು ತನ್ನ ಸಾಂಸ್ಕೃತಿಕ ಬಲವನ್ನು ಹೆಚ್ಚಿಸಿಕೊಳ್ಳಬೇಕು. ಇದೇ ಕರ್ನಾಟಕ ಏಕೀಕರಣದ ಮುಖ್ಯ ಉದ್ದೇಶವೆಂದು ಕರೆ ನೀಡಿದರು.

"ಶೀಘ್ರದಲ್ಲಿಯೇ ದಿಲ್ಲಿ ಚಲೋ", "ಜೇಲ್‌ಭರೋ" ಇತ್ಯಾದಿ ಚಳುವಳಿಗಳು ಆರಂಭಗೊಂಡವು. ಏಕೀಕರಣ ಆಗುವವರೆಗೆ ಶಂಕರಗೌಡರು ಉಪವಾಸ ನಿರತರಾದುದರ ಪ್ರಭಾವ ಅಧಿಕಾಯಿತು. ಹಳ್ಳಿ ಹಳ್ಳಿಗಳಲ್ಲಿ ಏಕೀಕರಣದ ಬಗೆಯ ಚರ್ಚೆ ಶಂಕರಗೌಡರ ಉಪವಾಸದಿಂದ ಪ್ರೇರಿತರಾಗಿ ತಮ್ಮೆಲ್ಲರ

ಒಗ್ಗಟ್ಟಿನ ಹೋರಾಟದಿಂದ ಮಾತ್ರ ಏಕೀಕರಣ ಸಾಧ್ಯವಾಗುತ್ತದೆಂದು ನಿರ್ಧರಿಸಿದರು. ಶಂಕರಗೌಡರನ್ನು ಕರ್ನಾಟಕದ ಗಾಂಧಿ ಎಂದು ಕರೆದರು.

೧೯.೦೪.೧೯೫೩ರಲ್ಲಿ ಬೀದರದ ವಿ.ಎನ್.ಪಾಟೀಲ್ ಕರ್ನಾಟಕ ಏಕೀಕರಣ ಸಮಿತಿಯೊಂದಿಗೆ ರಾಜ್ಯದ ವಿವಿಧ ಪ್ರಾಂತ್ಯದ ಮುಖಂಡರೊಂದಿಗೆ ಪ್ರಧಾನಮಂತ್ರಿಯನ್ನು ಏಕೀಕರಣಕ್ಕಾಗಿ ಒತ್ತಾಯಿಸ ತೊಡಗಿದರು. ಬೆಂಗಳೂರು ಅಲಸೂರಿನ ಕೇಂಬ್ರಿಡ್ಜ್ ನರ್ಸಿಂಗ್ ಹೋಂನಲ್ಲಿ ೧೭.೦೭.೧೯೯೬ರಂದು ಶ್ರೀ ಎಸ್.ಕೆ.ಕರೀಂಖಾನರನ್ನು ಸಂದರ್ಶಿಸಿದ ಶ್ರೀ ಕೆ.ಪಿ.ಸ್ವಾಮಿ, ಶ್ರೀ ಆರ್.ಎಸ್.ರಾಜಾರಾಂ ಮತ್ತು ಶ್ರೀ ಸಿ.ಆರ್.ಕೃಷ್ಣರಾವ್ ಅವರನ್ನು ಬಳ್ಳಾರಿ ಮತ್ತು ಬೀದರ ಎರಡು ಜಿಲ್ಲೆಗಳು ನಾನು ಪ್ರವಾಸ ಮಾಡಿ ಏಕೀಕರಣದ ಪರವಾಗಿ ಕೆಲಸ ಮಾಡಿದ್ದೇನೆ. ಆಜಾಧರು ಅಂದಿನ ಆಂಧ್ರಪ್ರದೇಶದ ಮುಖ್ಯಮಂತ್ರಿಯಾಗಿದ್ದರು. ಅವರು ಒಂದು ಇಂಚು ಭೂಮಿಯನ್ನು ಬಿಡುವುದಿಲ್ಲ ಎಂದು ರಾಜಧಾನಿ ಕರ್ನೂಲಿನಿಂದ ಹೊರಟ ಸಂಜೀವರೆಡ್ಡಿ ಅವರ ಮುಂದೆ ಹೇಳಿದರು. ಮತ್ತೆ ನಿಮಗೆ ತೆಲಂಗಾಣ ಬೇಕಾದರೆ ಬಳ್ಳಾರಿ ಮತ್ತು ಬೀದರನ್ನು ಬಿಟ್ಟುಕೊಡಿ, ಇಲ್ಲವಾದರೆ ತೆಲಂಗಾಣವನ್ನು ಪ್ರತ್ಯೇಕ ರಾಜ್ಯ ಮಾಡುತ್ತೇವೆ ಎಂಬ ಸೂಚನೆ ಮುಂದಿಟ್ಟರು.

ಆಲೂರು ಅಧವಾನಿ ಮತ್ತು ರಾಯದುರ್ಗಾ ತಾಲ್ಲೂಕುಗಳು ತಮಗೆ ಬೇಕೆಂದು ಸಂಜೀವರೆಡ್ಡಿ ಕೇಳಿದರು. ಸಿದ್ಧಗಂಗೆಯ ಸ್ವಾಮಿಗಳು ಆ ಮೊದಲೇ ಹಂಪಿ, ಬಸವಕಲ್ಯಾಣಗಳಿಲ್ಲದ ಕರ್ನಾಟಕ ನಿರ್ಮಾಣವಾಗುತ್ತಲಿದೆ ಎಂದು ನೊಂದು ಹೇಳಿದರು. ಬಳ್ಳಾರಿ ಮತ್ತು ಬೀದರನ್ನು ನಾವು ಕರ್ನಾಟಕಕ್ಕೆ ಕೇಳಲು ಅವರ ಮಾತುಗಳು ಕಾರಣವಾಗಿದ್ದವು. ನಾನು ಪ್ರವಾಸ ಮಾಡಿದ್ದು ಬಿ.ಶಿವಮೂರ್ತಿ ಶಾಸ್ತ್ರಿ ಜೊತೆಯಲ್ಲಿ.

ಎಸ್.ಎಸ್.ಜಿ.ಯವರು ಬೀದರ ಭಾಗದಲ್ಲಿ ಏಕೀಕರಣದ ಬಗೆಗೆ ಯಾವ ರೀತಿಯ ಅಭಿಪ್ರಾಯವಿತು ಎಂಬುದಕ್ಕೆ ಎಸ್.ಕೆ.ಕರೀಮ್ ಖಾನರು ಎಲ್ಲರಿಗೂ ಕರ್ನಾಟಕಕ್ಕೆ ಸೇರುವ ಆಸೆ ಇತ್ತು ಅದರಲ್ಲಿ ಕನ್ನಡಪರ ಕೆಲಸ ಮಾಡಿದವರು ಪ್ರಭುರಾವ್ ಕಂಬಳಿವಾಲೆ, ಭಾಲ್ಕಿಯ ಹಿರೇಮಠದ ಪಟ್ಟಾಧ್ಯಕ್ಷರಾದ ಪೂಜ್ಯ ಶ್ರೀ ಚನ್ನಬಸವಪಟ್ಟದೇವರು. ಮನೆಗೊಬ್ಬರಾದರೂ ಕನ್ನಡ ಕಲಿಯುವಂತೆ ಪ್ರೇರಣೆ ನೀಡಿದ ಗುರುಗಳು. ಹಲವು ನಿರ್ಬಂಧಗಳ ನಡುವೆ ಕನ್ನಡ ಶಾಲೆಗಳನ್ನು ಲಾತೂರ್, ಭಾಲ್ಕಿ, ಉದಗೀರ, ಬೀದರ್‌ದ ಕಾರಾಮುಂಗಿ, ಜಹಿರಾಬಾದ್ ಮುಂತಾದ ಕಡೆಗಳಲ್ಲಿ ಕನ್ನಡ ಶಾಲೆಯನ್ನು ತೆರೆಯಲು ಸಾಧ್ಯವಾಯಿತು. ಲಾತೂರು, ಉದಗೀರ ಮಹಾರಾಷ್ಟ್ರಕ್ಕೆ ಹಾಗೂ ಕಾರಾಮುಂಗಿ ಜಹಿರಾಬಾದ ಆಂಧ್ರಪ್ರದೇಶದ ರಾಜ್ಯಕ್ಕೆ ಸೇರಿವೆ. ಹೈದರಾಬಾದ್ ಕರ್ನಾಟಕ ಪ್ರದೇಶದ ಕರ್ನಾಟಕದ ಮೇಲೆ ಅನ್ಯಾಯವಾಗಿದೆ ಎಂದು ವಿಧಾನ ಪರಿಷತ್ತಿನಲ್ಲಿ ಪ್ರಸ್ತಾಪಿಸಿದ ಶಾಸಕ ಶ್ರೀ ಭೀಮಣ್ಣಾ ಖಂಡ್ರೆ ಅವರು

ಪ್ರತ್ಯೇಕ ರಾಜ್ಯಸ್ಥಾಪನೆ ಅನಿವಾರ್ಯ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದು ಪ್ರಕಟವಾಗಿದೆ. ಅದನ್ನು ಮತ್ತೊಬ್ಬ ಶಾಸಕ ಡಾ.ಎಂ.ಆರ್.ತಂಗಾ ಸಮರ್ಥಿಸಿದ್ದಾರೆ.

೧೯೫೫ರ ಜನವರಿ ತಿಂಗಳ ಕೊನೆಯವಾರ ಬಸವಕಲ್ಯಾಣದಲ್ಲಿ ನಡೆದ ಅಖಿಲ ಭಾರತ ವೀರಶೈವ ಮಹಾಸಭೆಯ ಅಧಿವೇಶನವನ್ನು ಉದ್ಘಾಟಿಸಿದಾಗಲೂ ಜಯಚಾಮರಾಜ ಒಡೆಯರು ಕರ್ನಾಟಕದ ಏಕೀಕರಣವಾಗಬೇಕು ಎಂದು ತಮ್ಮ ಸ್ಪಷ್ಟ ಅಭಿಪ್ರಾಯವನ್ನು ತಿಳಿಸಿದರು.

ಹುಮನಾಬಾದ, ಭಾಲ್ಕಿ ಮತ್ತು ಔರಾದ ತಾಲೂಕುಗಳು ಮಹಾರಾಷ್ಟ್ರಕ್ಕೆ ಸೇರಬೇಕೆಂಬ ಅಭಿಪ್ರಾಯ ಆ ಸರಕಾದ್ದಾಗಿತ್ತು. ಎಲ್ಲಾ ಆಯೋಗ, ಸಮಿತಿಗಳ ಮೂಲಕವೂ ಉಳಿದು ಬಂದ ಬೀದರ್ ಸಮಸ್ಯೆ ಮಹಾಜನ ಆಯೋಗದ ಮುಂದೆಯೂ ಪ್ರಸ್ತಾಪಿತವಾಯಿತು. ಆಯೋಗವು ಮಹಾರಾಷ್ಟ್ರದ ಬೇಡಿಕೆಯನ್ನು ಪೂರೈಸುವಂತೆ ಬೀದರ ಜಿಲ್ಲೆಯ ಮೈಸೂರು ಉಳಿಯಬೇಕೆಂಬ ಶಿಫಾರಸ್ಸು ಮಾಡಿತು.

## ೧.೬. ಬೀದರ್ ಕನ್ನಡಿಗರ ವಲಸೆ ಹಾಗೂ ಅದರಿಂದಾದ ಭಾಷಾ ಪರಿಣಾಮ

ಬೀದರ್ ಜಿಲ್ಲೆಯಿಂದ ವಲಸೆ ಹೊದವರು ಚದುರಿದಂತೆ ಹೈದರಾಬಾದು, ಮುಂಬೈ ಮತ್ತು ಪುಣೆಯಲ್ಲಿ ಬದುಕುತ್ತಿದ್ದಾರೆ. ಹೋದವರೆಲ್ಲ ಬಡತನ ರೇಖೆಗಿಂತ ಕೆಳಗಿದ್ದವರು. ಅವರಿಗೆ ಇಲ್ಲಿ ನೆಲೆ ಇಲ್ಲಂತಿಲ್ಲ. ಬರಗಾಲ ಪೀಡಿತದಿಂದೊ ಅತಿವೃಷ್ಟಿಯಿಂದೋ ಕೂಲಿ ಕೆಲಸ ಅರಿಸಿಕೊಂಡು ಹೋದಂತಹ ಅಸಂಘಟಿತರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. "ಹೊರ ವಲಸೆ, ಒಳವಲಸೆ ಈ ಸಮಾಜದ ಅನಿವಾರ್ಯ ಪ್ರಕ್ರಿಯೆಗಳು" ಎಂದು ಎಂ.ಎಂ.ಕಲಬುರ್ಗಿಯವರು ಹೇಳುತ್ತಾರೆ.

ಈ ವಲಸೆ ಹೋದ ಬೀದರಿನ ಜನಕ್ಕೆ ಕ್ಷೇತ್ರಕಾರ್ಯದ ಮೂಲಕ ಸಂಪರ್ಕಿಸಿ, ಸಂದರ್ಶಿಸಿ, ಮಾಹಿತಿ ಸಂಗ್ರಹಿಸಿ ಅವರ ಸಾಂಸ್ಕೃತಿಕ ಬದುಕು ವಾಸ್ತವದ ಸ್ಥಿತಿಗತಿಗಳನ್ನು ಈ ಭಾಗದಲ್ಲಿ ಹಿಡಿದಿಡಲಾಗಿದೆ. ಪ್ರಾಣಿ ಪಕ್ಷಿಗಳಂತೂ ವಲಸೆ ಹೋಗುವುದೇ ಅವುಗಳ ಬದುಕಾಗಿದೆ. ಅವುಗಳಂತೆ ಮನುಷ್ಯನೂ ವಲಸೆ ಹೋಗಿ ಯಾವುದೋ ಕೀಳು ಕೆಲಸದಲ್ಲಿ ತೊಡಗುತ್ತಾನೆ ಇದು ಅನಿವಾರ್ಯ. ಮನುಷ್ಯ ಒಂದು ಪ್ರಾಂತ್ಯದಿಂದ ಇನ್ನೊಂದು ಪ್ರಾಂತ್ಯಕ್ಕೆ ವಲಸೆ ಯಾಕೆ ಹೋಗಬಾರದು, ವಲಸೆ ಹೋಗುವುದೇನು ಹೊಸತೇನಲ್ಲ. ಇತಿಹಾಸದ ಪುಟಗಳು ತಿರುವುತ್ತಾ ಹೋದರಾ ವಲಸೆ ಬಂದ ಉದಾಹಣೆಗಳು ಬಹಳ ಸಿಗುತ್ತವೆ.

ಅರಸರು ಆಳಿದರು ಅಳಿದರು ಜನರ ಅಲೆಮಾರಿತನ ತಪ್ಪಿಲ್ಲ. ಕೆಲವರಸರಂತು ಜನರೆಲ್ಲ ಸೈನಿಕರು ರಾಜಧಾನಿಯಲ್ಲಿ ಇರಬೇಕೆಂದು ನಂಬಿದರು. ಚಾಲುಕ್ಯರು ಬಾದಾಮಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದು ನಂತರ ಕಲ್ಯಾಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದು, ಬಹಮನಿಯರು

ಗುಲಬರ್ಗಾದಿಂದ ಬೀದರ್ ರಾಜಧಾನಿಯನ್ನಾಗಿ ಮಾಡಿಕೊಂಡದ್ದು, ಮಹಮ್ಮದ ಬಿನ್ ತುಘಲಕನು ತನ್ನ ರಾಜಧಾನಿಯನ್ನು ದಿಲ್ಲಿಯಿಂದ ದೇವಗಿರಿಗೆ, ದೇವಗಿರಿಯಂದ ದಿಲ್ಲಿಗೆ ಸ್ಥಳಾಂತರಿಸಿದಾಗ ಓಡಾಡುವ ಮಧ್ಯದಲ್ಲಿ ಜನರು ತಮ್ಮ ಭಾಷೆಯ ಬಿಡಾರವನ್ನು ಬಿಟ್ಟವರು. ಮೂಲದಲ್ಲಿ ನೆಲಸಿದವರಿಗೆ ವಲಸಿದವರನ್ನಾಗಿ ಮಾಡಿದ್ದು ಈ ಸಂದರ್ಭದಲ್ಲಿ ನೆನೆಯಬಹುದು. ಜನರು ಅರೆಹೊಟ್ಟೆ ಅರೆಬಟ್ಟೆ ಅವರು ಪಡುವ ಕಷ್ಟ ನಷ್ಟಗಳು ಸಾವುನೋವುಗಳು ಹೇಳ ತೀರದು. ಇಂಥ ಜನರಿಗೆ ಬೀದರಿನ ಭಾಷೆಯಲ್ಲಿ 'ಘುಳಿಮಂದಿ' ಎಂದು ಕರೆಯುತ್ತಾರೆ. ಈ ಹಿನ್ನೆಲೆ ಗಮನಿಸಿದರೆ ವಲಸೆ ಬರೀ ಕ್ಷಾಮ, ಬರಗಾಲ, ಅತಿವೃಷ್ಟಿಗೆ ಸೀಮಿತವಾದುದಲ್ಲ. ಎಂದು ಗೋಚರವಾಗುತ್ತದೆ. ಈ ಸಂದರ್ಭದಲ್ಲಿ ಭಾಷೆ ಮುಖ್ಯ ಅಲ್ಲ, ಬದುಕು ಮುಖ್ಯವಾಗಿ ಕಾಣುತ್ತದೆ.

ಕೆಲವರಂತೂ ಒಂದೇ ಪಟ್ಟಣದಲ್ಲಿ ಬಾಳವೆ ಮಾಡುವುದಿಲ್ಲ. ಅವರಲ್ಲಿ ಮುಖ್ಯರೆಂದರೆ ಕರಕುಶಲ ಕಲೆಯನ್ನ ತಯಾರಿಸಿ ಮಾರಾಟ ಮಾಡುತ್ತ ಊರಿಂದ ಊರಿಗೆ ಅಲೆದಾಡುತ್ತಿರುತ್ತಾರೆ. ತಾವಿದ್ದಲ್ಲಿಯೇ ಕಚ್ಚಾ ವಸ್ತುಗಳನ್ನು ತಂದು ಪಕ್ಕಾ ವಸ್ತುಗಳನ್ನು ಸಿದ್ಧಪಡಿಸುತ್ತಾರೆ.

ವಲಸೆ ಹೋದ ಜನರ ಉದ್ಯೋಗ ಒಂದೇ ಬಗೆಯದಾಗಿರುವುದಿಲ್ಲ. ಆಯ ಪ್ರಾಂತ್ಯಕ್ಕೆ ಸಂಬಂಧಿಸಿದ ಅನಿವಾರ್ಯ ಕೆಲಸ ಆಯ್ದುಕೊಳ್ಳುತ್ತಾರೆ. ಲಿಂಗಾಯತರು ಹೋಟೆಲುಗಳಲ್ಲಿ ಮಾಣಿಯ ಕೆಲಸವೋ, ಬಂಡಿಯಲ್ಲಿ ಚಾಯ್ ಮಾರಾಟವೊ, ಆಟೋ ನಡೆಸುವುದೋ ಮಾಡಿದರೆ ಮುಸಲ್ಮಾನರು ಸೈಕಲ್ ರಿಕ್ಷಾ ಹೊಡೆಯುವುದೋ, ತರಕಾರಿ ಹಣ್ಣುಗಳು ಮಾರುವುದೋ ಮಾಡಿದರೆ ಪರಿಶಿಷ್ಟ ಜಾತಿಯ ಜನರು ಇದಕ್ಕೂ ಕೀಳಾದ ಕೆಲಸವನ್ನೇ ಆರಿಸಿಕೊಂಡಿದ್ದಾರೆ. ಹೋಟೆಲ್ ಪಾತ್ರೆಗಳು ಚಿಕ್ಕುವುದೋ ಯಾವುದೋ ಒಬ್ಬ ಮಾಲಿಕನ ಕಂಪನಿ ಸೇರಿಕೊಂಡು ಬ್ಯಾಂಡ್ ಬಾರಿಸುವುದೋ ಮಾಡುತ್ತಾರೆ. ಮೈಗಳ್ಳರು ಭೀಕ್ಷೆ ಬೇಡಿಕೊಂಡೇ ಜೀವನ ನಡೆಸುವುದು ಕಾಣಸಿಗುತ್ತಾರೆ. ಕೆಲವರು ಗೋಡೆ ಕಟ್ಟುವುದು ಸೆಂಟ್ರಿಂಗ್ ಮಾಡವುದು ಮುಂತಾದ ಜಡವಾದ ಕೆಲಸಗಳೆಲ್ಲ ಇವರೇ ಮಾಡುತ್ತಾರೆ.

ಒಂದು ಭಾಷೆಯನ್ನು ಬಳಸುವ ಜನರು ಅದೇ ಪ್ರಾಂತ್ಯದಲ್ಲಿರಬೇಕೆಂಬುದು ಭಾರತ ಸಂವಿಧಾನದ ನಿರ್ಬಂಧವೇನಲ್ಲ. ಒಂದೇ ಪ್ರದೇಶದಲ್ಲಿ ಹತ್ತಾರು ಭಾಷೆಯನ್ನಾಡುವ ಜನರು ಸಿಗುತ್ತಾರೆ. ಹೀಗಾಗಿ ದ್ವಿಭಾಷಿಗರು ತ್ರೈಭಾಷಿಗರಾಗುವುದು ಅಲ್ಲಿಯ ಜನರಿಗೆ ಅನಿವಾರ್ಯವಾಗುತ್ತದೆ.

ಕ್ರಿ.ಶ.೧೯೪೭ರಲ್ಲಿ ಭಾರತ ಸ್ವಾತಂತ್ರ್ಯಗೊಂಡರು ಬೀದರ ಭಾಗ ಹೈದರಾಬಾದಿನ ನಿಜಾಮನ ಕೈಯಲ್ಲಿತ್ತು. ೧೯೪೮ ಸೆಪ್ಟೆಂಬರ್ ೧೭ರಂದು ಸರದಾರ ವಲ್ಲಭಭಾಯಿ ಪಟೇಲರ ನೇತೃತ್ವದ ಸಹಾಯದಿಂದ ಸ್ವಾತಂತ್ರಗೊಂಡಿತು. ಕನ್ನಡ ಭಾಷಿಗರ ರಾಜ್ಯಭಾಷೆ ಆಡಳಿತ ಭಾಷೆ ಉರ್ದು ಆಯಿತು. ಉರ್ದು ಶಾಲೆಗಳೇ ತೆರೆದವು ಹೀಗಾಗಿ ಈ ಹಿಂದಿನ ತಲೆಮಾರಿನ ಜನರಲ್ಲಿ ಉರ್ದು ಭಾಷೆಯನ್ನೆ

ಅನಿವಾರ್ಯವಾಗಿ ಕನ್ನಡಿಗರು ಕಲಿತುಕೊಂಡರು. ಹಿರಿಯರೆಲ್ಲಿ ಹೇಳಿಕೆಯಾಗಲಿ ಗಾದೆ ಮಾತುಗಳಾಗಲಿ ಉರ್ದು ಭಾಷೆಯದೆ ಹೇಳುತ್ತಾರೆ.

"ಆದಮಿ ಬನಾನ ಬೋಲೆತೊ ಬಂದರ ಬನಗಯ"
"ಜಂಗಲ್ ಮೆಂ.ಮಂಗಲ್"
"ಘೋಡಾ ಘಾಂಸ್ ನಹಿ ಖಾತಾ" ಇತ್ಯಾದಿ

ಪ್ರತ್ಯೇಕವಾಗಿ ಮಾದಿಗರ ಬಹಳ ಕುಟುಂಬಗಳು ಕ್ರೈಸ್ತ ಧರ್ಮವನ್ನು ಸ್ವೀಕರಿಸಿದ್ದಾರೆ. ಇವರು ಹೈದರಾಬಾದ್, ಮುಂಬೈಗಳಲ್ಲಿ ಮುಂದಾಳತ್ವ ವಹಿಸಿ ಪಾದರಿಯಾಗಿದ ಉದಾಹರಣೆಗಳು ಸಾಕಷ್ಟು ಸಿಗುತ್ತವೆ. ಸ್ವಗ್ರಾಮವನ್ನು ಬಿಟ್ಟು ಪರಪಟ್ಟಣದಲ್ಲಿ ಸೇರಿ ಈ ಹುದ್ದೆ ಆರಿಸಿಕೊಂಡು ಹೋಗುವದು ಅಂತೆಯೇ ಸ್ಥಾನಂತರಗೊಳ್ಳುವುದು ವಲಸೆ Migration is a sheft in the place of residence for length of time ಎಂದು ಇಂಗ್ಲಿಷಿನಲ್ಲಿ ಕರೆಯುತ್ತಾರೆ. ಒಂಟಿಯಾಗಿ ಹೋಗಿ ಅಲ್ಲಿಯ ಪರಿಸರ ನೋಡಿಕೊಂಡು ಬರುತ್ತಾನೆ. ಭವಿಷ್ಯದ ಬಗ್ಗೆ ಯೋಚಿಸಿ ಸ್ಥಾನಾಂತರ ಹೊಂದುತ್ತಾನೆ.

ಬೀದರ್ ಜಿಲ್ಲೆಯ ಔರಾದ ತಾಲೂಕಿನ ನಿಡೋಡಾ ಗ್ರಾಮದ ಎನ್.ಎಲ್.ವಾಧನಿ ಲೂಕ್ ಹೊಟ್ಟೆಪಾಡಿಗಾಗಿ ಹೈದರಾಬಾದ್‌ಗೆ ಹೋಗಿ ಎ.ಪಿ.ಇ.ಸಿ.ಇ.ಮೀಟರ್ ಫ್ಯಾಕ್ಟರಿಯಲ್ಲಿ ಕೆಲಸಕ್ಕೆ ಸೇರಿ ಜೊತೆಗೆ ನಿವ್ಯೂ ಅಪೋಸ್ತಲಿಕ ಕ್ರೈಸ್ತ ಪಾದರಿಯಾಗಿ ಸೇವೆ ಸಲ್ಲಿಸಿ ೧೯೮೨ರಲ್ಲಿ ಚರ್ಚ್ ಆಫ್ ಕ್ರೈಸ್ಟ್ ಸಂಘದ ಪಾದರಿಯಾಗಿ, ಭಾರತ ಡೈರೆಕ್ಟರ್ ಆಗಿ ಸೇವೆ ಸಲ್ಲಿಸಿದ್ದಾರೆ. ಅವರ ಕೈಯಲ್ಲಿ ಅವರ ತಮ್ಮಂದಿರಾದ ಎನ್.ಎಲ್.ವಸಂತಕುಮಾರ ನಿಜಾಮಾಬಾದ ಹಾಗೂ ಕರಿಮ್‌ನಗರ ಡೈರೆಕ್ಟರ್ ಎನ್.ಎಲ್.ವಿಜಯಕುಮಾರ ಮುಂಬೈ ಡೈರೆಕ್ಟರ್ ಆಗಿದ್ದಾರೆ. ಹಾಗೆಯೇ ಉಳಿದ ಅದೇ ಗ್ರಾಮದವರಾದ ಜ್ಞಾನಿ ಅಪೋಸ್ತಲಿಕ ಸಭೆಯಲ್ಲಿ ಅಪೋಸ್ತಲ ಎಂಬ ದೊಡ್ಡ ಹುದ್ದೆಯಲ್ಲಿದ್ದಾರೆ. ಜಗನ್ನಾಥ ನಾಸಿಕ್ ಡೈರೆಕ್ಟರ್, ಶಾಂತಕುಮಾರ್ ಬೆಳಗಾಂವ್ ಡೈರೆಕ್ಟರ್, ಸುಧಾಕರ್ ಮೆಥೋಡಿಸ್ಟ ಸಂಘದ ಪಾದರಿ, ಗಣಪತಿ ಚರ್ಚ್ ಆಫ್ ಕ್ರೈಸ್ಟ್ ಪಾದಿಯಾಗಿದ್ದಾರೆ. ಉಳಿದ ಗ್ರಾಮದವರಾದ ಕುಮಾರ ಚಿಂಚೋಳಿಯ ಎ.ಮಾರುತಿ ಸುರತಿನ ಡೈರೆಕ್ಟರ್ ಶಂಕರ ದೇಗುಲೂರು ಡೈರೆಕ್ಟರ್ ರಕ್ಷಾಳದ ಜಿ.ಶಂಕರ ಔರಂಗಾಬಾದ್ ಡೈರೆಕ್ಟರ್, ಬೀದರಿನ ಪಿ.ಜೆ.ಜೋಶೆಫ್ ಬೆಂಗಳೂರಿನ ಡೈರೆಕ್ಟರ್, ಪ್ರೇಮದಾಸ ಗುಲಬರ್ಗಾದ ಡೈರೆಕ್ಟರ್, ಡಿ.ರೂಬೇನ್ ಬೀದರ ಡೈರೆಕ್ಟರ್ ಡಿ.ಪ್ರಕಾಶ ಬೀದರಿನ ಡೈರೆಕ್ಟರ್, ಖತಗ್ಯೆಯ ಮಾರ್ಕಸ್ ವಾಸಮ್ ಮುಂತಾದವರು. ಇವರುಗಳಂತೆ ಪಾದರಿಗಳಾಗಿ, ಬೀದರ್ ತಾಲೂಕಿನ ಹಳೆಂಬೂರ ಶಂಕರ್, ಭಾಲ್ಕಿ ತಾಲೂಕಿನ ನಿಡೇವಾನ ಗ್ರಾಮದ ಜಗನ್ನಾಥ ಬೇಂದ್ರೆ, ಕೆ.ಮನೋಬರ, ಭಾತಂಬ್ರಾದ ಬಿ.ಎಲ್.ಕರುಣಾಕಾರ ವಿಳಾಸಪುರದ ಕಾಶಿನಾಥ ಮುಂತಾದವರೆಲ್ಲ ಸೇವೆ ಸಲ್ಲಿಸುತ್ತಲಿದ್ದಾರೆ. ಬೀದರಿನ ಮಳಚಾಪುರ ಗ್ರಾಮದ ಶಿರೋಮಣಿ, ಮನೋಹರ, ಬೀದರಿನ ದೇವೆಂದ್ರಪ್ಪಾ ಮುಂತಾದವರು.

ಇವರೆಲ್ಲರೂ ಕನ್ನಡ, ತೆಲಗು, ಹಿಂದಿ, ಮರಾಠಿ ಹಾಗೂ ಇಂಗ್ಲಿಷ್ ಭಾಷೆಗಳಲ್ಲಿ ಪ್ರವಚನ ಮಾಡುವ ಚಾಣಕ್ಷತೆ ಹೊಂದಿದ್ದಾರೆ. ಇವರೆಲ್ಲ ಹೈದರಾಬಾದ್ ನಿವಾಸಿಯಾಗಿದ್ದು, ವಿವಿಧಡೆಯಲ್ಲಿಯ ಡೈರೆಕ್ಟರಿಯನ್ನು ನಿರ್ವಹಿಸುತ್ತಾರೆ.

ಹೊಲಿಯ ಜಾತಿಯರೆಲ್ಲ ಮನೆಕಟ್ಟುವುದು ಭಂಡಿ ನಡೆಸುವುದು, ಬ್ಯಾಂಡ್ ಬಾರಿಸುವುದು, ಮೆಕ್ಯಾನಿಕ್ ಮಾಡುವುದು, ಸೆಂಟ್ರಿಂಗ್ ಮಾಡುವುದು, ಮಾಡಿದರೆ ಮರಾಠ ಹಾಗೂ ಲಿಂಗಾಯತರು ಆಟೋ ನಡೆಸುವುದೋ ಚಾಯ್ ಬಂಡಿ ಇಡುವುದೊ ಸೀಜನ್ ವೃತ್ತಿಯೋ ಮುಂತಾದವುಗಳು ಮಾಡಿದರ ಮುಸಲ್ಮಾನರು ಸೈಕಲ್ ರಿಕ್ಷಾ ನಡೆಸುವುದೊ ತರಕಾರಿ, ಹಣ್ಣುಗಳು ಮಾರಾಟ ಮಾಡುವುದೋ, ಆಟೋ ಚಲಾಯಿಸುವುದೋ, ಸೈಕಲ್ ರಿಕ್ಷಾ ರೀಪೆರಿಂಗ್ ಕೆಲಸವನ್ನು ಕೈಗೆತ್ತಿಕೊಳ್ಳುತ್ತಾರೆ.

ವಲಸೆ ಹೋದ ಜನರು ಆಗಾಗ ತಿರುಗಿ ಬಂದು ಪುನಃ ಹೋಗುವುದು ಮಾಡುವುದರಿಂದ ಮಕ್ಕಳ ಶಿಕ್ಷಣದ ಮಟ್ಟ ಕುಂದುತ್ತದೆ. ಸಾವು ಬದುಕಿನ ಮಧ್ಯೆ ನುಸುಳಿದೇನೆಂದು ಗಾಬರಿಪಟ್ಟು ನೊಂದು ಕೊಳ್ಳುತ್ತಾನೆ. ಈ ಪರಿಸ್ಥಿತಿಯಲ್ಲಿ ಅವನು ನಗರಜೀವನದ ಸತ್ಯಸತ್ಯಾಗಳನ್ನರಿತುಕೊಂಡು ಮರಗುವುದುಂಟು. ಒಂದೇ ಕೋಣೆಯಲ್ಲಿ ಅಡುಗೆ ವಿಶ್ರಾಂತಿ ಬರುಬರುತ್ತಾ ಮಕ್ಕಳು ದೊಡ್ಡವರಾಗುತ್ತಲೂ ಇನ್ನೂ ಸಮಸ್ಯೆಗಳು ಉದ್ಭವಿಸುತ್ತವೆ.

ಭಾಷೆ ಬದುಕಿಗೆ ಬಹಳ ಅವಶ್ಯ. ರಾಷ್ಟ್ರೀಯ ಭಾಷೆಯಾದ ಹಿಂದಿಯನ್ನು ಕಲಿತರೆ ಭಾರತದ ಯಾವುದೇ ಮೂಲೆಯಾದರೂ ತನ್ನ ನಾಡಿನ ಸುಳಿವು ಕೊಡದೆ ಬದಕಬಹುದು. ಹೀಗಾಗಿ ಬೀದರ್ ಜಿಲ್ಲೆಯವರಿಗೆಲ್ಲರಿಗೂ ಹಿಂದಿ ಭಾಷೆ ಸರಾಗವಾಗಿ ಬಂದಿರುವುದರಿಂದ ಹೋದಲ್ಲಿ ಅವರು ದ್ವಿಭಾಷೆಗರಾಗುತ್ತಾರೆ. ಯಾವ ವ್ಯಕ್ತಿಯೆ ಆಗಲಿ ವಲಸೆ ಬಂದ ವ್ಯಕ್ತಿ ಬಳೆಯ ತಮ್ಮ ನೆಲಯ ಬಂಧು ಬಳಗದ ನೆನಪು ತೆಗೆದು ಅತ್ತು ಬಿಡುತ್ತಾನೆ. ವಲಸೆ ಬಂದ ಇವರನ್ನ ಮೊದಲಿಂದಲೇ ಶಾಶ್ವತವಾಗಿ ಉಳಿದ ಜನರಿಂದ ಕಿರುಕುಳ ಸಹಿಸಿಕೊಳ್ಳುವ ಪ್ರಸಂಗ ಹೆಚ್ಚು ದುಡಿಸಿಕೊಳ್ಳುವುದು ಕಡಿಮೆ ಸಂಬಳ ಕೊಡುವುದು, ದುಡಿಯುವುದು ಅವರ ಅನಿವಾರ್ಯ. ವಲಸೆಗರಿಗೆಲ್ಲ ಪಟ್ಟಣದ ಕೊಳಚೆ ಪ್ರದೇಶಗಳೇ ಅವರಿಗೆ ವಿಶ್ರಾಂತಿ ಮನೆ. ಹೀಗಾಗಿ ಅವರು ಎಲ್ಲ ತರಹದ ರೋಗಗಳಿಗೆ ತುತ್ತಾಗುವರು. ಪಾದರಿಗಳು ಮಾತ್ರ ಅಷ್ಟುಕಷ್ಟೆ ಸುಖವಾಗಿದ್ದಾರೆ.

ಕೆಲವರು ದೊಡ್ಡದೊಡ್ಡ ಬಂಗಲೆ ಮನೆಗಳನ್ನು ಅಂತಸ್ತು ಮನೆಗಳನ್ನು ಹೊಂದಿದರೆ ಉಳಿದವರು ಜಿಂಗ್ಸಟ್ ಮನೆಗಳು ಹೊಂದಿದ್ದಾರೆ. ಪೋನು, ಮೋಬೆಲ್, ದ್ವಿಚಕ್ರ ವಾಹನಗಳು ಮತ್ತು ಕಾರುಗಳು ಮನೆಯಂಗಳದಲ್ಲಿ ನಿಂತಿರುತ್ತವೆ. ಇವೆಲ್ಲ ಸವಲತ್‌ಗಳು ಅಮೇರಿಕನ ಸಂಯುಕ್ತ ಸಂಸ್ಥಾನಗಳ ಕ್ರೈಸ್ತ ಮಿಶನರಿಗಳಾದ ರಾನ್‌ಕ್ಲೈಟನ್, ಜರ್ರಿ ಬುಲ್ಲಾಡ್, ಜೆಸ್ಸಿವಿಲ್ಸ್ ಮತ್ತು ಕೈಲ್ ಮುಂತಾದವರ ಧರ್ಮ

ಪ್ರಸಾರದ ಫಲವಾಗಿಯೇ ಆಯಿತು. ಇವರುಗಳ ಧನ ಸಹಾಯದಿಂದ ಆರ್ಥಿಕ ಅಬಿವೃದ್ಧಿ ಆಗುತ್ತಲಿದೆ. ರಾನ್‌ಕ್ನೈಟನ್‌ನ ಮಗನಾದ ಕೈಲ್‌ನು ಭಾರತೀಯ ಪ್ರಜಾಪ್ರಭುತ್ವವನ್ನು ಹೊಂದಿ ಇಲ್ಲಿಯ ಹೈದರಾಬಾದ್ ಸೋನಿ ಎಂಬಕೆಗೆ ಮದುವೆಯಾಗಿ ಹೈದರಾಬಾದನ ನಿವಾಸಿಯಾಗಿದ್ದಾನೆ. ಹೀಗಾಗಿ ಈ ಮಿಶನರಿಗಳು ಬೀಗರಾಗಿ ಬಿಡುತ್ತಲಿದ್ದಾರೆ.

ಬೀದರಿನ ಬೇರೆ ಜಾತಿಯವರು ಎಲ್ಲ ಸವಲತ್ತು ಹೊಂದಿ ಮನೆಮಾರು ಕಟ್ಟಿಕೊಂಡು ಸುಖದಿಂದಿದ್ದಾರೆ. ಜಿಲೇವಿ ಬಂಡಿಯೋ, ಹಳೆ ಆಟೋಗಳ ವ್ಯಾಪಾರ, ಕಪ್‌ಚುಪ್‌ಭಂಡಿ, ಮಿಠಾಯಿ ಬಂಡಿ ನಡೆಸಿಯು ಸಾಕಷ್ಟು ಹಣ ಘಳಿಸಿದ್ದಾರೆ. ಸ್ವಂತ ಊರುಗಳಾದ ಬೀದರ ಜಿಲ್ಲೆಯಲ್ಲಿ ತಮ್ಮ ತಮ್ಮ ಊರುಗಳಲ್ಲಿ ಹೊಲಗದ್ದೆಗಳು ಖರೀದಿಸುತ್ತಲಿದ್ದಾರೆ. ಇವರಿಗೆ ಊರು ಕಡೆಯ ಒಲವು ಹೆಚ್ಚಿ ಹಬ್ಬ ಹರಿದಿನಗಳು ಊರುಗಳಲ್ಲಿಯೇ ಬಂದು ಆಚಾರಿಸುತ್ತಾರೆ.

ಬೀದರ ಜಿಲ್ಲೆಯ ಯಾವುದೇ ಜಾತಿಯವನಾಗಿರಲಿ ಅವನು ಕನ್ನಡದ ಬಗ್ಗೆ ಹೆಮ್ಮೆ ಕಾಳಜಿಯಿಲ್ಲ ಕರ್ನಾಟಕ ರಾಜ್ಯೋತ್ಸವದ ಬೆಳಕು ಅವರೆಡೆಗೆ ಹರಿಯುವುದೇ ಇಲ್ಲಿ ಗೊತ್ತಾಗುವುದೂ ಇಲ್ಲ. ಇದಕ್ಕೆ ಮುಖ್ಯವಾದ ಕಾರಣವೆಂದರೆ ಶಿಕ್ಷಣದ ಕೊರತೆ ಹೆಚ್ಚಿನ ವಿದ್ಯಾಭ್ಯಾಸವಾದರೆ ಇಲ್ಲಿಯೇ ಉಳಿದುಕೊಂಡು ಸರಕಾರಿ ಕಲೆಸದಲ್ಲಿರುತ್ತಿದ್ದರು. ಬದಕಲು ವಲಸೆ ಹೋದ ಇವರಿಗೆ ಕನ್ನಡದ ಬಗ್ಗೆ ಅಭಿಮಾನವಿಲ್ಲ. ಆದರೂ ಕೂಡ ಮನೆಗಳಲ್ಲಿ ಕನ್ನಡ ಕ್ಯಾಲೆಂಡರ್‌ಗಳು ಕೆಲವು ಪುಸ್ತಕಗಳು ಕಾಣಸಿಗುತ್ತವೆ. ಮರಾಠ ಜನಗಳ ಮನೆಯಲ್ಲಿ ಪರಾಠಿಯ ಸಂಪ್ರದಾಯ ಮುಸಲ್ಮಾನರ ಮನೆಗಳಲ್ಲಿ ಅವರದೇಯಾದ ಧಾರ್ವಿಕ ಭಾವಚಿತ್ರಗಳು, ರೀತಿ ನಿಯಮ ಕಾಣಸಿಗುತ್ತವೆ. ಇವರು ಕನ್ನಡಿಗರಾದರೂ ಮಾತೃಭಾಷೆ ಮರಾಠರದು ಮರಾಠಿ ಮುಸಲ್ಮಾನರದು ಉರ್ದು ಭಾಷೆಯಾಗಿರುವುದರಿಂದ ಕನ್ನಡ ದ್ವಿಭಾಷಿಕರಾಗಿ ಬಿಡುತ್ತಾರೆ.

ವಲಸೆ ಹೋದವರಲ್ಲಿ ಭಾಷಾ ದೃಷ್ಟಿಯಿಂದ ಮುಖ್ಯರಾದವರೆಂದರೆ ಲಿಂಗಾಯರು, ಕುಂಬಾರರು, ಕಬ್ಬಲಿಗರು, ಕುರುಬರು, ಹೊಲೆಯರು ಮತ್ತು ಮಾದಿಗರು ಮುಖ್ಯರು. ಅವರಲ್ಲಿ ಲಿಂಗಾಯತರು ಕನ್ನಡವೆ ಸಂಶಯವಿಲ್ಲ. ಕಬ್ಬಲಿಗರು, ಕುರುಬರು, ಹೊಲೆಯರು ಮತ್ತು ಮಾದಿಗರು ಒಂದೊಂದು ಊರಿನವರು ಮರಾಠಿ ಒಂದೊಂದು ಊರಿನವರು ಕನ್ನಡ ಮಾತನಾಡುತ್ತಾರೆ. ಇವರ ಮನೆಗಳಲ್ಲಿ ಮರಾಠಿ, ಕನ್ನಡ ಭಾಷೆ ಬಳಸುವುದುಂಟು.

ಹೈದರಾಬಾದಿನ ಬೀದಿಗುಂಟ ತಿರುಗಾಡುತ ಹೋದರೆ ಕಣ್ಣಿಗೆ ಬಿದ್ದ ಬಂಡಿಯಾತನನ್ನು ಕೇಳದೆ ಕೂಡ ಕನ್ನಡ ಮಾತನಾಡಿಸಬಹುದು. ಅಷ್ಟರ ಮಟ್ಟಕ್ಕೆ ಬೀದರಿನ ಜನರು ಹೈದರಾಬಾದನ ಬೀದಿಯಲ್ಲಿ ಕಾಣಸಿಗುತ್ತಾರೆ. ಅವರ ಹೆಂಡತಿಯರೂ ಜೊತೆಗೆ ಕೆಲವು ಕಡೆ ಕಾಣುತ್ತೇವೆ.

ವಲಸೆ ಹೋದ ಗಂಡಸರೆಲ್ಲರ ಹುದ್ದೆ ಹೇಳಲಾಯಿತು. ಅವರ ಹೆಂಡತಿಯರು ಏನೇನು ಮಾಡುತ್ತಾರೆಂಬುದರ ಕಡೆ ಗಮನಹರಿಸಿದರೆ, ಗಂಡಸರು ದುಡಿದಂತೆ ಹೆಣ್ಣುಮಕ್ಕಳಿಗೆ ಕೆಲಸ ಮಾಡುವುದು ಅನಿವಾರ್ಯವಾಗುತ್ತದೆ. ಈ ಮಾತು ಎಲ್ಲರಿಗೂ ಅನ್ವಯವಾಗುತ್ತದಂತೇನಿಲ್ಲ. ಕೆಲವು ಸ್ತ್ರೀಯರು ಮನೆಯಲ್ಲಿಯೇ ಸುದಿಂದಿರುವರು.

ಬೆಳಿಗ್ಗೆ ಎದ್ದಾಕ್ಷಣ ಬೇಗ ಬೇಗ ಮನೆಗೆಲಸ ಮುಗಿಸಿಕೊಂಡು ಶ್ರೀಮಂತರ ಮನೆಗೆ ಬಟ್ಟೆ ಒಗೆಯಲು, ಮುಸರೆ ತಿಕ್ಕಲು ದೌಡಾಯಿಸಿ ಹೋಗುವುದು ಕಾಣುತ್ತೇವೆ. ಕೆಲವರು ಸೆಂಟ್ರಿಂಗ್ ಕೆಲಸಕ್ಕೊ ಮೇಸ್ತ್ರೀಯ ಕೈಕೆಳಕಗೊ ಹೋಗುವವರು ಸಿಗುತ್ತಾರೆ. ಇಂಥವರ ಮಕ್ಕಳಗತಿ ಹೇಳಲಾಗದು. ಅವರು ಶಾಲೆಗೆ ಹಾಕಿದರೂ ಹೋಗದೆ ಮನೆಯಲಲಿ ಅಳು ಕರಿ ಮಾಡುತ್ತಾ ಸಂದಿ ಗೊಂದಿಯಲ್ಲಿ ಬಿದ್ದಿರುತ್ತಾರೆ. ಬರುಬರುತ್ತಾ ಅವರೂ ಯಾವಾವುದೋ ಹೋಟೆಲ್‌ಗಳಲ್ಲಿ ಟೇಬಲ್ ಒರಿಸುವುದು ಶುರು ಮಾಡುತ್ತಾರೆ.

ನಿಸರ್ಗದ ಶುದ್ಧವಾದ ಗ್ರಾಮೀಣ ಪ್ರದೇಶದ ಬಯಲು ಸೀಮೆಯಲ್ಲಿ ಬದುಕಿದ ಮನುಷ್ಯ, ಅಶುದ್ಧವಾದ ನೀರು, ಕಲುಷಿತ ಗಾರೆ, ಕೊಳಚೆ ಪ್ರದೇಶದಲ್ಲಿ ಬದುಕುವುದೆಂದರೆ ಸಂಕಟಕ್ಕೀಡಾದಂತೆ ಒಂಟಿ ಜೀವನದಲ್ಲಿ ಅನಾರೋಗ್ಯ ಸಂಭವಿಸಿತೆಂದರೆ ಆತಂಕ ಮೂಡುತ್ತದೆ. ಸಾವು ಬದುಕಿನ ಮಧ್ಯೆ ನುಸುಳಿದ್ದೇನೆಂದು ಗಾಬರಿ ಪಡುತ್ತಾನೆ. ಹೀಗೆ ನೊಂದುಕೊಂಡ ಜನ ಹೈದರಾಬಾದಿನ ರಹೆಮತ್‌ನಗರ, ಯುಸುಫ್‌ಗುಡಾ, ಬೋರಾಬಂಡಾ, ಎರ್ರಗಡ, ಪಟನ್‌ಚೇರು, ರಾಮಚಂದ್ರಪುರಂ, ಕುಕುಟ್‌ಪಲ್ಲಿ, ಶಹಾಪುರ್‌ನಗರ್, ರೋಡಾಮೇಸ್ತ್ರೀನಗರ್, ಮಂಗಲಹಾಟ, ಸಿಕೆಂದ್ರಾಬಾದ ಸುತ್ತಮುತ್ತ, ಉಪ್ಪಲ್, ಮಲ್ಲಾಪೂರು ಮುಂತಾದವು ಕಡೆ ಸಾಮೂಹಿಕವಾಗಿ ನೆಲಸಿದ್ದಾರೆ.

## ೨.೧. ಭಾಷಾಶಾಸ್ತ್ರದ ಆರಂಭ ಮತ್ತು ಬೆಳವಣಿಗೆ

'ಆದಿಯಲ್ಲ ವಾಕ್ಯವಿತ್ತು ಆ ವಾಕ್ಯವೇ ದೇವರಾಗಿತ್ತು' ಎಂದು ಬೈಬಲಿನ ಮೊದಲ ಸಾಲುಗಳಿವು. ಮುಂದೆ ದೇವರು ಮನುಷ್ಯನನ್ನು ರೂಪಿಸಿದ ಈ ಸೃಷ್ಟಿಯಲ್ಲಿ ಮನುಷ್ಯ ಅತ್ಯಂತ ಮುಂದುವರೆದ ಬುದ್ಧಿ ಜೀವಿಯಾದ. ಯಾಕೆಂದರೆ ಆತನಿಗೆ ಯೋಚನಾ ಶಕ್ತಿ, ಮಾತನಾಡುವ ಶಕ್ತಿ ಇರುವುದರಿಂದ "ಮನುಷ್ಯನ ಬುದ್ಧಿ ಬೆಳೆದಂತೆ ಅವನಲ್ಲಿ ವಿಚಾರ ಶಕ್ತಿ ಬೆಳೆಯಿತು. ಆ ವಿಚಾರ ಬೇರೆಯವರೊಂದಿಗೆ ಹಂಚಿಕೊಳ್ಳಲು ಮುಂದಾಗಿ ಯಾವಾವುದೊ ಧ್ವನಿಗೈದು ಸನ್ನೆ ಮಾಡಿ ತನ್ನ ವಿಚಾರಧಾರೆ ಅಭಿವ್ಯಕ್ತಿಸಿದ. ಈ ಅಭಿವ್ಯಕ್ತಿಮಾಧ್ಯಮವೇ ಭಾಷೆ." ಈ ಭಾಷೆ ಮನುಷ್ಯನ ಉಸಿರಿನಷ್ಟೇ ಅನಿವಾರ್ಯ ಮತ್ತು ಅಗತ್ಯವಾಗಿತ್ತು. ಇದು ಅವನ ಒತ್ತಡದಿಂದ ಹುಟ್ಟಿಕೊಂಡಿತು. 'ಭಾಷ್' ಎಂಬ ಪದ ಸಂಸ್ಕೃತದ ಶಬ್ದ 'ಭಾಷೆ' ಎಂದರೆ ಮಾತನಾಡು ಎಂಬ ಅರ್ಥವನ್ನು ಹೊಂದಿದೆ.

'ದಂಡಿ' ಎಂಬ ವಿದ್ವಾಂಸ "ಭಾಷೆಯೆಂಬ ಬೆಳಕು ಜೀವನದಲ್ಲಿ ಬೆಳಗದಿದ್ದರೆ ಲೋಕವೆಲ್ಲ ಕತ್ತಲಿನಿಂದ ತುಂಬಿ ಹೋಗುತ್ತಿತ್ತು" ಎಂದು ಹೇಳಿದ್ದಾನೆ.

ಸಿ.ಎಫ್ .ಹಾಕೆಟ್ : "ಭಾಷೆ ಎಂಬುದು ಮಾನವ ಜನಾಂಗದ ಅಮೂಲ್ಯ ಸೊತ್ತು" ಎಂದು ಅದರ ಮಹತ್ವವನ್ನು ಸಾರಿ ಹೇಳಿದ್ದಾನೆ.

"Language is only articulate speech that is commounication by means of group of sounds produced by articulatory argans-" fronz Boas

ಈ ವ್ಯಾಖಾನದಲ್ಲಿ ಭಾಷೆಯ ಬಗೆಗಿನ ಅಂಶಗಳೆಲ್ಲವೂ ಸಮರ್ಪಕವಾಗಿ ಬಾರದಿದ್ದರೂ ಕೆಲವು ಅಂಶಗಳನ್ನು ಕಾಣಬಹುದು.

ಭಾಷೆ ಮಾನವನ ಧ್ವನ್ಯಾಂಗಗಳಾದ ತುಟಿ, ನಾಲಿಗೆ, ಹಲ್ಲು, ಗಂಟಲು(ಗುಲಕುಹರ) ಮುಂತಾದವುಗಳಿಂದ ಉಂಟಾದ ಧ್ವನಿಗಳ ಗುಂಪು.

"Language is a system of arbitrary vocal symbals by wihich members of a society act and react"- E.H.Strurtvant

ಈ ವ್ಯಾಖ್ಯೆಯಿಂದ ವ್ಯಕ್ತಿಯು ಸಂಹನ ಶೀಲವಾಗಿರಬೇಕೆಂಬಂತಿದೆ.

"Language is purely human, non instinctive method of communicating ideas, emotions and desires by a system of Voluntarily produced symboly"- Edward sapir

ಇದು ಈ ಹಿಂದೆ ಹೇಳಲಾದ ಎಲ್ಲ ವಾಖ್ಯೆಗಳಿಗಿಂತ ಭಿನ್ನವಾಗಿದೆ. ಬ್ಲಾಕ್ ಮತ್ತು ಟ್ರೇಗರ್ ಅವರ ಪ್ರಕಾರ ಭಾಷೆ ಹೆಚ್ಚು ವೈಜ್ಞಾನಿಕವಾಗಿದೆ ಎಂಬುದು ಅವರ ವೈಜ್ಞಾನಿಕ ವ್ಯಾಖ್ಯೆಯಿಂದ ತಿಳಿದು ಬರುತ್ತದೆ.

ಯಾವುದೇ ಭಾಷೆಯಲ್ಲಿ ಧ್ವನಿ, ಧ್ವನಿಮಾ, ಆಕೃತಿಮಾ, ಶಬ್ದ ಎಲ್ಲವೂ ವ್ಯವಸ್ಥಿತವಾಗಿ ನಿರ್ದಿಷ್ಟ ನಿಯಮಾನುಸಾರವಾಗಿ ಪ್ರಕ್ರಿಯೆಯನ್ನು ಪ್ರತಿಬಿಂಬಿಸುತ್ತದೆ. ಇವು ಭಾಷೆಯಿಂದ ಭಾಷೆಗೆ ಭಿನ್ನವಾಗಿರಬಹುದು. ಭಾಷೆಯಲ್ಲಿ ಅತ್ಯಂತ ಚಿಕ್ಕ ಘಟಕ ಎಂದರೆ ಧ್ವನಿ. ಈ ಧ್ವನಿ ಘಟಕಗಳ ಒಂದರ ನಂತರ ಒಂದು ಬಂದು ಅವುಗಳಿಂದಲೇ ಶಬ್ದಗಳಾಗುತ್ತವೆ. ಉದಾಹರಣೆಗೆ ಕನ್ನಡದ `ಗುಡಿ` ಎಂಬ ಪದವನ್ನು ಉತ್ಪಾದಿಸುವಾಗ **ಗ್ ಉ ಡ್ ಇ** ಈ ಧ್ವನಿಗಳು ಒಂದರ ನಂತರ ಒಂದಂತೆ ಕ್ರಮಬದ್ಧವಾಗಿ **ಗ್ +ಉ+ಡ್ +ಇ = ಗುಡಿ** ಎಂದು ಉಚ್ಚರಿಸಬೇಕಾಗುತ್ತದೆ. 'ಗುಡಿ'ಗೆ ಗಳು ಪ್ರತ್ಯಯ ಹಚ್ಚಿದರೆ ಗುಡಿಗಳು ಎಂದರ್ಥ ಹುಟ್ಟುತ್ತದೆ. `ಅನ್ನು` ಪ್ರತ್ಯಯ ನೇರವಾಗಿ ಸೇರಿಸಲು ಬರುವುದಿಲ್ಲ. ಅದು ಕನ್ನಡ ಭಾಷಾ ರಚನೆಗನುಗುಣವಾಗಿ **'ಯ'** ಧ್ವನಿ ಸೇರಿಸಿ ನಂತರ **'ಅನ್ನು'** ಸೇರಿಸಬೇಕು ಇದೆ 'ಗುಡಿಯನ್ನು' ಹೀಗೆ ವ್ಯಾಕರಣ ಹಂತದಲ್ಲಿಯೂ ಭಾಷೆ ವ್ಯವಸ್ಥಿತವಾಗಿ ಬಳಕೆಯಾಗುವುದನ್ನು ನಾವು ನೋಡಬಹುದು. ಕರ್ತೃ, ಕರ್ಮ, ಕ್ರಿಯಾಪದಗಳು ವಾಕ್ಯದಲ್ಲಿ ಒಂದಾದ ನಂತರ ಮತ್ತೊಂದು ಬರುತ್ತವೆ.

ಉದಾ : "ನಾನು ಅಡವಿಗೆ ಹೋದೆ". na:nu aḍavige ho:de

ಈ ಕ್ರಮವನ್ನು ಬದಲಾಯಿಸಿ ಕ್ರಿಯಾಪದವನ್ನು ಮೊದಲು ಬಳಸಿ ನಂತರ ಕರ್ತೃ, ಕರ್ಮ ಪದಗಳನ್ನು ಬಳಸಲಾಗದು

"ಹೋದೆ ಅಡವಿಗೆ ನಾನು ha:de aḍavige na:nu"

ಈ ರೀತಿಯಾಗಿ ಬರೆಯುವುದಾಗಲಿ ಉಚ್ಚರಿಸುವುದಾಗಲಿ ಕನ್ನಡ ಜಾಯಮಾನಕ್ಕೆ ಸೇರುವುದಿಲ್ಲ. ಇದರಿಂದ ಭಾಷೆ ಎಷ್ಟು ವ್ಯವಸ್ಥಿತವಾಗಿದೆ ಎಂದು ತಿಳಿಯಬಹುದು. ಭಾಷೆಯಲ್ಲಿ ಬಳಕೆಯಾಗುವ ಧ್ವನಿಗಳು ಸಂಕೇತಗಳಾಗುತ್ತವೆ. ಇಂತಹ ಧ್ವನಿಗಳು ಕೂಡಿ ಶಬ್ದಗಳಾಗುತ್ತವೆ. ದೃಶ್ಯಗಳು, ಶ್ರವ್ಯ, ಸಂಕೇತಗಳಾದವು ಭಾಷೆಯಲ್ಲಿ ಬಳಸಲಾಗುವುದಿಲ್ಲ. ಮನುಷ್ಯನ ಧ್ವನ್ಯಂಗಗಳಿಂದ ಉತ್ಪತ್ತಿಯಾಗುವ ಧ್ವನಿಗಳು ಮಾತ್ರ ಭಾಷೆಯಲ್ಲಿ ಸಂಕೇತಗಳಾಗಿ ಕಾರ್ಯಮಾಡುತ್ತವೆ. ಒಂದು ವಸ್ತುವಿದ್ದರೆ ಅದಕ್ಕೆ ಹೆಸರಿಸುವಾಗ ಆಯಾಯ ಭಾಷೆಗಳು ಧ್ವನಿ ಸಂಕೇತಗಳಿಂದ ಗುರುತಿಸಲ್ಪಡುತ್ತದೆ.

| | | | |
|---|---|---|---|
| ಉದಾ : | ಅಡವಿ | aḍavI | ಕನ್ನಡ |
| | ಝಾಡಿ | Jha:ḍI | ಲಂಬಾಣಿ (ಗೋರಬೋಲಿ) |
| | ಜಂಗಲ್ | Jangal | ಉರ್ದು |
| | ವೈರನ್ | vaİran | ಮರಾಠಿ |
| | ಫಾರೆಸ್ಟ | pha:rest | ಇಂಗ್ಲಿಷ್ |

ಹೀಗೆಯೆ ಒಂದು ವಸ್ತುವನ್ನು ಅನುಕೂಲಕ್ಕೆ ತಕ್ಕಂತೆ ಬೇರೆ ಬೇರೆ ಭಾಷಾ ಸಮೂಹ ಬೇರೆ ಬೇರೆ ರೀತಿಯಾಗಿ ಗುರುತಿಸಿದಂತೆ ಒಂದೇ ಭಾಷಾ ಸಮೂಹದ ಸದಸ್ಯರೆಲ್ಲರೂ ಅದನ್ನು ಒಂದೇ ಧ್ವನಿ ಸಂಕೇತದಲ್ಲಿ ಗುರುತಿಸಬೇಕಾಗುತ್ತದೆ.

ಭಾಷೆಗೆ ಎರಡು ಮುಖಗಳಿರುತ್ತವೆ. ಒಂದು ಮುಖ ಧ್ವನಿಯಾದರೆ ಮತ್ತೊಂದು ಮುಖ ಅರ್ಥವನ್ನು ಹೇಲುತ್ತದೆ. 'ಮರ' ಎಂಬ ಶಬ್ದವು ಮ್ ಅ ರ್ ಅ ಧ್ವನಿಗಳನ್ನು ಹೊಂದಿದ್ದು ಇನ್ನೊಂದು ವಸ್ತುವನ್ನು ಸೂಚಿಸುತ್ತದೆ. ಹೀಗೆ ಭಾಷೆಯಲ್ಲಿ ಬಳಕೆಯಾಗುವ ಎಲ್ಲ ರೂಪಗಳು ಧ್ವನಿ ಹಾಗೂ ಅರ್ಥವನ್ನೊಳಗೊಂಡಿರುತ್ತವೆ.

ಹೊಸಗನ್ನಡ ಭಾಷೆಯಲ್ಲಿ ಹಳೆಯ ಶಬ್ದಗಳು ಮಾತ್ರವಲ್ಲದೆ ಹೊಸ ಹೊಸ ಶಬ್ದಗಳೂ ಸೇರಿಕೊಳ್ಳುತ್ತವೆ. ದೂರದರ್ಶನ, ದೂರವಾಣಿ, ಆಕಾಶವಾಣಿ, ಅಣುಬಾಂಬ್ , ಗಣಕಯಂತ್ರ, ಅಂಚೆ ಮುಂತಾದವುಗಳು ಇವು ಕನ್ನಡದಂತೆ ಬೇರೆ ಬೇರೆ ಭಾಷೆಗೆ ಬೇರೆ ಬೇರೆ ರೂಪ ತಾಳಿ ನಿಲ್ಲುತ್ತವೆ. ಹೀಗಾಗಿ ಭಾಷೆಯಾಗಿರಬೇಕಾದರೆ ಅದರ ಧ್ವನಿಗಳೇ ಕಾರಣ.

ಮಾನವ ತಾನು ಆಡುವ ಭಾಷೆಯ ಬಗೆಗೆ ತಳೆದ ಆಸಕ್ತಿ ಇಂದು ನಿನ್ನೆಯದಲ್ಲ. ಭಾರತ, ಗ್ರೀಕ್ ಮೊದಲಾದ ದೇಶಗಳಲ್ಲಿ ಪ್ರಾಚೀನ ಕಾಲದಿಂದಲ್ಲೂ ಭಾಷಾಭ್ಯಾಸ ನಡೆದುದನ್ನು ನಾವು ನೋಡಬಹುದಾಗಿದೆ. ಕ್ರಿ.ಪೂ.ನಾಲ್ಕನೆಯ ಶತಮಾನದ ಮೊದಲು ಪಾಣಿನಿ ಅಷ್ಟು ವ್ಯವಸ್ಥಿತ ರೀತಿಯಲ್ಲಿ 'ಅಷ್ಟಾಧ್ಯಾಯಿ' ಎಂಬ ವರ್ಣನಾತ್ಮಕ ಭಾಷಾವಿಜ್ಞಾನ ಕೃತಿ ರಚಿಸಿದ ಇದು ಪ್ರಪಂಚದಲ್ಲಿಯೇ ಮೊದಲ ವರ್ಣನಾತ್ಮಕ ಭಾಷಾವಿಜ್ಞಾನ ಹಾಗೂ ವ್ಯಾಕರಣ. ಇದು ಮಾನವ ಪ್ರಜ್ಞೆಯ ಮಹಾ ಸ್ಮಾರಕಗಳೊಂದು.

## ೨.೨. ಅಂತರಾಷ್ಟ್ರೀಯ ಭಾಷಾಧ್ಯಯನಗಳು

ಭಾಷಿಕ ಅಧ್ಯಯನ ನಡೆದದ್ದು ಇತ್ತೀಚಿಗೆ ೧೮೭೧ರ ಹಿಂದೆ ಇಂಥ ಪ್ರಯೋಗವಿಲ್ಲ. ಫ್ರಾಂಝ್ ಬಾಪ್ ತೌಲನಿಕ ವ್ಯಾಕರಣಕ್ಕೆ ಬುನಾದಿ ಹಾಕಿದ ಭಾಷಾಶಾಸ್ತ್ರಜ್ಞ ಭಾಷಾಧ್ಯಯನಕ್ಕೆ ಹೊಸ ದೃಷ್ಟಿ ನೀಡಿದ ಭಾಷಾವಿಜ್ಞಾನಿ ಈತ. "ಇಂಡೋ ಯುರೋಪಿಯನ್ ಭಾಷೆಗಳ ತುಲನಾತ್ಮಕ ವ್ಯಾಕರಣ" ಎಂಬ ಕೃತಿ ರಚಿಸಿದನು. ೧೮೫೭ರಲ್ಲಿ ಜನಿಸಿದ ಫರ್ಡಿನಾಂಡ್ ಡಿ.ಸರೂರ್ ರಚನಾತ್ಮಕ ಭಾಷಾ ವಿಜ್ಞಾನದ ಪಿತಾಮಹ ಎನಿಸಿಕೊಂಡಿದ್ದಾರೆ. ಅವರ ಶಿಷ್ಯರಿಂದಲೇ ಸೂರನ ಹೆಸರಿನಲ್ಲಿ 'ಸಾಮಾನ್ಯ ಭಾಷಾ ವಿಜ್ಞಾನ : ಒಂದು ಅಧ್ಯಯ'(coursein general linguistics) ಎಂದು ಪ್ರಕಟಿಸಿದರು. ಇದರ ಮೂಲಫ್ರೆಂಚ್ ಭಾಷೆಯಲ್ಲಿದೆ.

ಭಾಷಾ ವಿಜ್ಞಾನ ಕ್ಷೇತ್ರದಲ್ಲಿ ಹೊಸ ಶಕೆಯೊಂದನ್ನು ಪ್ರಾರಂಭಿಸಿದ ವ್ಯಕ್ತಿ ಲಿಯೋನಾರ್ಡ್ ಬ್ಲೂಮ್ ಫೀಲ್ಡ್. ಈತ ವರ್ಣನಾತ್ಮಕ ತೌಲನಿಕ ಭಾಷಾಭ್ಯಾಸದಲ್ಲಿ ತೊಡಗುವ ಇಂದಿನವರಿಗೆ ಆಚಾರ್ಯ ಕೃತಿ ಭಾಷೆ(Language) ಮಾರ್ಗದರ್ಶಿಯಾಗಿದೆ.

ಅಮೇರಿಕದ ಕೆನ್ನತ್ ಲೀ ಪೈಕ್ : ಧ್ವನಿವಿಜ್ಞಾನ, ಧ್ವನಿಮಾ ವಿಜ್ಞಾನ(೧೯೪೭)

ಯುಜಿನ್.ಎ.ನೈಡಾ : 'ಆಕೃತಿಮಾ ವಿಜ್ಞಾನ'

ಸಿ.ಎಫ್.ಹಾಕೇಟರ : 'ಆಧುನಿಕ ಭಾಷಾ ವಿಜ್ಞಾನ : ಒಂದು ಅಧ್ಯಯನ'

ನೋ ಆಮ್ ಚಾಮಸ್ಕಿ : 'ವಾಕ್ಯಾತ್ಮಕ ರಚನೆಗಳು'

ಹೀಗೆ ಅನೇಕ ಕೃತಿಗಳು ಹೊರಬಂದವು. ಅಂತೆಯೇ ಅನೇಕ ಮೌಲ್ಯದ ಭಾಷಿಕ ಲೇಖನಗಳು ಹೊರಬಂದುವು. ಮುಂದೆ ಆಡುಮಾತಿನೆಡೆಗೆ ನಮ್ಮ ವಿಜ್ಞಾನಿಗಳ ಗಮನಹರಿಯಿತು. ಇವರು ಆಡುಮಾತೆ ಭಾಷೆ. ಬರಹ ಅದರ ಪ್ರತಿರೂಪವಾದರಿಂದ ಆಡುಮಾತನ್ನು ಅವರು ಪ್ರಮಾಣ ಎಂದು ಸ್ವೀಕರಿಸುತ್ತಾರೆ.

ಭಾಷಾ ವಿಜ್ಞಾನ ಇಂದು ಅನೇಕ ಶಾಸ್ತ್ರಗಳೊಡನೆ ಅವಿನಾಭಾವ ಸಂಬಂಧವನ್ನು ಹೊಂದಿದೆ. ತತ್ಫಲವಾಗಿ ಸಾಮಾಜಿಕ ಭಾಷಾವಿಜ್ಞಾನ, ಮಾನವ ಭಾಷಾವಿಜ್ಞಾನ, ಮನೋಭಾಷಾವಿಜ್ಞಾನ, ಗಣಕ ಭಾಷಾ ವಿಜ್ಞಾನದಂಥ ಅನೇಕ ಶಾಸ್ತ್ರಗಳು ಬೆಳದಿವೆ. ಇಂಥ ವಿಷಯಗಳ ಅಧ್ಯಯನವನ್ನು ಅನ್ವಯಿಕ ಭಾಷಾ ವಿಜ್ಞಾನದಲ್ಲಿ ಮಾಡಲಾಗುತ್ತದೆ. ಭಾಷಾ ವಿಜ್ಞಾನದಲ್ಲಿ ಬರುವ ೧. ಧ್ವನಿ, ೨. ಧ್ವನಿಮಾ, ೩. ಆಕೃತಿಮಾ ೪. ವಾಕ್ಯಘಟಕ ಪ್ರತಿಯೊಂದು ಅಂಶವೂ ಒಂದೊಂದು ಶಾಸ್ತ್ರಕ್ಕೆ ಕಾರಣವಾಗಿವೆ.

ಧ್ವನಿವಿಜ್ಞಾನವು ಭಾಷೆಯಲ್ಲಿ ಬಳಕೆಯಾಗುವ ಅತಿ ಚಿಕ್ಕ ಧ್ವನಿ ಘಟಗಳು ಹುಟ್ಟುವ ಬಗೆ, ಹವೆಯ ಮೂಲಕ ಅವು ಪ್ರಸಾರವಾಗುವ ರೀತಿ. ಒಟ್ಟಿನಲ್ಲಿ ಧ್ವನಿವಿಜ್ಞಾನವು ಭಾಷಾಧ್ವನಿಯ ಹುಟ್ಟುವಿಕೆ, ಪ್ರಸಾರವಾಗುವಿಕೆ, ಅವುಗಳನ್ನು ಗ್ರಹಿಸಿ ಅರ್ಥೈಸಿಕೊಳ್ಳುವಿಕೆಗೆ ಸಂಬಂಧಿಸಿದಂತೆ ಎಲ್ಲ ವಿವರಗಳನ್ನು ಅಭ್ಯಸಿಸುತ್ತದೆ. ಈ ಮೂರು ಹಂತಗಳನ್ನು ಬೇರೆ ಬೇರೆ ಶಾಖೆಗಳಲ್ಲಿ ಅಭ್ಯಾಸ ಮಾಡಲಾಗುತ್ತದೆ.

ಭಾಷೆಯಲ್ಲಿ ಬಳಕೆಯಾಗುವ ಧ್ವನಿಗಳು ಮೌಖಿಕ ಧ್ವನಿಗಳು ಕರಣ, ಸ್ಥಾನ, ಧ್ವನಿ ಇವುಗಳು ಕೇವಲ ಧ್ವನ್ಯಾಂಗಳಿದ್ದ ಮಾತ್ರಕ್ಕೆ ತಂತಾನೇ ಧ್ವನಿ ಉತ್ಪತ್ತಿಯಾಗುವುದಿಲ್ಲ. ಮನುಷ್ಯನ ಪ್ರಯತ್ನ ಅತ್ಯವಶ್ಯಕ. ಇದರಿಂದ ಸ್ವರಗಳು ವ್ಯಂಜನಗಳು ಎಂದು ವಿಭಾಗಿಸಲಾಗಿದೆ. ಈ ವಿಭಾಗ ಕ್ರಮದಿಂದ ಒಂದು ವ್ಯವಸ್ಥಿವಾದ ರೀತಿಯಲ್ಲಿ ಅಧ್ಯಯನ ಕೈಗೊಳ್ಳಲು ಸಾಧ್ಯವಾಗುತ್ತದೆ.

೧೯ನೇ ಶತಮಾನದವರಿಗೆ ಭಾಷೆಯ ಹೊಸ ರೂಪಗಳಿಗೆ ಮಾತ್ರ ಪ್ರಾಮುಖ್ಯತೆಯನ್ನು ಕೊಟ್ಟು ಭಾಷಾಧ್ಯಾಯನ ನಡೆದುದನ್ನು ಕಾಣುತ್ತೇವೆ. ಭಾಷೆಯ ಹೊರರಚನೆಗಳಂತೆ ಅದರ ಅಂತರಿಕ ರಚನೆಯೂ ಮಹತ್ವದ್ದೆಂದು ಪ್ರತಿಪಾದಿಸಿದ ಭಾಷಾವಿಜ್ಞಾನಿ ೨೦ ನೇ ಶತಮಾನದ ನೋಆಮ್ ಚಾಮಸ್ಕಿ. ಹೀಗೆ ಕ್ರಿ.ಶ.ಪೂರ್ವದ ಭಾಷಾಧ್ಯಾಯನಾಸಕ್ತಿ ಆರಂಭದಲ್ಲಿ ವ್ಯಾಕರಣವಾಗಿ ಆನಂತರ ಭಾಷಾಶಾಸ್ತ್ರವಾಗಿ ಆಧುನಿಕ ಕಾಲದಲ್ಲಿ ಭಾಷಾವಿಜ್ಞಾನವಾಗಿ ಪರಿವರ್ತಿತವಾದುದನ್ನು ನೋಡಬಹುದು. ಹಿಂದಿನ ಭಾಷಾಭ್ಯಾಸದ ರೀತಿಗೂ ಇಂದಿನ ರೀತಿಗೂ ಅನೇಕ ಮೂಲಭೂತವಾದ ವ್ಯತ್ಯಾಸಗಳನ್ನು ನಾವು ಕಾಣುತ್ತೇವೆ.

ಹ್ಯಾಷನರ್ ಅವರು - "linguistics is the sclentific study of a lauguage or languages; it strives to discover general lrutbs and to formulate general laus relating to the growth and structure of its object" ಎನ್ನುತ್ತಾರೆ

ಭಾಷಾವಿಜ್ಞಾನ ಎಂಬುದು ಮಾನವ ವರ್ತನೆಗೆ ಸಂಬಂಧಿಸಿದಂತಹ ವಿಜ್ಞಾನ. ಯಾವುದೇ ವಾಕ್ಯವನ್ನು ಪೂರ್ಣ ಅರ್ಥ ಮಾಡಿಕೊಳ್ಳುವುದೆಂದರೆ ಮನುಷ್ಯನು ಮನಸ್ಸಿನ ನಡವಳಿಕೆಯನ್ನ ಅರ್ಥಮಾಡಿಕೊಂಡಂತೆ ಆಗುತ್ತದೆ. ಭಾಷೆ ನಿತ್ಯ ಪರಿವರ್ತನಶೀಲವಾದರೂ ಅದನ್ನ ಗಣನೆಗೆ ತಾರದೇ ಒಂದು ಕಾಲದ ಒಂದು ಪ್ರದೇಶದ ಭಾಷೆಯ ರಚನೆಯನ್ನು ನೀಡುವುದೇ ವರ್ಣನಾತ್ಮಕ ವಿಧಾನ ಎನಿಸಿಕೊಳ್ಳುತ್ತದೆ. ಇದನ್ನೇ ಬೇರೆ ರೀತಿಯಲ್ಲಿ ಹೇಳುವುದಾದರೆ ಭಾಷೆಯ ಅಧ್ಯಯನ ಒಂದು ಕಾಲಕ್ಕೆ ಒಂದು ಪ್ರದೇಶಕ್ಕೆ ಸೀಮಿತವಾದುದನ್ನು ವರ್ಣನಾತ್ಮಕ ಪದ್ಧತಿ ಎನ್ನುತ್ತೇವೆ. ಈ ರೀತಿಯ ಅಧ್ಯಯನವೇ ವರ್ಣನಾತ್ಮಕ ಭಾಷಾವಿಜ್ಞಾನ ಎನಿಸಿಕೊಳ್ಳುತ್ತದೆ.

ತೌಲನಿಕ ಭಾಷಾ ವಿಜ್ಞಾನದಲ್ಲಿ ಎರಡು ಅಥವಾ ಎರಡಕ್ಕಿಂತ ಹೆಚ್ಚು ಭಾಷೆಗಳ ತೌಲನಿಕ ಅಧ್ಯಯನ ನಡೆಯುತ್ತದೆ. ಇಲ್ಲಿ ಅಭ್ಯಾಸಿಸುವ ಭಾಷೆಗಳು ಸಾಮಾನ್ಯವಾಗಿ ಒಂದೇ ಗುಂಪಿಗೆ ಸೇರಿದ ಭಾಷೆಗಳಾಗಿರುತ್ತವೆ. ಕನ್ನಡ, ತಮಿಳು, ತೆಲುಗು ಇವುಗಳ ತುಲನಾತ್ಮಕ ಅಧ್ಯಯನಗಳನ್ನು ಇಲ್ಲಿ ಹೆಸರಿಸಬಹುದು ಇಂಥ ಅಧ್ಯಯನದಿಂದ ಆ ಭಾಷೆಗಳ ಮೂಲರೂಪವನ್ನು ಗುರುತಿಸಬಹುದು.

ವೈದೃಶ್ಯ ಭಾಷಾವಿಜ್ಞಾನದಲ್ಲಿ ಬೇರೆ ಭಾಷಾ ಗುಂಪುಗಳಿಗೆ ಸೇರಿದ ಭಾಷೆಗಳನ್ನು ಹೋಲಿಸಿ ಅವುಗಳಲ್ಲಿಯ ವೈದೃಶ್ಯಗಳನ್ನು ಅಥವಾ ಭಿನ್ನತೆಗಳನ್ನು ಅಭ್ಯಸಿಸುತ್ತಾರೆ. ಹೀಗೆ ವೈದ್ಯಶ್ಯ ಭಾಷಾ ವಿಜ್ಞಾನದಲ್ಲಿ ಎರಡು ಭಾಷೆಗಳ ನಡುವಿನ ವೈಷಮ್ಯಗಳನ್ನು ವಿಶ್ಲೇಷಿಸುವುದು ಮುಖ್ಯವಾಗಿದೆ.

ಇಂಥ ಭಾಷಿಕ ಅಧ್ಯಯನವು ಭಾರತದಲ್ಲಿ ತಂದವರು ಪಾಶ್ಚಾತ್ಯರು. ಅವರಲ್ಲಿ ಉತ್ತರ ಭಾರತದ ಭಾಷಿಕ ಅಧ್ಯಯನ ನಡೆಯಿತು. ದಕ್ಷಿಣ ಭಾರತದಲ್ಲಿಯ ಭಾಷಿಕ ಅಧ್ಯಯನ ಮೆಚ್ಚುವಂಥದು. ದಕ್ಷಿಣ ಭಾರತದಲ್ಲಿ ಕನ್ನಡ ಭಾಷೆಯೊಂದು ದ್ರಾವಿಡ ಭಾಷಾಗುಂಪಿಗೆ ಸೇರಿರುವುದರಿಂದ ದಕ್ಷಿಣ ಭಾರತದ ಭಾಷಿಕ ಅಧ್ಯಯ ಚರ್ಚಿಸುವುದು ಇಲ್ಲಿ ಸಮಂಜಸ ಎನಿಸುತ್ತದೆ.

ಬರ್ಟನ್ ಸ್ಟೈಯಿನ್ ಸಂಪಾದಿಸಿರುವ 'ಎಸ್ಸೇಸ್ ಆನ್ ಸೌತ್ ಇಂಡಿಯಾ' ಎಂಬ ಸಂಕಲನದಿಂದ ಆಯ್ದ ಲೇಕನವಾಗಿದೆ. ಪ್ರಸ್ತುತ ಕೃತಿಯು ೧೯೭೫ರಲ್ಲಿ ಹವಾಯಿ ವಿಶ್ವವಿದ್ಯಾಲಯದಿಂದ ಪ್ರಕಟವಾಯಿತು. ಭಾಷಾವಿಜ್ಞಾನದ ಆಧುನಿಕ ಕ್ಷೇತ್ರವು ತನ್ನ ಪ್ರಾರಂಭಿಕ ದೆಸೆಯಿಂದಲೇ ಭಾಷೆಯ ಅಮೂರ್ತ ಸ್ವರೂಪದ ಅವಿಷ್ಕಾರದತ್ತ ಗಮನಹರಿಸಿತು. ಸಾಮಾಜಿಕ ಭಾಷಾಶಾಸ್ತ್ರವೆಂಬ ಪರಿಭಾಷೆಯು ಭಾಷಾ ಪ್ರವೃತ್ತಿ. ಅಧ್ಯಯನಕ್ಕೆ ಸಂಬಂಧಿಸಿದ ವಿವಿಧ ಬಗೆಯ ಸಮೀಪನಗಳನ್ನು ಉಲ್ಲೇಖಿಸುತ್ತದೆ.

ಸಂಕುಚಿತಾರ್ಥದಲ್ಲಿ ಸಾಮಾಜಿಕ ಭಾಷಾವಿಜ್ಞಾನವನ್ನು ನಿರ್ವಚಿಸುವುದಾದರೆ ಅದು ಭಾಷಾವ್ಯವಸ್ಥೆಯ ಸ್ವರೂಪದಲ್ಲಾಗುವ ಬದಲಾವಣೆಗಲ ಕುರುಹುಗಳ ಕಡೆಗೂ ಭಾಷಿಕ ವ್ಯತ್ಯಾಸಗಳು ಪ್ರಕ್ರಿಯೆಗಳ ಕಡೆಗೂ ವಿಶೇಷ ಗಮನಹರಿಸುತ್ತದೆ. ದಕ್ಷಿಣ ಏಷಿಯಾವು ಭಾಷಾವ್ಯತ್ಯಾಸಗಳ ಅಧ್ಯಯನಕ್ಕೆ ಸಂಬಂಧಿಸಿದಂತೆ ಮಹತ್ತರ ಮಾಹಿತಿಯನ್ನು ಒದಗಿಸಿಕೊಟ್ಟಿದೆ.

ಕನ್ನಡ ಮತ್ತು ಮರಾಠಿ ಉಪಭಾಷೆಗಳಿಗೆ ಸಂಬಂಧಿಸಿದ ವಿವರಗಳು ಮುಂದೆ ಕಾಲಕಾಲಕ್ಕೆ ಪುಣೆಯ 'ಲಿಂಗ್ವಿಸ್ಟಿಕ್ ಸರ್ವೇಬಲೆಟಿನ್ ಆಪ್ ದ ಡೆಕ್ಕನ್ ಕಾಲೇಜ್' ಸಂಪುಟದಲ್ಲಿ ಪ್ರಕಟವಾಗಿವೆ. ಎಂ.ಎಲ್. ಆಪ್ಟೆಯವರು ಮುಂಬಯಿ ಮಹಾನಗರದಲ್ಲಿ ವಿವಿಧ ಹಿನ್ನಲೆಯುಳ್ಳ ಜನರು ಮಾತನಾಡುವ ವಿಭಿನ್ನ ಮರಾಠಿ ಮತ್ತು ಇತರ ಮೇಲ್ಜಾತಿಯವರ ಭಾಷೆಯು ವಿಶೇಷವಾಗಿ ಧ್ವನಿಶಾಸ್ತ್ರದ ದೃಷ್ಟಿಯಿಂದ ಬ್ರಾಹ್ಮಣ ಭಾಷೆಗಿಂತ ಭಿನ್ನವಾದ ಲಕ್ಷಣಗಳನ್ನು ತೋರಿಸುತ್ತದೆ.

ಕೆಳಜಾತಿಯ ಭಾಷಪ್ರಭೇದಗಳನ್ನು ಉಪಯೋಗಿಸುವ ಗುಂಪುಗಳ ಅನನ್ಯತೆಗೆ ಸಂಬಂಧಿಸಿದಂತೆ, ನಮ್ಮ ಬಳಿ ಸಾಕಷ್ಟು ಮಾಹಿತಿಗಳಿಲ್ಲ. ಅಸ್ಪೃಶ್ಯರು ತಮ್ಮ ಭಾಷೆಯಿಂದ ಗುರುತಿಸಲ್ಪಟುತ್ತಾರೆಂದು ಹೇಳುತ್ತಾ ಬರಲಾಗಿದೆ. ಸದ್ಯ ಗಮನಿಸಿದಂತೆ ಮುಸಲ್ಮಾನರದೂ ಭಾಷಾ ಭೇದವುಳ್ಳ ಒಂದು ಗುಂಪೆನಿಸುತ್ತದೆ. ಇಂಥ ಅಧ್ಯಯನಗಳು ನಾವು ಗಮನಿಸಿದ ಸಾಮಾಜಿಕ ಉಪಭಾಷೆಗಳಲ್ಲಿನ ವ್ಯತ್ಯಾಸಗಳಿಗೆ ಸಾಕಷ್ಟು ಪ್ರೇರಣೆಯನ್ನೊದಗಿಸಿದೆ. ಗ್ರಾಮೀಣ ಪರಿಸರಗಳಲ್ಲಿ ಕೆಲವೇ ಇಂಗ್ಲಿಷ್ ಪದಗಳು ಗೊತ್ತಿದ್ದರೆ ತಾನೂ ಶೋಕಿ ಮನುಷ್ಯ ತಿಳುವಳಿಕೆಯುಳ್ಳವ ಎಂಬುದಾಗಿ ತನ್ನ ಪ್ರತಿಷ್ಠೆಯನ್ನು ಸ್ಥಾಪಿಸಲು ಅದು ಸಹಕಾರಿಯಾಗುತ್ತದೆ. ಇಂಥ ಸಂಶೋಧನೆ ಇತ್ತೀಚೆಗೆ ಬಹಳ ನಡೆದಿವೆ. ಇವರಲ್ಲಿ ಅರ್ ನರಸಿಂಹಚಾರರು ಪ್ರಮುಖರು. ಕುಶಾಲಪ್ಪಗೌಡ, ಮರಿಯಪ್ಪಭಟ್ಟ, ಭಾಷಿಕ ಅಧ್ಯಯನ ಮಾಡಿದರು ಮುಂದೆ ಡಾ. ಚ.ರಾಮಸ್ವಾಮಿ, ಬಿ.ರಾಮಚಂದ್ರರಾವ, ಹಂಪನಾಗರಾಜಯ್ಯ, ಜೆ.ಎಸ್.ಕುಳ್ಳಿ, ವಿಲಿಯಂ ಮಾಡ್ತಾ ರಾಜೇಶ್ವರಿ ಮಹೇಶ್ವರಯ್ಯ ಭಾಷಿಕ ಅಧ್ಯಯನದಲ್ಲಿ ತೊಡಗಿದರೆ, ಕನ್ನಡ ವಿಶ್ವವಿದ್ಯಾಲಯ ಹಂಪಿಯ ಕನ್ನಡ ಭಾಷಾಭಿವೃದ್ಧಿ ವಿಭಾಗ ಇಂಥ ಒಳ್ಳೆ ಸಂಶೋಧನೆಯನ್ನು ಕೈಗೊಂಡಿದೆ ಅದರಲ್ಲಿ ಮುಖ್ಯರಾದವರು ಡಾ.ಕೆ.ವಿ.ನಾರಾಯಣ ಅವರು ಹೀಗೆಯೇ ಮುಂದುವರಿಯುವ ಧ್ಯೆಯವನ್ನು ಹೊಂದಿದ್ದಾರೆ.

## ೨.೩. ವರ್ಣೋತ್ಪತ್ತಿ ಸ್ಥಾನಗಳು ಹಾಗೂ ವರ್ಣ ವ್ಯತ್ಯಯಗಳು

**ವರ್ಣೋತ್ಪತ್ತಿ ಸ್ಥಾನಗಳು :** ಕಂಠ(ಕೊರಳು) ಜಿಹ್ವಾಮೂಲ(ನಾಲಿಗೆಯ ಬುಡ), ಉರ(ಎದೆ), ತಾಲು (ಅಂಗಳು), ಓಷ್ಠ(ತುಟಿ), ನಾಸಿಕ(ಮೂಗು), ಶಿರ(ಅಂಗಳಿನ ಮುಂಭಾಗ), ದಂತ(ಹಲ್ಲು) ಈ ಎಂಟು ಅಕ್ಷರ ಹುಟ್ಟುವ ಸ್ಥಾನಗಳು.

ಅವರ್ಣ, ಕವರ್ಗಗಳು ಕೊರಳಲ್ಲಿಯೂ, ಜಿಹ್ವಾಮೂಲೀಯ ನಾಲಿಗೆಯ ಬುಡದಲ್ಲಿಯೂ, ಹಕಾರ ವಿಸರ್ಗಗಳು ಎದೆಯಲ್ಲಿಯೂ, ಇವರ್ಣ ಚವರ್ಗ ಯತ್ವ ಶಕಾರಗಳು ಅಂಗಳಿನಲ್ಲಿಯೂ, ಉವರ್ಣ ಪವರ್ಗ ಉಪಧ್ಮಾನೀಯಗಳು ತುಟಿಯಲ್ಲಿಯೂ, ಙ, ಞ, ಣ, ನ, ಮ ಅನುಸ್ವಾರಗಳು ಮೂಗಿನಲ್ಲಿಯೂ, 'ಋ'ವರ್ಣ 'ಟ'ವರ್ಗ, 'ರ'ಕಾರ, 'ಶ'ಕಾರಗಳು ಅಂಗಳಿನ ಮುಂಭಾಗದಲ್ಲಿಯೂ 'ಒ'ವರ್ಣ 'ತ'ವರ್ಗ 'ಲ'ಕಾರ 'ಸ'ಕಾರಗಳು ಹಲ್ಲಿನಲ್ಲಿಯೂ ಹುಟ್ಟುತ್ತವೆ. ಏ ಐ ಗಳಿಗೆ ಕಂಠತಾಲು, ಓ ಔ ಗಳಿಗೆ ಕಂಠೋಷ್ಠ, ವಕಾರಕ್ಕೆ ದಂತೋಷ್ಠ ಉತ್ಪತ್ತಿ ಸ್ಥಾನಗಳು.

ಶುದ್ಧಾಕ್ಷರ : ಕನ್ನಡ ವೈಯಾಕರಣರು ಶುದ್ಧಾಕ್ಷರಕ್ಕೆ ಅಕ್ಕರವೆಂದೂ ವರ್ಣವೆಂದೂ ಎರಡು ಪರ್ಯಾಯನಾಮಗಳನ್ನು ಹೇಳುತ್ತಾರೆ. ಶುದ್ಧಾಕ್ಷರ, ಶುದ್ಧಗೆ, ಸುದ್ದಗೆ ಎಂಬ ಪದಗಳು ಅಚ್ಚಗನ್ನಡ ಭಾಷೆಯ ಮೂಲವರ್ಣ ಎಂಬ ಅರ್ಥದಲ್ಲಿ ಕನ್ನಡದಲ್ಲಿ ಬಳಕೆಯಾಗಿವೆ. ಭಾಷಾಶಾಸ್ತ್ರದಲ್ಲಿ 'ವರ್ಣ' ಎಂಬುದನ್ನು phoneme ಎಂಬ ಅರ್ಥದಲ್ಲಿಯೂ 'ಅಕ್ಷರ' ಎಂಬುದನ್ನು Syllable ಎಂಬ ಅರ್ಥವಲ್ಲಿಯೂ ಬಳಸಲಾಗುತ್ತದೆ. ಪ್ರಾಚೀನ ಕನ್ನಡ ವೈಯಾಕಾರಣರು ಎಲ್ಲ ಕಡೆಗಳಲ್ಲಿಯೂ ಈ ಭೇದವನ್ನು ಅನುಸರಿಸಿಲ್ಲ. ಬರೆಯುವುದಕ್ಕಾಗಲಿ ಉಚ್ಚರಿಸುವುದಾಗಲಿ ಬಾರದ ಧ್ವನಿಗಳು ಅಕ್ಷರಗಳಿಲ್ಲ.

ಉದಾ : ಸಿಡಿಲಿನ ಧ್ವನಿ, ಗುಂಡಿನ ಧ್ವನಿ, ಮಾನವನ ಸೀನು, ಕೆಮ್ಮು ಹಾಗೂ ಗುದ್ದದ್ವಾರದಿಂದ ಬರುವ ಧ್ವನಿಗಳೆಲ್ಲ ಭಾಷಾ ಧ್ವನಿಗಳಾಗಲಾರವು. ಪ್ರಾಚೀನ ವೈಯಾಕರಣರ ದೃಷ್ಟಿಯಲ್ಲಿ ಒಂದು ಧ್ವನಿಗೆ ವರ್ಣತ್ವ ಲಭಿಸಬೇಕಾದರೆ ಅದು ಉಚ್ಚರಿಸಲೂ ಬರೆಯಲೂ ಬರಬೇಕು. ಆದುದರಿಂದ ಅವರ ದೃಷ್ಟಿಯಲ್ಲಿ ಗ್ರಾಂಥಿಕ ಭಾಷೆಗೇ ಪ್ರಾಧಾನ್ಯ. ವ್ಯಾಕರಣವಿರುವುದು ಆ ಭಾಷೆಗೇ ಅಕ್ಷರಗಳು ಎರಡು ರೂಪಗಳಲ್ಲಿ ನಮ್ಮ ಗೋಚರಕ್ಕೆ ಬರುತ್ತವೆ. ಕಿವಿಗೆ ವಿಷಯವಾದ ಒಂದೇ ಧ್ವನಿರೂಪ, ಶ್ರಾವಣವೆಂದೂ ಬರೆಯುವ ಲಿಪಿ ಭೇದದಿಂದಾಗಿ ಹಲವು ಆಕಾರಗಳಲ್ಲಿ ಕಾಣಿಸುವ ರೂಪ, ಚಾಕ್ಷುಷವೆಂದೂ ತಿಳಿಯಬೇಕು.

ವರ್ಣವ್ಯತ್ಯಯಗಳು : ಬೀದರ ಜಿಲ್ಲೆಯ ಗಡಿಭಾಗವಾದ ಕನ್ನಡವನ್ನು ಕುರಿತು ಅದರಲ್ಲಿ ಕಂಡುಬರುವ ವರ್ಣವ್ಯತ್ಯಯ, ವ್ಯಾಕರಣ ರೂಪ, ಪದಜಾಲಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಶಿಷ್ಟ ಕನ್ನಡದೊಡನೆ ಹೋಲಿಸಿ ಸ್ಥೂಲವಾಗಿ ಹೀಗೆ ಸಮೀಕ್ಷಿಸಬಹುದು.

ಸ್ವರ : ೧. ಪದಾದಿಯ - ಅಕ್ಷರದ ಅ ಕಾರ ಕೆಲವು ಬಂಧುತ್ವ ವಾಚಕಪದಗಳಲ್ಲಿ ಯ ಕಾರವಾಗಿ ಮಾರ್ಪಟ್ಟಿರುವುದನ್ನು ಕಾಣಬಹುದು.

ಉದಾ : ಅಪ್ಪ-ಯಪ್ಪ yappa

ಅವ್ವ-ಯವ್ವ yavva

ಅಕ್ಕ-ಯಕ್ಕ yakka

ಅಣ್ಣ-ಯಣ್ಣ yaṇṇa

ಆದರೆ ಇಂತಹ ಬದಲಾವಣೆಯು ವಾಕ್ಯ ರಚನೆಯಲ್ಲಿ ಬರುವುದಿಲ್ಲ.

ಉದಾ : 'ನಮ್ಮಪ್ಪ ಬಂದಿಲ್ಲ'

'ಅಪ್ ಊರಿಗೆ ಹೋಗ್ಯಾನ'

ಈ ವಾಕ್ಯರಚನೆಯಲ್ಲಿ ಬರುವ 'ಅಪ್ಪ' ನಮ್ ಯಪ್ ಆಗಲಿ ಯಪ್ ಊರಿಗಿ ಹೋಗ್ಯಾನ ಆಗಲಿ ಆಗುವುದಿಲ್ಲ.

'ಯಕ್ ಹೋಗ್ಯಾಳ್'

'ಯಣೌ ಬಂದಾನ ಆಗುವುದಿಲ್ಲ'

ಬಂಧುತ್ವ ವಾಚಕವಲ್ಲದಲ್ಲಿಯೂ ಇಂತಹ ಬದಲಾವಣೆಯನ್ನು ನಾವು ಅಲ್ಲಲ್ಲಿ ಗಮನಿಸಬಹುದಾಗಿದೆ.

'ಅ' ಸ್ವರದ ಮುಂದೆ ಬರುವ ಪ, ವ ಗಳ ದ್ವಿತ್ವ ಲೋಪವಾಗುವುದು. ಔರಾದ ತಾಲೂಕಿನ ಕಡೆ ಮೊಪ್ಪ ಬಂದಿಲ, ಮೊವ್ವ ಊರಿಗಿ ಹೋಗ್ಯಾಳ ಹೀಗೆ ವಾಕ್ಯ ರಚೆಯಲ್ಲಿ ಬಳಸಿದರೆ ಕೂಗಿ ಕರೆಯುವಾಗ ಯಾವ್, ಯಾಪ್, ಯಾಕ್, ಯಾಣ್ ಎಂದು ಕರೆಯುವುದುಂಟು. ಬಂಧುತ್ವ ವಾಚಕವಲ್ಲದಲ್ಲಿಯೂ ಇಂತಹ ಬದಲಾವಣೆಯನ್ನು ನಾವು ಅಲ್ಲಲ್ಲಿ ಗಮನಿಸಬಹುದು.

ಬಳ್ಳಿ-ಬೆಳ್ಳಿ beḷḷI

ಕಬ್ಬಿಣ-ಕೆಬ್ಬುಣ kebbuna

ತಂಗಿ-ತೆಂಗಿ tengI

ಪದಾದಿಯ ಅಕ್ಷರದ ಅಕಾರ ಒಕಾರವಾಗಿ ಮಾರ್ಪಟ್ಟಿರುವುದನ್ನು ಕಾಣಬಹುದು.

| | | |
|---|---|---|
| ಉದಾ : | ಕಪ್ಪೆ - ಕೊಪ್ಪಿ · | koppI |
| | ಕಯ್ - ಕೊಯ್ | koy |
| | ಕಬ್ಬು - ಖೊಬ್ಬು | khobbU |
| | ಬಂಡಿ - ಬೊಂಡಿ | bonḍI |
| | ಸಪ್ಪಳ - ಸೊಪ್ಪುಳ್ | soppul |
| | ತಪ್ಪಲು - ತೊಪ್ಪುಲು | toppulU |
| | ಕಲ್ಲು - ಕೊಲ್ಲು | kollU |
| | ಕಣ್ಣು - ಕೊಣ್ | kon |

ಮಂದಿ - ಮೊಂದಿ mondI

ನವಿಲು - ನೊವುಲ್ novul

ಸನ್ಮುಖ - ಸೊನ್ಮುಕ್ sonmuk

ಹಸಿವು - ಒಸು osU

ಮದುವೆ - ಮೊದಿ/ಮುದಿ modi/madI

ಮಕ್ಕಳು - ಮೊಕ್ಕಳು mokkalU

ಪಲ್ಯ - ಪೊಲ್ಯ polE

ಅಷ್ಟು - ಒಟ್ಟು ottU

ಹೊಸಗನ್ನಡದ ಗಳು ಎಂಬ ಬಹು ವಚನದ ಪ್ರತ್ಯಯ ಗೊಳ್ ಆಗಿದೆ.

ಉದಾ : ಪಾರಗೊಳ್, ದನಗೊಳ್, ಪೋರಿಗೊಳ್

ಗುಡ್ಡಗೊಳ್, ನರಿಗೊಳ್, ಮರಿಗೊಳ್

ಪದಾದಿಯ ಹ್ ವ್ಯಂಜನ ಲೋಪಿಸಿ ಉಳಿಯುವ ಅ ಕಾರ ಒ ಕಾರವಾಗಿರುವುದಕ್ಕೆ

ಉದಾ : ಹಸಿವು - ಒಸು

ವ್ ವ್ಯಂಜನದ ಪರದಲ್ಲಿರುವ ಇ ಕಾರ ಉ ಕಾರವಾಗಿ ಕೆಲವಡೆ ಮಾರ್ಪಟ್ಟಿರುವುದಕ್ಕೆ ಉದಾಹರಣೆಗಳು ದೊರೆಯುತ್ತವೆ.

ಸಾವಿರ - ಸಾವುರ sa:vur

ನವಿಲು - ನೊವುಲು novulU

ಪದಾಂತ್ಯದ ಉ ಕಾರ ಇ ಕಾರವಾಗುವುದು

ಉದಾ : ಕುಳಿತು - ಖುಂತಿ khuntI

ನಿಂತು - ನಿಂತಿ nIntI

ಬರೆದು - ಬರ್ದಿ bardI

ಒಯ್ದು - ಒಯ್ದಿ oydU

ಕೊಟ್ಟು - ಕೊಟ್ಟಿ kottI

ತೆಗೆದುಕೊಂಡು - ತೊಕೊಂಡಿ tokondI

ತೆರೆದು - ತೆರ್ದಿ terdI

ಈ ರೂಪ ವಾಕ್ಯ ರಚನೆಯಲ್ಲಿ ಸಿಕ್ಕುತ್ತವೆ.

| | | |
|---|---|---|
| ಉದಾ : | ಕುಂತಿ ಬಂದಾನ | kuntI banda:n |
| | ನಿಂತಿ ನೋಡ್ದ | nIntI no:dda |
| | ಬರ್ದಿ ತೋರುಸ್ದ | bardI to:rsda |
| | ಬಯ್ದಿ ಕೊಟ್ಟ | byldI kottI |
| | ಕೊಟ್ಟಿ ಬಂದ | koṭṭI banda |
| | ತೊಕೊಂಡಿ ಹೋದ | tokonḍI ho:da |
| | ತೆರ್ದಿ ಖುಂತ | terdI khunta |

ಪದಾಂತ್ಯದ ಇ ಕಾರ ಎ ಕಾರವಾದದ್ದಕ್ಕೆ

| | | |
|---|---|---|
| ಉದಾ : | ನರಿ - ನರೆ, | ಹುಣಸೆ- ಹುಂಚಿ, |
| | ತಂಗಿ - ತಂಗೆ, | ಸಿಂದಿ-ಸಿಂದೆ, |
| | ನಾದಣಿ-ನಾದಣೆ, | ಅತ್ತಿ-ಅತ್ತೆ |

ಇಕಾರ ಎಕಾರವಾಗಿದಕ್ಕೆ ಉದಾಹರಣೆ

ಇಬ್ಬರು-ಎಬ್ಬರು, ಇರುವೆ-ಎರು

ಪದಾಂತ್ಯದ, ಅಕಾರ ಎಕಾರವಾಗಿರುವ ಕೆಲವು ಉದಾಹರಣೆಗಳು

| | |
|---|---|
| ದೊಡ್ಡ-ಧೊಡ್ಡು | dhoddU |
| ಸಾವಿರ-ಸಾವುರು | sa:vurU |
| ಇಲ್ಲ?- ಇಲ್ಲು? | İlla |

ವ್ಯಂಜನ : ಪದಾದಿ ಹಾಗೂ ಪದಮಧ್ಯದ 'ವ್ 'ಕಾರ ಯ್‌ಕರವಾಗಿ ಮಾರ್ಪಟ್ಟಿದೆ.

ಉದಾ :

ವೇಳೆ-ಯಾಳಿ, ಬೇವಿನಸೊಪ್ಪು-ಬೇಯಿನ ತೊಪ್ಪುಲ್,

ವೇಶ-ಯೇಸ್ಯ, ಬಾವಿ-ಭಾಯ್\ಭಾಯ್,

ಮಾವಿನಕಾಯಿ-ಮಾಯಿನಕಾಯಿ

ಸಾಮಾನ್ಯವಾಗಿ ಎ ಕಾರದಿಂದ ಪ್ರಾರಂಭವಾಗುವ ಪದಗಳು 'ಯ' ಕಾರವಾಗಿ ಮಾರ್ಪಟ್ಟಿದೆ.

| | | |
|---|---|---|
| ಉದಾ : | ಏನು-ಯಾನು | ya:nU |
| | ಕೆರೆ-ಕ್ಯರಿ | kriE |
| | ಬೆಳೆ-ಬ್ಯಾಳಿ | bEḷI |
| | ಬೇಳೆ-ಬ್ಯಾಳೆ | bƐle |

ಹಿಪ್ಪೆ ಪದದ ಹ ಕಾರ ಲೋಪವಾಗಿ 'ಇಪ್ಪೆ'ಯಾಗಿ ಇಪ್ಪಿಯಾಗಿದೆ.

ಬಸವಕಲ್ಯಾಣ ತಾಲ್ಲೂಕಿನ ಕೊಹಿನೂರು, ಬಟಗೇರಾ ಕಡೆ ಗ್ ಕಾರ 'ಯ್ 'ಕಾರವಾಗಿ ಮಾರ್ಪಟ್ಟಿದೆ.

ಉದಾ : ಆಗುತ್ತದೆ - ಆಯ್ತದ a:tada

ಹೋಗುತ್ತದೆ - ಹೋಯ್ತದ ho:ytad

ವ್ ಕಾರ ಗ್ ಕಾರವಾಗಿ ಮಾರ್ಪಟ್ಟಿದೆ

ಉದಾ : ಇವತ್ತು - ಇಗೋತ್ Igo:A

ಮೂವರು - ಮೂಗರು mu:garU

ಪದ ಮಧ್ಯದ ರ ಕಾರ ಲೋಪವಾಗಿ ಅದರ ನಂತರ ಬರುವ ವ್ಯಂಜನಕ್ಕೆ ದ್ವಿತ್ವ ಬರುತ್ತದೆ.

ಎರಡು-ಎಡ್ಡು, ಕೊರಳು-ಕೊಳ್ಳು,

ಕುರುಡ-ಕುಡ್ಡ, ಮರಳು-ಮಳ್ಳು,

ಎರಳೆ-ಎಳ್ಳಿ, ಬೆರಳು-ಬೊಳ್ಳು\ಬಟ್ಟು,

ನೆರಳು-ನೆಳ್ಳು, ಕರಳು-ಕಳ್ಳು,

ಕಡಲೆ-ಕಡ್ಡಿ, ಪರಡ-ಫಡ್ಡ್,

ಕರಡಿ-ಕಡ್ಡಿ, ಕೊರಡಿ-ಕೊಡ್ಡಿ,

ದರಡಿ-ಧಡ್ಡಿ(ಹೊಳೆದಂಡೆಗೆ)

ಪದಮಧ್ಯದ ವ್ ಕಾರ ಬ್ ಕಾರವಾಗಿದೆ.

ಉದಾ : ಅರಿವೆ-ಅರಬಿ arabI

ಲೋಪವಾಗಿ ಸರಳೀಕೃತವಾದುದುಕ್ಕೆ

ಉದಾ : ಮದುವೆ - ಮದಿ/ಮೊದಿ

ಇರುವೆ - ಇರು irU

ಅಡವಿ - ಅಡಿ aḍi

ನನಗೆ - ನಂಗ್ nang

ನನಗೆ - ನಿಂಗ್ ning

ಕುಳಿತುಕೊ - ಖೂಡು khu:dU

ಹೊರಟಿದ್ದಾನೆ - ಹೊಂಟಾನ್ honta:n

ಮನೆಯಲ್ಲಿ - ಮನ್ಯಾಗ manaEg

ಉಣಲಿಕ್ಕೆ - ಉಳ್ಳಾಕ uḷḷaka

ಮಲಗಿಕೊ - ಮೊಕೊ/ಮಂಗು/ಮಲಕೊ

ಹೋಗುವುದು ಬೇಡ - ಹೋಗ್ಬ್ಯಾಡ

ನಿಯಮ - ನೇಮ

ಮನೆಯೊಳಗೆ - ಮನ್ಯಾಗ

ಚೆನ್ನಾಗಿದೆ - ಛಂದದ

ಕೆಲವು ಪದಗಳಲ್ಲಿ ಅನುಸ್ವಾರ ಸೇರಿಕೊಮಡಿವೆ.

| | |
|---|---|
| ಹೌದು- ಹೊಂದು, | ಕೂದಲು-ಕೂಂದುಲ, |
| ಸೌಟು-ಸೌಂಟ್, | ಬೀಜ-ಭೀಂಜ, |
| ಸೌತೆ-ಸೌಂತೆ, | ಎಮ್ಮೆ-ಯಂಮ್ಮಿ, |
| ಬಾವಿ-ಭಾಂಯಿ, | ಕಿವಿ-ಕಿಂವಿ |

ಇಂಥ ರೂಪಗಳು ಹೊಲೆಮಾದಿಗರ ಕನ್ನಡದಲ್ಲಿ ಬಳಕೆಯಲ್ಲಿವೆ.

## ೨.೪. ತೌಲನಿಕ ಭಾಷಾ ಪ್ರಭೇದಗಳ ಅಧ್ಯಯನ

ಕನ್ನಡ ಎಂಬುದು ಸಾಮಾನ್ಯವಾಗಿ ಎಲ್ಲರಿಗೂ ಗ್ರಾಹ್ಯವಾದ ವಿಷಯವೆ. ಆದರೆ ಅದನ್ನು ಯಾರೂ ಸಮರ್ಪಕವಾಗಿ ನಿರ್ವಹಿಸಲಾರದೆ ಹೋಗಬಹುದು. ಈ ಭಾಷಾ ಪ್ರಕಾರ ಆಡುವವನಿಗೆ ಸಮಾಜದಲ್ಲಿ ಗೌರವ ತರುವಂಥದ್ದಾಗಿರುತ್ತದೆ. ಪ್ರಸಿದ್ಧ ಭಾಷಾ ಶಾಸ್ತ್ರಜ್ಞ ಬ್ಲೂಮ್ ಫೀಲ್ಡ್ ಹೇಳುವಂತೆ ಒಂದು ಮಗು ತಾನು ಹುಟ್ಟಿ ಬೆಳೆದ ಪರಿಸರದ ಸ್ಥಳೀಯ ಭಾಷೆಯನ್ನು ಕಲಿಯುತ್ತದೆ. ಅದಕ್ಕೆ ಪ್ರಾಂತೀಯ ಭೇದ ಗೊತ್ತಾಗದು. ಶಿಷ್ಟ ಮತ್ತು ಶಿಷ್ಟೇತರ ಭಾಷಾಭೇದಗಳು ನಿರಂತರವಾಗಿ ಒಂದರ ಮೇಲೊಂದು ಪ್ರಭಾವ ಬೀರುತ್ತಲೇ ಇರುತ್ತದೆ.

ಕನ್ನಡ ಭಾಷೆಯನ್ನು ಕುರಿತು ಪ್ರಸ್ತಾಪಿಸುವಾಗ ಪ್ರಾಚೀನ ಕವಿಗಳು ವೈಯಾಕರಣರು ಮಾರ್ಗ, ದೇಸಿ, ಗ್ರಾಮ್ಯ ಎಂಬುದಾಗಿಯೂ ಆಧುನಿಕ ಕನ್ನಡದ ಪ್ರಸ್ತಾಪ ಬಂದಾಗ ಭಾಷಾವಿಜ್ಞಾನಿಗಳು ಶಿಷ್ಟ, ಪ್ರಮಾಣ, ಗ್ರಾಂಥಿಕ ಹಾಗೂ ವ್ಯವಹಾರಿಕ ಎಂಬ ಭೇದಗಳನ್ನು ಗುರುತಿಸುತ್ತಾರೆ. ಈಗ ಇಲ್ಲಿ ಚರ್ಚಿಸಬೇಕಾದುದು ವ್ಯವಹಾರಿಕ ಕನ್ನಡ ಎಂದು.

ಬೀದರ ಕನ್ನಡವನ್ನು ಕುರಿತು ನೇರವಾಗಿ ಪ್ರಸ್ತಾಪಿಸುವುದಕ್ಕೆ ಮುಂಚೆ ಅಲ್ಲಿನ ಹಿಂದಿನ ಕನ್ನಡವನ್ನು ಕುರಿತು ಸ್ವಲ್ಪ ಮಟ್ಟಿಗೆ ಪ್ರಾಸ್ತಾಪಿಸುವುದು ಸೂಕ್ತವೆನಿಸುತ್ತದೆ. ಚಾಲುಕ್ಯರು ಆರನೇಯ ಶತಮಾನದಲ್ಲಿ ಕರ್ನಾಟಕದಲ್ಲಿ ನೆಲೆಯೂರಿ ಬಾದಾಮಿಯನ್ನು ನೆಲೆವೀಡನ್ನಾಗಿ ಮಾಡಿಕೊಂಡದ್ದು ಇತಿಹಾಸದ ಪ್ರಸಿದ್ಧವಾದ ವಿಷಯವೆ.

ಈ ಭಾಗದಲ್ಲಿ ರಾಷ್ಟ್ರಕೂಟರ ಶಾಸನಗಳು ಸಿಗುತ್ತವೆ. ಆ ಎಲ್ಲ ಶಾಸನಗಳನ್ನು ಶೇಖರಿಸಿ ಪ್ರಕಟಿಸುವ ಕಾರ್ಯ ಇನ್ನೂ ಆಗಬೇಕಾಗಿದೆ. ಈ ಭಾಗದ ಕನ್ನಡದ ವಿದ್ಯಮಾನವನ್ನು ಪರಿಶೀಲನೆಗೆ ತಂದುಕೊಳ್ಳುವಾಗ ಶ್ರೀವಿಜಯನ ಕವಿರಾಜಮಾರ್ಗದ ಕನ್ನಡವನ್ನು ನಾವು ಗಮನದಲ್ಲಿರಿಸಿಕೊಳ್ಳಬೇಕು. ಇದು ಆಗಿನ ಕಾಲದ ಎಂದರೆ ಎಂಟನೆಯ ಶತಮಾನದಿಂದ ಹತ್ತನೆಯ ಶತಮಾನದ ಕೊನೆಯವರೆಗಿನ ಈ ಭಾಗದ ಕನ್ನಡದ ಸ್ವರೂಪದ ಪರಿಚಯ. ಮುಂದೆ ಅಧಿಕಾರ ಪಲ್ಲಟವಾಯಿತು ಅರಸರ ಮೇಲರಸರು ಬಂದರು. ಆ ಮಹಾ ಅಗ್ನಿಪ್ರಳಯದಲ್ಲಿ ಭಸ್ಮವಾಗಿ ಹೋದವು. ಚಾಳುಕ್ಯ ಎರಡನೆಯ ತೈಲಪನು ಈಗ ಕರ್ನಾಟಕದ ಚಕ್ರವರ್ತಿ. ಬೀದರಿನ ಕಲ್ಯಾಣ ಆಗ ಚಾಳುಕ್ಯರ ರಾಜಧಾನಿ. ತೈಲನ ಆಸ್ಥಾನದಲ್ಲಿಯೇ ರನ್ನ ಕವಿ ಗದಾಯುದ್ಧವನ್ನು ಬರೆದದ್ದು ಆಗಿನ ಕಾಲದಲ್ಲಿ. ಆ ಭಾಷೆ ವೀರಾವೇಶದ ಭಾಷೆ, ಕೆಚ್ಚಿನ ಭಾಷೆ, ನಂತರ ಕರ್ನಾಟಕದ ಆಧಿಪತ್ಯ ಅದೀಗ ಕಲಚೂರಿರಾಜರ ವಶವರ್ತಿಯಾಗುತ್ತದೆ. ಹನ್ನೆರಡನೆಯ ಶತಮಾನದ ಮಧ್ಯಭಾಗ, ಬಸವೇಶ್ವರರ ಅಭ್ಯುದಯದ ಕಾಲ. ಕನ್ನಡ ಭಾಷೆಯ ನವೋದಯದ ಕಾಲ. ಕಲ್ಯಾಣ ಭೂಮಿ ಕೈಲಾಸವೆನಿಸಿತು. ಶಿವಶರಣರ ಕನ್ನಡದ ವಾಣಿ ಅಮರ ವಾಣಿಯಾಯಿತು. ಬಸವಣ್ಣನವರ ಮುಖಕಮಲದಿಂದ ಹೊರಟ ಆ ದಿವ್ಯವಾಣಿ ಅಮೃತ ಸ್ತುತ್ಯವಾಯಿತು. ಕನ್ನಡಕ್ಕೆ ನವಚೈತನ್ಯವನ್ನು ಎರೆಯಿತು. ಅದು ಆಗಿನ ಇಲ್ಲಿಯ ಜನವಾಣಿ. ಎಂಥ ಆಕರ್ಷಕ ಶಕ್ತಿ ಆ ವಾಣಿಯದು! ಅಲ್ಲಮ, ಚನ್ನಬಸವಣ್ಣ, ಸಿದ್ಧರಾಮರಂಥ ಜ್ಞಾನಿಗಳನ್ನು ತನ್ನತ್ತ ಸೆಳೆಯಿತು. ಅಸಂಖ್ಯಾತ ಶಿವಶರಣರ ಮುಖಮಂಟಪದಲ್ಲಿ ಶೂನ್ಯ ಸಿಂಹಾಸನದಲ್ಲಿ ನರ್ತಿಸತೊಡಗಿದಳು ಕನ್ನಡ ಸರಸ್ವತಿ. ಬಸವ ಕಲ್ಯಾಣ ರಂಗಸ್ಥಳ ಬಸವಣ್ಣನವರ ಮಹಾತ್ಮೆ ಎಂಥದು? ಕನ್ನಡ ಬಾರದವರಿಗೂ ಅವರ ಸ್ಮರಣೆ ಮಾತ್ರದಿಂದ ಕನ್ನಡದ ಜ್ಞಾನೋದಯವಾಗಿ ಕನ್ನಡದಲ್ಲಿ ನುಡಿಸಿತು.

ಹನ್ನೆರಡನೆಯ ಶತಮಾನದ ಕೊನೆಯವರೆಗೆ ಈ ಭಾಗದ ಕನ್ನಡದ ಸುವರ್ಣಯುಗ. ಆರನೆಯ ಶತಮಾನದಿಂದ ಹನ್ನೆರಡನೆಯ ಶತಮಾನದ ಕೊನೆಯವರೆಗೆ ಈ ಆರು ನೂರು ವರ್ಷಗಳ ಸುದೀರ್ಘ ಕಾಲ ಹೊನ್ನಿನ ಕಾಲ. ಅಲ್ಲಿಂದ ಈಚೆಗೆ ಕನ್ನಡದ ಈ ಪ್ರದೇಶ ವಿಪತ್ಪರಂಪರೆಯನ್ನು ಎದುರಿಸ ಬೇಕಾಯಿತು. ಕಲ್ಯಾಣಿ ಚಾಲುಕ್ಯ ಸಾಮ್ರಾಜ್ಯದ ಪತನವಾಯಿತು. ಹೀಗೆ ಮುಂದೆಲ್ಲ ಚರಿತ್ರೆಯ ವಿಷಯದ ಸುರುಳಿ ಬಿಚ್ಚುತ್ತಾ ಹೋಗುವುದರಿಂದ ಇದನ್ನು ಹೆಚ್ಚಿಗೆ ವಿವರಿಸುವುದಿಲ್ಲ. ಇಲ್ಲಿ ನಾವು ಗಮನಿಸಬೇಕಾದ ಅಂಶವೆಂದರೇ ಬೀದರ ಪ್ರಾಂತ್ಯ ಆಗಲೇ ಕನ್ನಡದ ರಾಜರ ಕೈಬಿಟ್ಟಿತ್ತು ಮುಸಲ್ಮಾನರ ಆಳ್ವಿಕೆಯಿಂದ ಕನ್ನಡ ಮಾಸಿಹೋಗತೊಡಗಿತು. ಈ ಭಾಗದ ಕನ್ನಡದ ಮುಖ ಆಗಿನಿಂದ ಅವನತಿಯ ಕಡೆ ತಿರುಗಿಕೊಂಡಿತು. ಕನ್ನಡದ ಕೇಂದ್ರ ಇಲ್ಲಿಂದ ತುಂಗಭದ್ರೆಯ ದಕ್ಷಿಣಕ್ಕೆ ಸ್ಥಳಾಂತರಹೊಂದಿತು.

ಬೀದರ, ಗುಲಬರ್ಗಾ ಹಾಗೂ ಬಿಜಾಪುರ ಪ್ರಾಂತ್ಯ ಬಹಮನಿ ಆಳರಸರ ಕೈಯಲ್ಲಿತು. ಇವರ ಕಾಲದಲ್ಲಿ ಉರ್ದು, ದಕ್ಕಿನಿ ಭಾಷೆ ಊರ್ಜಿತೆಗೆ ಬಂದಿತು ಕನ್ನಡಕ್ಕೆ ಹಾಗಾಗಲಿಲ್ಲ. ಫಾರ್ಸಿ, ಉರ್ದು

ಭಾಷೆಗಳ ಪ್ರಭಾವಕ್ಕೆ ಕನ್ನಡ ಒಳಗಾಗದ ಕಾಲವದು, ಒಬ್ಬಿಬ್ಬ ಸುಲ್ತಾನರಿಗೆ ಕನ್ನಡ ಬರುತ್ತಿದ್ದಿತೆಂದು ಹೇಳುತ್ತಾರೆ. ಡಾ.ಸಾ.ಸಿ.ಮರುಳಯ್ಯನವರು ಬರೆದ 'ಅಪರುಪದವರು' ಎಂಬ ಕೃತಿಯಲ್ಲಿ ಬೀದರಿನ ಗವಾನ ಮದರಸಾದ ವಿದ್ಯೆಯ ಬಗ್ಗೆ ಹೇಳುವಾಗ ಅಲ್ಲಿ ವಚನಗಳ ಬಗ್ಗೆಯೂ ಚರ್ಚಿಸಲಾಗುತ್ತಿತ್ತು ಎಂದು ಪ್ರಸ್ತಾಪಿಸಿದ್ದಾರೆ. ಈ ವಿಷಯದ ಬಗ್ಗೆ ಚರ್ಚೆ ನಡೆಯಬೇಕಾಗಿದೆ. ಸಂಶೋಧಕರು ಈ ಕಡೆ ಗಮನಹರಿಸಬೇಕು. ಮುಂದೆ ಮುಂದೆ ಮರಾಠರ ಧಾಂದಲೆ, ಮತ್ತೊಂದು ಕಡೆ ನಿಜಾಮನ ಉಪಟಳ. ಮಧ್ಯ ಬ್ರಿಟಿಷರ್ ಕುಟಿಲ ತಂತ್ರ, ಹೀಗಾಗಿ ಇಲ್ಲಿಯ ಕನ್ನಡ ಜನಕ್ಕೆ ದೇವರೇ ಗತಿ. ಕನ್ನಡ ಓದುವದೂ, ಬರೆಯುವುದೂ ಪೂರ್ತಿಯಾಗಿ ಹೋಗಿಬಿಟ್ಟಿತ್ತು. ಮಾತಾನಾಡುವಷ್ಟರ ಮಟ್ಟಿಗೆ ಜೀವದಿಂದುಳಿಯಿತು.

೧೬ನೆಯ ಶತಮಾನದ ತರುವಾಯಿ ೧೯ನೆಯ ಶತಮಾನದಲ್ಲಿಯೂ ಪುನಃ ಗಾಢಾಂಧಕಾರ ಕವಿಯಿತು. ಮರಾಠಿ, ಪಾರಸಿ, ಉರ್ದುಗಳ ಪ್ರಭಾವ ಬೆಳೆದು ಕನ್ನಡದ ಕಲಿಕೆ ನಿಂತು ಹೋಯಿತು ಎನ್ನುವಷ್ಟರ ಮಟ್ಟಿಗೆ ಪರಿಸ್ಥಿತಿ ಬದಲಾಯಿತು. ಕನ್ನಡ ಜನರ ಬಾಯಲ್ಲಿಯೇ ಉಳಿಯಿತು. ಮೋಡಿ ಭಾಷೆ ಬೆಳೆದು ಬಂತು. ಮೋಡಿ ಎಂದರೇ ಮರಾಠಿ ಶಬ್ದಗಳೆ -ಅವೆ ಲಿಪಿ ಆದರೆ ಉರ್ದುವಿನಂತೆ ಜೋಡಿಸಿ ಬರೆಯುವುದು ಈ ಪದ್ಧತಿ ರೂಢಿಗೆ ಬಂತು. ಇದೂ ಸಾರ್ವತ್ರಿಕವಲ್ಲ. ಮೋಡಿ ಬರೆಯುವುದು ಒಂದು ಹೆಮ್ಮೆಯ ವಿಷಯವಾಯಿತು(ಮೋಡಿ ಎಂದರೆ ಮುರಿದು ಹಾಕು ಎಂದರ್ಥ. ಕನ್ನಡವೇ ಮುರಿ ಎಂದಾಗಿರಬಹುದು).

ಇನ್ನು ಇಂದಿನ ಕನ್ನಡದ ಸ್ವರೂಪಕ್ಕೆ ಬರಬಹುದು. ಈ ಹಿನ್ನೆಲೆ ಸ್ವಲ್ಪ ದೀರ್ಘವಾಯಿತೆಂದೇನಿಸುತ್ತದೆ. ಆದರೂ ಅದು ಅನಿವಾರ್ಯ ಎನಿಸುತ್ತದೆ. ದಿಙ್ಮಾತ್ರವಾಗಿ ಜ್ಞಾಪಕಕ್ಕೆ ತಂದುಕೊಡಬೇಕೆಂಬುದು ಮುಖ್ಯೋದೇಶ. ಇಲ್ಲದಿದ್ದರೆ ಪುಲಿಗೆರೆಯ ಕನ್ನಡವೇ ಎಂಬ ಭ್ರಮೆಯಾಗಬಾರದಷ್ಟೆ!

ಬೀದರ ಕನ್ನಡ ಭಾಷೆಯ ಬಗ್ಗೆಯೇ ಸಂಶೋಧನೆ ಮಾಡ ಹೊರಟ ಇಲ್ಲಿ ನೇರವಾಗಿ ಈ ಭಾಗದ ಕನ್ನಡಕ್ಕೆ ಬರುವದು ಸಮಂಜಸ ಎನಿಸುತ್ತದೆ.

'ಕದಕಂತ ಹೇಳ್ದ, ಕಿದಕಂತ ಬಂದ'

ಅದಕ್ಕೆ ಎಂದು ಹೇಳಿದೆ, ಇದಕ್ಕೆ ಎಂದು ಬಂದೆ' ಎಂದು ಇವುಗಳ ಅರ್ಥ.

'ಚುಟ್ಟಾ, ಬಿಗಿಲಾಕ ತಂಬಾಕ್ ಕುಡು' (ಹೊಗೆ ಸೊಪ್ಪು ಸೇದರು ತಂಬಾಕು ಕೊಡು)

'ತಕೊ', ಇಕೊ, ಇಕಾ... (ಇದು ಉತ್ತರ)

ಬೀಡಿಗೆ<ಚುಟ್ಟಾ ತಂಬಾಕು ಎಂಬುದು ತೆಲುಗಿನಿಂದ ಬಂದಿದೆ; ಅನ್ಯಭಾಷೆಗೆ ಕೂಡ ಧಾವಿಸಿದೆ. ಕಾಯಿ ಪಲ್ಲೆಗೆ ಈ ಕಡೆ ಉರ್ದು ಪ್ರಭಾವದಿಂದ 'ತರಕಾರಿ' ಎಂದೇ ಹೇಳುತ್ತಾರೆ. ಪ.ಜಾ.ಅವರ ಮನೆಯಲ್ಲಿ

ಕನ್ನಡ ಬಳಸುವವರಿದ್ದರೆ 'ಪಲ್ಲೆ' ಎಂದರೆ 'ಮಾಂಸ' ಎಂದರ್ಥ. 'ರಸ್ತೆ' ಎನ್ನುವುದಿಲ್ಲ 'ಹಾದಿ' ಎನ್ನುತ್ತಾರೆ.



'ನಿನ್ ಖೂನಾ ಅಜೀಬಾತ್ ಇಲ್ಲ' ಎಂದರೆ ನಿಮ್ಮ ಗುರುತು ಏನೇನೂ ಇಲ್ಲವೆಂದು. ತಪ್ಪಲು, ತೊಪ್ಪಲ್ ಎಂದೆ ಹೇಳುತ್ತಾರೆ, ಸೊಪ್ಪು ಎಂದು ಹೇಳುವದಿಲ್ಲ. 'ಹಜಾಮ' ಎಂದಾಗಲಿ 'ಕ್ಷೌರಿಕ' ಎಂದಾಗಲಿ ಹೇಳುವುದಿಲ್ಲ 'ನೌದ್' ಎಂದು ಹೇಳುತ್ತಾರೆ. 'ನೌದುನ್ ಕಡಿ ಹೋಗಿದಾ ತಲಿ ಮಾಡ್ಕೊಕೊಲಾಕ' ಎಂದಾಗ ಬೆಂಗಳೂರು ಮಂಗಳೂರಿನವರಿಗೇನು ಗೊತ್ತು? ಈ ಮೊದಲು ಈತನಿಗೆ ತಲೆ ಇರಲಿಲ್ಲವೇ? ಎಂದು ತಿಳಿದುಕೊಳ್ಳಬಹುದು. ಆದರೆ ಇಲ್ಲಿ ಕ್ಷೌರ ಮಾಡಿಸಿಕೊಳ್ಳಲಿಕ್ಕೆ ಎಂದಾಗುತ್ತದೆ.

'ಕೊನಮಳಿ ಇದ್ದರಾ ಗಾಡಿ ಖಾಲಿ ಛಂದ ನಡಿತಾವ್' ಇಲ್ಲಿ ಕೊನಮಳಿ ಅಂದರೆ ಕೊನೆಯ ಮೋಳೆ(ಕಡಗೀಲು) ಎಂಬುದರ ರೂಪಾಂತರ. 'ಎತ್ತಿನ ಕೊಳ್ ಬಿಡು'; 'ಮಿಳೀ ಸುತ್ಕೊ', ಜಂಲ್ಗೆ ಖಿಳೆ ಖಟ್ಕಿ, 'ಕುದ್ರಿಕಾಲ್ ಕೊಟಕ್ಯಾಗ ಭೀಟು', 'ಚ್ಯಾಕ್ ಬಿಚ್ಕೊಣಡಿ ಘಿಸಡ್ಯಾನ ಬಲ್ಲಿ' ಹಳಗಕ ಬಂದಾವ' 'ಎತ್ಗುಳಿಗಿ ಬಂದಾರಿಗಿ ಬಿಟ್ಟು ಬೆಂಚ್ಯಾಗ ನೀರು ಕುಡುಸ್ಕೊಂಡು ಬರ್ತಾ'. 'ನ್ಯಾರಿ ಯಾಳಿಗಿ ಕಟ್ಟಿದೆವ್ ಆರ್ ಎಡ್ ಬಾರ ಬಳಗಾ ಹಾಕೊತು ಎತ್ತು. (ಮಿಳಿ ಎಂದರೆ ದನಗಳ ಚರ್ಮದಿಂದ ನಾರುತೆಗೆ ಮಾಡಿ ವಿಶಿಷ್ಟ ಹಗ್ಗ) ಜಂತ್ಗಿ,(ಎತ್ತುಗಳ ಕೊರಳಿಗೆ ಕಟ್ಟುವ ಒಂದು ತರಹ ಪಟ್ಟಿ) ಖಿಳೆ ಖಟಕಿ(ಎತ್ತಿನ ಕೊರಳು ನೊಗದಿಂದ ಸರಿಸಬಾರದೆಂದು ಮಾಡಿದ ಕಟ್ಟಿಗೆಯ ಕೋಲು) ಕುದ್ರಿಕಾಲು (ಬಂಡಿಯ ನೊಗವಾಗ ನೆಲಕ್ಕೆ ತಾಗದಂತೆ ಆಧಾರವಾಗಿ ನಿಲ್ಲಿಸುವ ಕಟ್ಟಿಗೆಗೆ ಹಗ್ಗ ಜೋಡಿಸಿ ಮಾಡಿದ ವಸ್ತು) ಚಾಕ್ ಎಂದರೆ ಬಂಡಿಯ ಚಕ್ರ, ಹಳಗ ಎಂದರೆ ಬಂಡಿಯ ಚಕ್ರಕ್ಕಿರುವ ಕಬ್ಬಿಣದ ಪಟ್ಟಿ. ಬಂದಾರಿ ಎಂದರೆ ಹೊಲದ ಹುಲ್ಲಿರುವ ಕಟ್ಟಿ, ಬೆಂಚಿ ಎಂದರೆ ನದಿಯ ದಡದ ಹೊರಗಿರುವ ನೀರು ನಿಲ್ಲುವ ಸ್ಥಳ, ನ್ಯಾರಿ ಎಂದರೆ ಬೆಳಗ್ಗಿನ ಉಪಹಾರ ಈ ಉಪಹಾರದಲ್ಲಿ ತಂಗಳು ರೊಟ್ಟಿ, ಸೇಂಗಾ ಮತ್ತಾವದರದೊ ಹಿಂಡಿ, ಕೆಲವು ಸಾರಿ ಮೊಸರು ಇರುತ್ತದೆ. ಬೆರಣಿ ಎಂದು ರೂಢಿಯಲಿಲ್ಲ. ಕುಳ್ಳು ಎಂದೇ ಹೇಳುತ್ತಾರೆ. 'ಕೂಗು' ಎಂಬುದಕ್ಕೆ 'ಕರಿ' ಕುಳಿತುಕೊ ಎಂದರೆ ಖೂಡು. 'ಕಂಡ' ಎಂದರೆ ಎತ್ತುಗಳ ಕೊರಳ ಹಗ್ಗ. ಮೈದಾನಕ ಹೋಗಿ ಬರುತ್ತೇನೆಂಬುದಕ್ಕೆ ಕಕ್ಕಸಕ್ಕೆ ಹೋಗಿ ಬರುತ್ತೇನೆ ಎಂದಂತೆ. 'ಹೊರ್ಕಡಿ' ಹತ್ಯಾದ ಎಂದರೆ ಅತಿಸಾರ. ಭೇಗಿ ಭೇಗಿ, ಗಪ್ಗಪ್, 'ಖನಾನನ ಒಡು', ಗಪ್ಂತ, ಭಡಭಡ ಇವೆಲ್ಲ ತೀವ್ರಾರ್ಥವನ್ನು ತಿಳಿಸುವ ಅವ್ಯಯಗಳು. 'ಅಂವ'(ಅವ), 'ಇಂವ'(ಇವನು), 'ಮಾಂವ'(ಮಾವ), 'ಕಿಂವಿ'(ಕಿವಿ), 'ಕಿವುಂಡ್ '(ಕಿವುಡ) ಇಲ್ಲೆಲ್ಲ ಕೇಶಿರಾಜನು ಹೇಳಿದಂತೆ ವಕಾರವು ಅನುನಾಸಿಕವಾಗಿ ಉಚ್ಚಾರವಾಗುತ್ತದೆ.

'ಅವು ಮನ್ಯಾಗ ಸಮೇತ ಕನಡನೇ ಮಾತಾಡತಾವ್ '

'ಮದಿ ಮ್ಹೈನಾ-ದೋನ್ ಮ್ಹೈನಾದಾಗ ಠರಾಸಬೇಕ್ರಿ'

'ನಮ್ಮೂರಾಗಿನ ತೋಲ್ ಪಾರ್ಗುಳ ದೋಸ್ತುರ ಅವಾ'

'ಅಲ್ಲಿ ಹೋಗಾದ ಜರೂರಿ ಅದಾ'

'ಹರ್ ಬಾರ್ ರೊಕ್ಕಾನೇ ಕೇಳ್ತಾನ'

'ಅಂವ ಧಿನ್ನಾ ಸಾಳಿಗಿ ಹೊಯ್ತಾನ'

'ನಿಚ್ಚಾ ಕಕಿನೇ ಬರ್ತಾಳ'

'ನಮ್ ಶಾಕಗ್ ಶಂಬರೆಕ್ಕರ ಜಮಿನ್ ಅದಾ'

'ಜರ ಬಗ್ಗಡ ಮಾತಾಡ್ತಾವ'

'ಅವನಪ್ಪೆ ಸೆಂಬರ್ ವರ್ಷ ಯಾರ್ ಬದಕ್ತಾರ?

(ಪಚ್ಚಿಸ್, ಬತ್ತಿಸ್, ಛತ್ತಿಸ್, ಛಪ್ಪನ್ , ಬಾಹತ್ತರ - ಸಂಖ್ಯಾ ಸೂಚಕವಾದ ಈ ಶಬ್ದಗಳು ಬಹುಕಾಲದ ಹಿಂದಿನಿಂದ ಕನ್ನಡ ಗ್ರಂಥಗಳಲ್ಲಿಯೂ ಶಾಸನಗಳಲ್ಲಿಯೂ ಸೇರಿಕೊಂಡಿವೆ)

'ಯಾಡ್ ಧಿನಾ ಆಯಿತು'

'ನಂಬಲ್ಲಿ ಒಂದು ಪೈಸಾ ಇಲ್ಲ, ನಾನೆ ಬ್ಯಾಜಿಲಿ ತಂದಿದಾ'

'ಇದು ಪುಸ್ತಕ್ ಅಪ್ನಿಗಿ ಕುಡು'

'ನೀ ಬಃಕ್ಕಳ ಧಂದ್ಯ ಮಾಡಿದಿ ತಕೊ'

'ಗಿಡದ ಮ್ಯಾಕ ಪೋರಿಗುಳ್ ಏಭ್ಯಾಡದು'

'ನಾ ಭವುತೇಕ ಮಾಡಿ ನಾಳಿಗಿ ಬರ್ತಾ'

'ನಿನ್ನೆ ಹೊಯ್ತಿದ ಪನ್ ನಮ್‌ವೈನಿ ಭ್ಯಾಡ ಅಂದುಳ್ '

'ಪಾರ್ ಮಾಡಿಂದ ಹೊಲ ಅಲ್ಲ ಪೋರಿ ಮಾಡಿಂದು ಮನಿಯಲ್ಲ(ಗಾದೆ).

ಧಂದ್ಯನೇ ಮಾಡಾಲ ಮನಾರ ಫುಸ್ಮೂರ ಹನಾ.

'ಒಂದು ಪದಾ ಹಾಡು' ಬೇಜಾರಾಗ್ಯಾದ'

'ನನ್ಹ್ಯಾಂಡ್ತಿ ಅಜೀಬಾತ್ ನನ್ಮುಂದ ಒಂದ್ಮಾತಾಡಾಲ'

'ಬಿಲ್ಕುಲ್ ಗಲ್ತಿ ಔಂದೇ ಅದಾ'

'ಯಾನ್ ಅಡಿ ಹೊಂಬ್ ಇದ್ಯೋ',

'ಛಂದ್ ಭಂಗಾ ತಿಗುದು ಹಿಕ್ಕೊಂಡಾಳಯಾನು'

'ರುಷ್ಯೆ ನಗ್ದಿ ಅವಾ ಧಂದ್ಯಾಕ ಬರ್ತೇನ್ '

'ಅಕಿ ಖೊಲ್ಯಾಗಿನ ನೋಡ್ತಾಳ ಅಂವ ಕುಂಬ್ಯಾದ ಮ್ಯಾಲ ಖೂಡ್ತಾನ.

'ಹೊಟ್ಟಿ ಥುಂಬ್ಯಾದ ಥ್ಯಾಡೆ ನೀಡ್ರಿ'

'ಆಕಿ ಅಳೂ ಅಳೂ ಅತ್ತುಳ್ '

'ಧೂರ್ ಪೋಳಿನಾಚ್ಯಾಕ ಭೀಟು'

'ಬಾಜಾರ್‍ಕ್ ಹೋಗಿ ಪೋರಿಗಿ ಫಡಕಿ ತರಾದ್ ಅದಾ

'ಮಸ್ಕಿನಾಗ ಗಜರದಮ್ ಬರ್ತಾ'

ಅವ್ನಬಲ್ಲಿ ರೊಕ್ಕಾನೇ ಇಲ್ಲ.

'ಒಂದು ಪಂಚರ ಯಣ್ಣಿ ಬೇಕು ಪೋಣ್ಗೆ ಹುಡಿಲಾಕೆ'

'ಊರಿಗಿ ಹೋಗಾಣಾಕಿ ರೊಕ್ಕಾ ಇಸ್ಕೊತಾ, ಇಸ್ಕೊಮಾಣಕೀ ಬರ್ತಾ'

(ಉರ್ದುವಿನ ಕೆ-ಕಿ ಮಾರ್ಪಾಟು ವಾಕ್ಯರಚನೆಯಲ್ಲಿ ಬರ್ತವೆ.)

'ಹಾಂವ್ ಇಲ್ಚಪ್ ನುಂಗ್ಯಾದ' 'ಬಂದ್ಯಾಗ ಖುಂತದ'

'ಸುಮ್ ಒದ್ಕೋತ ಖೂಡು ಅವ್ನ ಹತ್ಯಾಕ ಹೋಗಭ್ಯಾಡ

'ಮಣಕ' ತಾಯಪ್ಲೆನೇ ಅದಾನೋಡು'

'ನಾನಾರಾ ಬರಲ್ಲ'

'ಘದ್ದರ್ಸಲತದ ಮಳಿ ಬರ್ತಾದೋ ಯಾನೊ'

ಅಂವ ಬರಟಕೆ ಧಂದ್ಯ ಮುಗಿದಿತ್ತು.

'ಮನ್ಸ್ಯಾ ತೋಲ್ ಬೇಮಾರ ಹನ' 'ಅಜಾರಿ''ಹನಾ'(ಪಾರಸಿ ಶಬ್ದಗಳು).

'ಆಗೆ ನಳ ಬಂದಾಯ್ತು. ಎಂದರೆ ಕನ್ನಡ 'ಬಂದು ಆಯಿತು' ಅಲ್ಲ. ಉರ್ದುವಿನ 'ಬಂದ್ ' ಇಲ್ಲಿ 'ನಳ' ಕನ್ನಡವಲ್ಲ. ಸಂಸ್ಕೃತದ ಅದ್ಭುತಗಳು. ಅದು ನಳವಾದರೇನು, ನಲ್ಲಿಯಾದರೇನು? ಕೊಳಾಯಿ, ಕನ್ನಡದ ಮಾತು.

ಬಸವ ಕಲ್ಯಾಣದವರೊಬ್ಬರು ತಮ್ಮ ಮಾತಿನಲ್ಲಿ ಈ ರೀತಿ ಕಥೆ ಹೇಳಿದರು.

'ಒಂದ್ಸಣ್ಣೂರಿತ್ರಪಾ, ಅಲೊಬ್ಬುರುಬುರಾಂವಿದ್ದ. ಔನಿಗಿ ಐದ್ ಮಂದಿ ಮಕ್ಕುಳ್. ಅವ್ರು ಧಂದ್ಯಾನೆ ಮಾಡ್ತಿದಿಲ್ಲs ಭೊಕ್ಷಿ ಮಾಡ್ತಿದ್ದಿಲ. ಊರಾಗ, ತಿಂದು ತಿರ್ಗಾಡ್ತಿರು. ತಂದಿ ಒಬ್ಬಾವನೆ ಘುಳಸ್ತಿದ. ಒಂಧಿನ ಅವ್ರಿಗಿ ಕುರಿಗುಳ್ ಮೇಸ್ಲಾಕ ಖಳಸ್ದಾ. ಕುರಿಮೇಸಲಾಕ್ ಕುರಿ ತಕೊಂಡು ಹೋದುರ್ ಮೇಸ್ಕೋತ್ ಮೇಸ್ಕೋತ ನಡದುರ್ ಮುಂದ್ -ಮುಂದ ಹೋಗಿನ್ಮ್ಯಾಲ ಒಂದು ಹೊಲ ಸಿಕ್ತು. ಅದರಾಗ ಅಗ್ಸಿ ಬಿತ್ತಿರು. ಮುಗುಲಪ್ಲೆ ಇತ್ತು. ಹಳ್ಳ ಹರ್ಕೊಂಡು ಹೋಗ್ತದ. ಮುಂದ ಹ್ಯಾಂಗ ದಾಟಬೇಕಪಾಂತ ಚಿಂತಿಯಾಯಿತು.

ಒಬ್ಬುರ ಟೊಂಕಕ್ಕೊಬ್ಬರ ಹಿಡಿಕ್ಕೊಂಡು ನಡದೆನಡದುರ್. ಕುರಿಗುಳ್ ನೆಪ್ಪೋಯ್ತು. ಹೊಲ್ದಾಗ ರಾಜಾನ ಸವಾರಿ ಹೊಂಟಿತ್ತು. ಆನಿಮ್ಯಾಲ ಅಂಬಾರಿಮ್ಯಾಲ ಖುಂತಿದ. ಭಾಲ್ದಾರ್ ಚೋಬ್ದಾರ್ ಸಿಪಾಯಿ ಮಂದಿ ಸಿಂಫು ಭಾರಿಸ್‌ತಿದ್ದುರು. ಹೀಂಗ್ ಸವಾರಿ ಹೊಂಟಿತ್ತು. ಐರೆಗಮ್ಮತ್ ಅನುಸ್ತು. ಒಬ್

'ಆಕಿ ಅಳೂ ಅಳೂ ಅತ್ತುಳ್ '

'ಧೂರ್ ಪೋಳಿನಾಚ್ಯಾಕ ಭೀಟು'

'ಬಾಜಾರ್ಕ್ ಹೋಗಿ ಪೋರಿಗಿ ಫಡಕಿ ತರಾದ್ ಅದಾ

'ಮಸ್ಕಿನಾಗ ಗಜರದಮ್ ಬರ್ತಾ'

ಅವ್ನಬಲ್ಲಿ ರೊಕ್ಕಾನೇ ಇಲ್ಲ.

'ಒಂದು ಪಂಚರ ಯಣ್ಣಿ ಬೇಕು ಪೋಣ್ಗಿ ಹುಡಿಲಾಕೆ'

'ಊರಿಗಿ ಹೋಗಾಣಾಕಿ ರೊಕ್ಕಾ ಇಸ್ಕೊತಾ, ಇಸ್ಕೊಮಾಣಕೀ ಬರ್ತಾ'

(ಉರ್ದುವಿನ ಕೆ-ಕಿ ಮಾರ್ಪಾಟು ವಾಕ್ಯರಚನೆಯಲ್ಲಿ ಬರ್ತವೆ.)

'ಹಾಂವ್ ಇಲ್ಚಪ್ ನುಂಗ್ಯಾದ' 'ಬಂದ್ಯಾಗ ಖುಂತದ'

'ಸುಮ್ ಓದ್ಕೋತ ಖೂಡು ಅವ್ನ ಹತ್ಯಾಕ ಹೋಗಭ್ಯಾಡ

'ಮಣಕ' ತಾಯಪ್ಲೆನೇ ಅದಾನೋಡು'

'ನಾನಾರಾ ಬರಲ್ಲ'

'ಘದ್ದಸ್ಗಲತದ ಮಳಿ ಬರ್ತಾದೋ ಯಾನೊ'

ಅಂವ ಬರಟಕೆ ಧಂದ್ಯ ಮುಗಿದಿತ್ತು.

'ಮನ್ಸ್ಯಾ ತೋಲ್ ಬೇಮಾರ ಹನ' 'ಅಜಾರಿ''ಹನಾ'(ಪಾರಸಿ ಶಬ್ದಗಳು).

'ಆಗೆ ನಳ ಬಂದಾಯ್ತು. ಎಂದರೆ ಕನ್ನಡ 'ಬಂದು ಆಯಿತು' ಅಲ್ಲ. ಉರ್ದುವಿನ 'ಬಂದ್ ' ಇಲ್ಲಿ 'ನಳ' ಕನ್ನಡವಲ್ಲ. ಸಂಸ್ಕೃತದ ಅದ್ಭುತಗಳು. ಅದು ನಳವಾದರೇನು, ನಲ್ಲಿಯಾದರೇನು? ಕೊಳಾಯಿ, ಕನ್ನಡದ ಮಾತು.

ಬಸವ ಕಲ್ಯಾಣದವರೊಬ್ಬರು ತಮ್ಮ ಮಾತಿನಲ್ಲಿ ಈ ರೀತಿ ಕಥೆ ಹೇಳಿದರು.

'ಒಂದ್ಸಣ್ಣೂರಿತ್ರಪಾ, ಅಲೊಬ್ಬುರುಬುರಾಂವಿದ್ದ. ಔನಿಗಿ ಐದ್ ಮಂದಿ ಮಕ್ಕುಳ್. ಅವ್ರು ಧಂದ್ಯಾನೆ ಮಾಡ್ತಿದಿಲ್ಲs ಭೊಕ್ಷಿ ಮಾಡ್ತಿದ್ದಿಲ. ಊರಾಗ, ತಿಂದು ತಿರ್ಗಾಡ್ತಿರು. ತಂದಿ ಒಬ್ಬಾವನೆ ಘಳಸ್ತಿದ. ಒಂಧಿನ ಅವ್ರಿಗಿ ಕುರಿಗುಳ್ ಮೇಸ್ಲಾಕ ಖಳಸ್ದಾ. ಕುರಿಮೇಸಲಾಕ್ ಕುರಿ ತಕೊಂಡು ಹೋದುರ್ ಮೇಸ್ಕೋತ್ ಮೇಸ್ಕೋತ ನಡದುರ್ ಮುಂದ್ -ಮುಂದ ಹೋಗಿನ್ಯಾಲ ಒಂದು ಹೊಲ ಸಿಕ್ತು. ಅದರಾಗ ಅಗ್ಸಿ ಬಿತ್ತಿರು. ಮುಗುಲಪ್ಲೆ ಇತ್ತು. ಹಳ್ಳ ಹರ್ಕೊಂಡು ಹೋಗ್ತದ. ಮುಂದ ಹ್ಯಾಂಗ ದಾಟಬೇಕಪಾಂತ ಚಿಂತಿಯಾಯಿತು.

ಒಬ್ಬುರ ಟೊಂಕಕ್ಕೊಬ್ಬರ ಹಿಡಿಕ್ಕೊಂಡು ನಡದೆನಡದುರ್. ಕುರಿಗುಳ್ ನೆಪ್ಹೋಯ್ತು. ಹೊಲ್ದಾಗ ರಾಜಾನ ಸವಾರಿ ಹೊಂಟಿತ್ತು. ಆನಿಮ್ಯಾಲ ಅಂಬಾರಿಮ್ಯಾಲ ಖುಂತಿದ. ಭಾಲ್ದಾರ್ ಚೋಬ್ದಾರ್ ಸಿಪಾಯಿ ಮಂದಿ ಸಿಂಫು ಭಾರಿಸ್‌ತಿದ್ದುರು. ಹೀಂಗ್ ಸವಾರಿ ಹೊಂಟಿತ್ತು. ಐರೆಗಮ್ಮತ್ ಅನುಸ್ತು. ಒಬ್

ಹೊಕ್ಕಾಸಿ ಮಾಹುತ್ನ ಇದೇನಪಾಂತ ಕೇಳ್ದ. ಅಂವ ತುರುಕ. ಇವ್ರು ಕೇಳಿಂದ ತಿಳ್ಯಾಲ್ದೆ 'ಕ್ಯಾಪೂಚ್ಯಾತ್ಹೈ' ಅಂದ. ಅದುರ ಹೆಸುರ 'ಕ್ಯಾಪೂಚ್ಯಾತ್ಹೈ' ಅಂತ ತಿಳ್ಕೊಂಡುರು. ಒಬ್ಬರಗುಡಾ ಒಬ್ಬುರು ಮತಾಡ್ಕೋತ ಹೊಂಟುರ್. ಮಲ್ಲು ಸಣ್ಣ ಮರಿ ಕಂಟಿ ಒಳಗಿಂದ ಹೊರಗ ಬಂತು. ಇದೆನೊ ಕ್ಯಾಪೂಚ್ಯಾತ್ಹೈನ ಮರಿ ಅದಾಯಾನೊ ಅಂತ ಇದಕ ಹಿಡ್ರಿ ಅಂತ ಅದರ ಬೆನ್ನತ್ತಿ ಓಲ್ಯಾತೂರು. ಖಬ್ಬಿನ ಮಳದಾಗ ಝೂಡಿ ಕಟ್ಲತೀರು. ಅವ್ರಿಗಿ ಇಕಡಿ ಕ್ಯಾಪೂಚ್ಯಾತ್ಹೈನ ಮರಿ ಬಂತ್ಯಾನು. ಅಂದುರ ಆ ಮಾಲಕ ತಿಳಗೇಡಿ ಅವಾ ಅಂತ ತಿಳ್ಕೊಂಡು ಹೂ ಬಂದು ಖಬ್ಬಿನ ಸೂಡಿನಾಗ ಖಿಂತದ ಇದು ಥುಂಬ್ಕೊಂಡು ಮನಿಗಿ ಹೋಗಿ ನಮ್ಮವ್ವ ಭೀಟ ಅಂತ ಹೇಳಿಂದು ಜಾಗದಾಗ ಭೀಟ್ರಿ ಅಂದ. ಗಾಡಿ ಚಾಕಿಗಿ ಎಣ್ಣೆ ಹಚ್ಚಿಲ ಆ ಚಾಗ್ಗುಳು ಹಾದ್ಯಾಗ ಕೊರ್ ಕೊರ್ ಮಾಡ್ತಿದ್ದು. ದೆವ್ವ ಬಂದುದ ಅನಸ್ತು ಬಡ್ಗಿ ತೊಕೊಂಡು ಗಾಡಿಗೆ ಬಡಿಬಡಿ ಬಡ್ದುರು. ಗಾಡಿಯಲ್ಲ ಮುರ್ದ್ಹೋೀತು. ಖಬ್ಬಿನ ಹೊರಿ ತಲಿಮ್ಯಾಲ ಹೊತ್ಕೊಂಡು ಕಸಿ ಹೋದುರು ಆಯಿ ಖೆಮಕೊತ್ ಖಿಂತಿಳು ಎಲ್ ಭೀಟ್ಯೇಕಂತ ಕೇಳ್ದುರು. ಆಯಿಗಿ ಸಿಟ್ ಬಂದಿತ್ತು. ನನ್ ಡೊಂಪುರ್ ಮ್ಯಾಲ ಭೀಟು ಅಂದುಳು ಆಯಿ ಸತ್ತುಳು ಹಿಂದಿದ ಮಾಲಕ ಮನಿಗಿ ಬಂದ ಖಬ್ಬು ಎಲ್ಲಿ ಭೀಟರಿ ಅಂತ ಕೇಳ್ದ ಆಯಿ ಎಲ್ ಭೀಟಂದುಳು ಅಲ್ಲೆ ಭೀಟದೇವು ಅಂದು. ಬ್ಯೆದು ಆಡಿ ಅತ್ತು ಕರ್ದು ಹಳದಾಗ ಹೋಗಿ ಕುಣಿ ಖೆದರಿ ಹೂಳಿ ಬರ್ರಿ ಅಂದುನ ಅವು ಹಾಂಗೆ ಮಾಡ್ದು.

ಹೀಗೆಯೆ ಕಥೆ ಮುಂದಕ್ಕೆ ಸಾಗುತ್ತದೆ. ಇಲ್ಲಿ ಉಚ್ಚಾರಣೆಯ ವೈಚಿತ್ರ್ಯವೇನೆಂದರೆ ಕಥೆ ಹೇಳುವವರ ಬಾಯಿಂದ ಮಾತುಗಳು ಹೊರಟಾಗ ಗೋಚರವಾಗುತ್ತದೆ. ಇದರಲ್ಲಿ ಕೆಲವು ವಿಚಿತ್ರವಾದ ರೂಪಗಳುಂಟು. ಅವುಗಳನ್ನು ತೀವ್ರ ಗಮನಿಸಬೇಕು. ಕಥೆಯ ಉಪಕ್ರಮ, ಉಪಸಂಹಾರ ಅಚ್ಚುಕಟ್ಟಾಗಿದೆ. ಕುತುಹಲಜನಕವಾಗಿದೆ. ಇಲ್ಲಿ ಕೆಲವು ಉರ್ದು, ಒಂದೆರಡು ಮರಾಠಿ ಶಬ್ದಗಳು ಹೊರತು ಎಲ್ಲ ಕನ್ನಡದ ಶಬ್ದಗಳಾಗಿವೆ. ಉಚ್ಚಾರಣೆಯಲ್ಲಿ ರೂಪವ್ಯತ್ಯಾಸವಾಗಿದೆಯಷ್ಟೆ.

ನೆಪ್ವು, ಝೂಡಿ, ನಿಂಬಲ್ಲಿ, ಹಾಂಗಾರ, ಹೊಕ್ಕಾಸಿ, ಚಾಕು, ಬುಡ್ಕ, ಭೀಟು -ಇವುಗಳು ಕ್ರಮವಾಗಿ ನೆನಪು, ಸೂಡು, ನಿಮ್ಮ ಬದಿಯಲಿ, ಹಾಗಾದರೆ, ಹೋಗಿ ಹೀಗೆ(ಹೀಗೆ ಹೋಗಿ) ಚಕ್ರ, ಬುಡಕ್ಕೆ ಬಿಸಾಡು ಇವುಗಳ ರೂಪಾಂತರಗಳು. ಧಮ್ಮಾ ಎಂದರೆ ದಪ್ಪ ಎಂದು.

ಬಾಲ್ದಾರ್, ಚೋಬ್ದಾರ್, ಅಂಬಾರಿ, ಸಿಪಾಯಿ -ಇವು ಹಿಂದುಸ್ಥಾನಿಯಿಂದ ಬಂದ ಶಬ್ದಗಳು. ಸಿಂಘ -ಎಂಬುದು ಶೃಂಗದ ತದ್ಭವ, ಕೊಂಬು ಎಂದು ಅರ್ಥ. ಸಿಂಘ ಭಾರಿಸ್ತಿರು ಎಂದರೆ ಕೊಂಬು ಊದುತ್ತಿದ್ದರು ಎಂದರ್ಥ. ಅದು ಈಗ ಸಿಂದ್-ಸಿಂದೆ ಆಗಿದೆ.

ಒಬ್ಬರಗೂಡೊಬ್ಬರು -ಒಬ್ಬರ ಸಂಗಡ ಒಬ್ಬರು ಎಂದು. ಕೆಳಗೆ ಎಂಬುದರ ಬದಲಾಗಿ ತೆಳಗ ಎಂಬುದು ಈ ಭಾಗದ ಪ್ರಯೋಗವಿದೆ. ಕಬ್ಬು ಎಂಬುದನ್ನು ಮಹಾಪ್ರಾಣ ಮಾಡಿಕೊಂಡು ಖಬ್ಬು

ಎಂದು ಉಚ್ಛರಿಸುವಲ್ಲಿ ಕನ್ನಡದ ಅಲ್ಪಪ್ರಾಣಗಳನ್ನು ಮಹಾಪ್ರಾಣಗಳನ್ನಾಗಿ ಉಚ್ಚರಿಸುವ ಹಳ್ಳಿಯ ರೀತಿಯನ್ನು ವ್ಯಕ್ತಮಾಡುತ್ತದೆ. ಕಾಳುಗಳು ಎಂಬುದರ ಬದಲಾಗಿ ಅನಾಜು ಉರ್ದುಶಬ್ದ. ಕಳುಹಿ ಬಂದರೆಂಬುದು 'ಖಳ್ಸ್ ಬಂದುರ್' ತೋಟವನ್ನು ಈ ಕಡೆ 'ಮಳ' ಎಂದು ಕರೆಯುವುದುಂಟು ಉರ್ದುವಿನ 'ಮಲ್ಲಾ' ಎಂಬುದರ ರೂಪ.

ಇದಕ್ಕೂ ಮೊದಲು ಏನೆಂದರು? ಎಂಬುವುದು ಇದಕಾ ಪೈಲೆ ಯಾನಂದರು? ಪೈಲೆ<ಪಹಲೆ ಎಂದು ಉರ್ದುವಿನ ಶಬ್ದ. ಹತ್ತಿರ ಎನ್ನುವುದು ಸನಿ, ಬಲ್ಲಿ ಬದಿಲಿ ಎಂದು ರೂಪಾಂತರ ಪಡೆಯುತ್ತವೆ. ಜಡ ಎಂಬುವುದು ಕಷ್ಟ ಎಂಬುದರ ಬದಲಾಗಿ ಉಪಯೋಗವಾಗುವ ಶಬ್ದ. 'ಧಂದ್ಯಾ ಛಂದ ಮಾಡ್ತಾರ' 'ಪೋರಿ ಗುಣ ಹಳ' ಇಲ್ಲಿ ಗುಣ ಎಂದರೆ ಚೆನ್ನಾಗಿದೆ ಎಂಬುವುದರ ಅರ್ಥ.

ಈ ಕಡೆಯ ಕೆಲವು ಗಾದೆಗಳು ಹೀಗಿವೆ.

"ಕುರಿತಿಂಬಾಕಿ ಹೋದುರ ಕ್ವಾಣ ಲೆಂಬಾಕಿ ಬಂದುಳಂತ'

"ಮನಿಗಿ ಮಜ್ಜಿಗಿ ಬಂದುರ ಮನಿಸಾರ್ಸಿ ಹೋಗಂದಿರಂತ.

"ಬಗ್ಸಿ ಭಾವುನ ಕಡಿ ಹೋದುರ ಖಿಸಗಾಲ ಮಗಾ ಹುಟ್ಟಿತಂತ.

'ಅತ್ತಿ ಸತ್ ಆರ್ ತಿಂಗುಳಿಗಿ ನತ್ತಿ ಬಡ್ಕೊಂಡು ಅತ್ತಿಳಂತ'

ಆರ್ ಹಡ್ದಾಕಿನ ಮುಂದ ಮೂರ್ ಹಡ್ದಾಕಿ ಟೆಣಕೀಳಂತ'

ಇವುಗಳು ಇನ್ನೂ ಬಹಳ ಇವೆ. ಅನುಬಂಧದಲ್ಲಿ ನೋಡಬಹುದು.

ಬೀದರ ಪದಗಳು ರೂಪದಲ್ಲಿ ವ್ಯತ್ಯಾಸ ಹೊಂದಿ ಪ್ರಯೋಗವಾಗುತ್ತಿರುವುದನ್ನು ನೋಡಬಹುದು. ಈ ಬದಲಾವಣೆ ಸೌಲಭ್ಯಾಕಾಂಕ್ಷೆಯಿಂದ ಎಂದು ಹೇಳಬಹುದು. ವಿಭಕ್ತಿ ಪ್ರತ್ಯಯಗಳು ಹಿಂದು ಮುಂದಾಗುತ್ತವೆ.

ಉದಾ

ರಾಮನು ಬಂದನು > ರಾಮ ಬಂದ

ಸೀತೆಯು ಬಂದಳು > ಸೀತಾ ಬಂದುಳ್

ರಾಮ ಸೀತೆಯನು > ರಾಮ ಸೀತಾಗ

ಮನೆಯಿಂದ... > ಮನಿಕಡಿಂದು, ಮನಿಲಿಂದು, ಮನಿಂದ

ಊರಿನಿಂದ > ಊರಿಂದು, ಊರಿಲಿಂದು

ಬೆಂಗಳೂರಿಗೆ > ಬೆಂಗಳೂರಕ

ರಾಮನದು > ರಾಮುಂದು

ಸೀತೆಯದು > ಸೀತಾಂದು
ಮನೆಯಲ್ಲಿ > ಮನ್ಯಾಗ, ಮನಿ ಒಳಗ
ಅಡವಿಯಲ್ಲಿ > ಅಡ್ಯಾಗ

ಹೀಗೆ ವಿಭಕ್ತಿ ಪ್ರತ್ಯಯಗಳು ಬಂದಿರುವಂತೆ ಕೆಲವು ವಿಭಕ್ತಿ ಪ್ರತ್ಯಯ ಬಂದು ವಿಭಕ್ತಿ ಪಲ್ಲಟವೂ ಆಗುವವುದಲ್ಲದೆ ಅನ್ಯಪ್ರತ್ಯಯಗಳು ಸ್ವಾಭಾವಿಕ ಎಂಬಂತೆ ಬರುವುವು. ಅಲ್ಲದೆ ಈ ಭಾಗದಲ್ಲಿ ಅಪ್ಲೆ, ಆಕ್, ಕಸಿ, ಅಸು ಇತ್ಯಾದಿ ಕೆಲವು ಅನ್ಯ ಪ್ರತ್ಯಯಗಳು ಇಲ್ಲಿನ ಕನ್ನಡ ಪದಗಳ ಮೇಲೆ ಕೃತ್ ಪ್ರತ್ಯಯ, ಕಾಲಸೂಚಕ ಇತ್ಯಾದಿ ತಗಲುತ್ತವೆ.

ರಾಮನಂತೆ > ರಾಮನಪ್ಲೆ
ಬೀಮನಂತೆ > ಭೀಮನಪ್ಲೆ
ಮಾಡಲು > ಮಾಡಲಾಕ್
ಓದಲು > ಓದಲಾಕ್
ಹೋದಮೇಲೆ > ಹೋಗಿನ್ಮಾಲ್ಕ್, ಹೋದ್ಮ್ಯಾಲ್
ಹೋಗಿ ಬರುತ್ತೇನೆ > ಹೊಕ್ಕಸಿ ಬರ್ತಾ
ಒಂದು ದಿವಸ ಇದ್ದು > ಒಂದಿವಸ ಇದ್ಕಸಿ ಬರ್ತಾ

ಈ `ಕಸಿ' ಮರಾಠಿಯರು ಕನ್ನಡ ಮಾತನಾಡುವಾಗ ಒಳ ಒಳಗೆ ಬಳಸುತ್ತಲೇ ಇರುತ್ತಾರೆ. ಕಸಿ, ಕಸ ಎಂಬುವುದರ ರೂಪಾಂತರ 'ಕಸ' ಎಂದರೆ ಮರಾಠಿಯಲ್ಲಿ ಹೇಗೆ ಹಾಗೆ ಎಂದರ್ಥ ಉಂಟು.

"ನಾ ಬಿದರ್ಕ ಹೊಕ್ಕಾಸಿ, ಆಟೊ ಮಾಡ್ಕಸಿ, ಬಟ್ಟೆ ದುಕಾನ್ಕ ಹೊಕ್ಕಾಸಿ, ಎಡ್ಡು ಪೈಂಟ್ ತೊಕೊಂಡ್ಕಸಿ, ಆಟೊ ಮಾಡ್ಕಸಿ ಬಸ್ಸಿನ್ವಾಗ ಬಂದಾ"

(ನಾನು ಬೀದರಿಗೆ ಹೋಗಿ ಆಟೊ ಮಾಡಿ, ಬಟ್ಟೆ ಅಂಗಡಿಗೆ ಹೋಗಿ, ಎರಡು ಪ್ಯಾಂಟ್‌ಗಳು ತೆಗೆದುಕೊಂಡು ಪುನಃ ಅಟೊ ಮಾಡಿ ಬಸ್ಸಿನಿಂದ ಬಂದೆ)

'ಇಸು' ಪ್ರತ್ಯಯ ಈ ಕೆಳಗಿನಂತೆ ಬಳಕೆಯಾಗುತ್ತದೆ.

ಮಾಡಿಸು > ಮಾಡಸ್, ಮಾಡುಸ್
ಕೂಡಿಸು > ಕೂಡಸ್, ಖೂಡುಸ್
ತಿನ್ನಿಸು > ತಿನಸ್, ತಿನುಸ ಮತ್ತು

ಮಾಡುವುದಕ್ಕೆ > ಮಾಡಲಾಕ್
ಕೂಡುವುದಕ್ಕೆ > ಖೂಡಲಾಕ್
ತಿನ್ನುವುದಕ್ಕೆ > ತಿನ್ಲಾಕ್ >ತಿಲ್ಲಾಕ್

ಮಾಡು+ಅದಕ್ಕೆ ಉ+ಅ-ವ ಪದ ಮಧ್ಯದ ಉಕಾರ ಲೋಪವಾಗಿ, ಅದಕ್ಕೆ> ಲಾಕ್ ಎಂದಾಗಿದೆ.

ತಿನ್ನುವುದಕ್ಕೆ > ತಿನ್ನಾಕ್, ತಿಲ್ನಾಕ್. ಇದರಲ್ಲಿ 'ಉ'ಕಾರ ಲೋಪವಾಗುವುದಲ್ಲದೆ 'ನ' ಕಾರವು ಲೋಪವಾಗಿರುವುದು ಗಮನಿಸಬೇಕು. ಹೀಗೆ ಈ ಕಡೆಯ ಭಾಷೆಯಲ್ಲಿ 'ವ' ಕಾರಾದೇಶ ಬರುವದು ಸ್ವಾಭಾವಿಕ ಅದೂ ಮರೆಯಾಗಿ 'ಅದಕ್ಕೆ' ಸ್ಥಾನದಲ್ಲಿ 'ಲಾಕ್' ಎಂಬ ಪದ ಸ್ವಾಭಾವಿಕ ಎಂಬಂತೆ ಬರುತ್ತದೆ.

ವಣಾ, ಅನಗಾಡ್, ಅಗಾಳೆ, ಆಪಕ್ಷಿ, ತಟಕು, ತುಕುಡಿ, ಟುಕಡಿ, ಹಿಂಬರ್ಕಿ, ನಿಂದರ್ಕಿ, ಹಾನ, ಹನಾ, ಹಿಂಬ್ಳಿ ಹೊಯಿಂದು, ಭೇಗಿ, ಈ ಪದಗಳು ಇಲ್ಲಿನ ಆಡುಮಾತುಗಳಲ್ಲಿ ಸಹಜ. ಇಲ್ಲಿಯ ಸಮಯ ಮತ್ತು ಸ್ಥಳ ಕುರಿತು ಕೆಲವು ಕನ್ನಡ ಪದಗಳು ಹೀಗಿವೆ.

ಹೊತ್ತರಳಿ, ಮುಂಜೇಳಿ, ಹೊತ್ಹೊಂಟು, ಸ್ನ್ಯಾರಿಯಾಳಿ, ಮದ್ಯಾಣ, ಮುರೆಸಂಜಿಲಿ, ಭಂಜಿಪರಿ, ದೋನ್ಪಾರಾತ್ರಿ, ಜಾವಾ, ದೋನ್ಪಾರ್ಕ್, ತೀನ್ ಪಾರ್ಕ್, ಮಸುಕು, ಕೆಂಪ ಹರಿಲಾಕ್, ಗಜರ್ ದಮ್, ಮೂಡಲ್ವಾಗ, ಕೋಳಿಕೂಗಲಾಕ, ಚುಟ್ಕಾಬಿಗ್ಯಾಟಗೆ. ಉಚ್ಚಿ ಹೊಯ್ಯಟಕೆ. ಇವು ಸಮಯದ ಹಂತಗಳು. ಜಗಲಿ, ಗೋರಜಗಲಿ, ಮಾಳ್ಗಿ, ಪುರಾಣ ಕಟ್ಟಿ ಮಾಡಾ, ಪಡಸಾಲಿ, ಪರಕಾನಿ, ಢೆಲಜಿ, ಮಹಾಡಿ, ದೇವರ್ಮನಿ, ಖೊಲ್ಲಿ, ಭೋಯರ್ (ಭೂಯರ್ ) ದೋ ಮಜಲಿ ಇವುಗಳು ಸ್ಥಳದ ಹೆಸರುಗಳಾಗಿವೆ.

ಈ ಮುಂತಾದ ಪದಗಳ ಬಗ್ಗೆ ಬೀದರ ಜಿಲ್ಲೆಯ ಭಾಷಾ ಚಿಂತಕರಾದ ಶ್ರೀ ಸುಬ್ಬಣ್ಣ ಅಂಬೆಸಂಗೆಯವರು ಗಮನಹರಿಸಿದ್ದಾರೆ. ಹೊತ್ತು ಎಂದರೆ ಸೂರ್ಯ, ಹೊಂಟು ಎಂದರೆ ಬಂದು, ಮೂಡಿ ಎಂದರ್ಥ. ಜಗ ಎಂದರೆ ಜಗತ್ತು.

ಕೂಡು(ಕುಳಿತುಕೊ), ಖೂಡು, ಹಾಲುಹಿಂಡು(ಹಾಲುಕರೆ), ಬರ್ತಾ(ಬರುತ್ತೇನೆ), ಉರಿಹೊಂಟಾವ (ಜ್ವರಬಂದಿವೆ) ಸರಿ ಹೋದ(ಸತ್ತು ಹೋದನು), ಕರೆ(ಕೂಗಿ ಕರೆ) ಹೋಗಿ ಬರ್ತಾ, ಜ್ವರ ಎನ್ನುವುದುಕ್ಕಿಂತ 'ಉರಿ' ಎನ್ನುವುದೇ ಸಮಂಜಸವೆಂದು ಶ್ರೀ ಸುಬ್ಬಣ್ಣ ಅಂಬೆಸಂಗೆ ಹೇಳುತ್ತಾರೆ.

**ಊಟ, ತಿಂಡಿಗಳು :** ಬಾನಾ, ಆಂಬೂರು, ಹೊಳ್ಗಿ, ಚಟ್ನಿ, ಅಂಬ್ಲಿ, ಸೆಂಡ್ಗಿ, ಹಿಟ್ಪಲ್ಯ, ಜ್ವಾಳದ ಬಾನ, ಹುಗ್ಗಿ ಹುಳ್ಪಲ್ಯ, ಮಜ್ಗಿ ಆಂಬೂರು, ಪಾಕು, ಧಪಾಟಿ, ಘುಗುರಿ, ಸುರ್ಕುಂಬ, ರೋಟ್, ಕರಜೆಕಾಯಿ, ಕೊಡ್ಬ್ಯಾಳಿ, ಘಾಗ್ರಿ, ಧೊಂಡೆ, ಹೂರುಣ, ಒತ್ ಹೋಳ್ಗಿ

**ಧಾನ್ಯಗಳ ಹೆಸರು** : ದೊಡ್ಡಜೋಳ, ಹಜ್ಜೋಳ, ಹೈಬ್ರಡ್ ಜೋಳ, ಕಾಯ್, ಖುಷ್ಪಿ, ಫುಂಡಿ, ಕಳವಿ, ಖಿಪ್ಲಿ, ಬರುಗು, ಉಲುಲಿ, ಬಟಾಣಿ

**ಕಾಯಿಗಳು :** ಸೊತೆಕಾಯಿ, ಗುಡ್ಮಿನ್ ಕಾಯಿ, ತುಪ್ಪುಧೀರೆಕಾಯ್, ಮಟಕಿನ್ ಕಾಯ್, ಚವಳಿಕಾಯಿ

ನೀರು ಕೊಂಡು ಬಾ ಎಂದರೆ ನೀರು ತೆಗೆದುಕೊಂಡೊ ಅಥವಾ ಖರಿದಿ ಮಾಡಿ ಬಾ ಅಂತಲ್ಲ, ನೀರು ಕುಡಿದು ಬಾ ಎಂದರ್ಥ. 'ಸೀತನಿ' ಎಂದರೆ ಸಿಹಿಯಾದ ತೆನೆ ಎಂದರ್ಥ ಜೋಳ ಹಸಿರಿರುವಾಗ ಅದನ್ನು ತೆಗೆದುಸುಟ್ಟು ಜೋಳ ಉದುರಿಸಿ ತಿನ್ನುತ್ತಾರೆ ಇದು ಬಹುಸಿಹಿ.

ಅವ್ವ-ಎವ್ವ, ಅಪ್ಪ-ಎಪ್ಪ, ಅಕ್ಕ-ಎಕ್ಕ, ಅಣ್ಣ-ಎಣ್ಣ, ಬಳಪ-ಬೊಳಪ, ಬಗ್ಗು-ಬಾಗು, ಮಮ್ಮಗ-ಮೊಮ್ಮಗ ಮಲಿ-ಮೊಲೆ

ಬೀದರ ಕನ್ನಡದಲ್ಲಿ ಬಿಂದು(ಂ) ವ್ಯಾಪಕರವಾಗಿ ಬಳಕೆಯಾಗುತ್ತದೆ. ಹಾಂಗ, ಹಾಂವ್, ಕಿಂವಿ, ಕೊಂದುಲ್, ಹಿಂಗ, ಹ್ಯಾಂಗ್, ಇಂವಾ, ಅಂವಾ, ಯಾಂವಾ, ಅವುಂದು, ಇವುಂದು, ಯಾವುಂದು, ಮಾಂವ, ಮಾಂಯಿನ್ ಕಾಯಿ, ಹುಂಚೆಕಾಯಿ, ಶಾವಂಗಿ, ನೆಂಪು, ಘೂಂಟ, ಬಾಂಯಿ, ಹೊಂಕ್ಕುಳ, ಗಂಡ್ಯಾ, ಕಿವುಂಚ್, ಪಾಂವ್, ಕಾಂವ್,

ಇಲ್ಲಿ ಅಲ್ಪ ಪ್ರಾಣದಷ್ಟೆ ಮಹಾಪ್ರಾಣವು ಬಳಕೆಯಾಗುತ್ತವೆ. ಘುಂಟ್ಯೆ, ಘುನ್ನು, ಛಂದ, ಛೊಲೊ, ಛಿನಾಲ್, ಝಗಡ, ಝೂಡಿ, ಠಕ್ಕ, ಠೀಕ್, ಥೆಮಗಿ, ಥುಂಬು, ಧಾರಾ, ಫಟಾಕ್ಕಿ, ಭಾಳ, ಭಿಕನಾಸಿ, ಇತ್ಯಾದಿ.

'ಶ' ಮತ್ತು 'ಷ' ಕಾರಗಳ ಸ್ಥಾನದಲ್ಲಿ 'ಸ'ಕಾರ ಉಚ್ಚಾರವಾಗುವುದು ನೋಡಬಹುದು. ಶಿವ-ಸಿವ, ಶೆನಿ-ಸೆನಿ, ಶುದ್ಧ-ಸುದ್ದ, ಶೋಭೆ-ಸೋಭೆ, ಶುಕ್ರವಾರ-ಸುಕ್ರಾರ್, ಶಿಕಾರ-ಸಿಕಾರ್, ಶುಂಠಿ-ಸುಂಟಿ, ಶೇಂಗಾ-ಸೇಂಗಾ, ಶೋಧ-ಸೋಧ, ಅಷ್ಟು-ಅಸ್ಟು, ಇಷ್ಟು-ಇಸ್ಟು, ಈ ಎಷ್ಟು-ಎಸ್ಟು, ಷಣ್ಮುಖ-ಸನ್ಮುಖ, ಈ ಮೇಲೆ ಬರುವ ಅಷ್ಟು, ಇಷ್ಟು, ಎಷ್ಟು ಎಂಬ ಪದಗಳು ವ್ಯತ್ಯಾಸಗೊಳ್ಳುತ್ತವೆ.

ಅಷ್ಟು>ಅಸ್ಟು, ಅಸು, ಆಟು

ಇಷ್ಟು> ಇಸ್ಟು, ಇಸ್ಸು, ಈಸು, ಈಟು

ಎಷ್ಟು > ಎಸ್ಟು, ಏಸು, ಏಟು, ಇತ್ಯಾದಿ

'ಹ'ಕಾರ ಲೋಪಕ್ಕೆ ಉದಾಹರಣೆ

ಮಹಿಮೆ-ಮಯಿಮೆ, ತಹಸೀಲು-ತಸಿಲು, ಮಹಾಶಯ-ಮಶಯ, ಮಹಾನಂದಾ-ಮಾನಂದಾ, ಮಹಿಮೆ-ಮ್ಯೆಮೆ, ಸಿಹಿ-ಸ್ಯೆ, ಸಹಿ-ಸಯ್ , ಕಹಿ-ಖ್ಯೆ, ಸಿಹಿತೆನೆ-ಸೀತನಿ, ವರಹ-ವರ, ವಹಿವಾಟ್ -ವ್ಯೆವಾಟ, ಸಹವಾಸ-ಸವಾಸ, ಸಹಾಯ-ಸಾಯ, ಸಾಹಾಸ-ಸಾಸ ಇತ್ಯಾದಿ

ಅವನು-ಅಂವಾ, ವೇಳೆ-ಯಾಳಿ, ಹಿಂದೆಬೀಳು-ಹಿಂಬ್ಳಿ, ಇದ್ದಾನೆ-ಹನಾ, ಮಲಗಿಕೊ-ಮೊಕೊ, ದ್ರವ್ಯ-ಧಿರ್ವ್ಯಾ, ಎರಡು-ಎಡ್ಡು, ನಾಲ್ಕು-ನಾಕು, ಹನ್ನೆರಡು-ಹನ್ನೆಡು, ಹದಿನಾಲ್ಕು-

ಹದಿನಾಕು, ಹೀಗೆಯೇ ಇಪ್ಪತ್ಯಾಡ್, ಇಪ್ಪತ್ ನಾಕು, ಮುವತ್ಯಾಡು, ಮುವತ್ ನಾಕು, ಒದರತಿಯೊ-ಒಳ್ತ್ಯೋ, ಪುಶ್ಕಳ-ಬಕ್ಕಳ(ಬಹಳ) ಇತ್ಯಾದಿ ಪದಗಳು ಓದುವುದಕ್ಕೂ ಬರೆಯುವುದಕ್ಕೂ ಕ್ಲಿಷ್ಟವೆನಿಸುತ್ತವೆ. ಹೀಗಿದ್ದರೂ ಉಚ್ಚಾರಣೆಯಲ್ಲಿ ಸ್ಪಷ್ಟತೆಯಿದೆ; ಮೂಲ ಅರ್ಥವಿದೆ ಎಂದು ಹೇಳಬಹುದು.

ವ್ಯಕ್ತಿಗಳ ಹೆಸರು ಸೇರದವರಿಗೆ ಕೀಳಾಗಿ ಕರೆಯುವ ಹೆಸರುಗಳು ಕೆಡಿಸಿ ಕರೆಯುವುದುಂಟು.

ಕಲ್ಯಾಣಿ>ಕಲ್ಯಾ, ಚಂದರಕಾಂತ್ >ಚಂದ್ರ್ಯಾ, ರಮೇಶ್ >ರಮ್ಯಾ, ರಾಮಣ್ಣ>ರಾಮ್ಯಾ, ವೀರಣ್ಣ>ಈರ್ಯಾ, ವಿಠ್ಠಲ್ >ಇಟ್ಲ್ಯಾ, ನರಸಪ್ಪಾ>ನರಸ್ಯಾ, ಪಾಂಡುರಂಗ>ಪಾಂಡ್ಯಾ ಇತ್ಯಾದಿಯಾದರೆ ಸ್ತ್ರೀಯರ ಹೆಸರುಗಳು ಕಲ್ಲಮ್ಮ>ಕಲ್ಲಿ, ಚಂದ್ರಮ್ಮಾ>ಚಂದ್ರಿ, ರತ್ನಮ್ಮ>ರತಿ, ಲಕ್ಷ್ಮಿ>ಲಕ್ಷಿ, ಸೀತಾ>ಸೀತಿ, ಶೋಭಾ>ಸೋಭಿ, ಗಂಗಮ್ಮ>ಗಂಗಿ.

ಪದಾದಿಯಲ್ಲಿ 'ಅ' ಮತ್ತು 'ಇ'ಕಾರಗಳು ಬಂದು ಶಬ್ದವಾಗುವಾಗ ಅಂತಹ ಕೆಲವು ಪದಗಳಿಗೆ ಕ್ರಮವಾಗಿ 'ಕ', 'ಕಿ'ಗಳು ಬರುತ್ತವೆ.

ಉದಾ. ಇತಕಡೆ>ಕಿತ್ತಕಡೆ, ಅತ್ತಕಡೆ>ಕತ್ತಕಡಿ, ಅದು>ಕದು, ಇದು>ಕಿದು, ಅವಾ-ಕವಾ, ಇವ-ಕಿವಾ, ಈ ಕಾರಕ್ಕೂ ಕೀಗ ಎಂದು 'ಆ'ಕಾರಕ್ಕೆ ಕಾಗ್ ಎಂದು 'ಹ'ಕಾರದ ಬದಲಿಗೆ 'ಖ'ಕಾರ ಬರುವುದುಂಟು. ಹೀಗೆಯೇ-ಹಿಂಗೆ, ಖಿಂಗ್, ಹಾಗೆ-ಹಾಗ, ಖಂಗ್, ಅಂತಹದು- ಹಂತದು, ಖಂತದು, ಇಂತಹದ್ದು-ಹಿಂತಾದು, ಖಿಂತಾದು, ಇತ್ಯಾದಿ.

ಬೆಂಗಳೂರಿನ 'ಕಣೊ', 'ಕಣೆ', ಕಣಪಾ ಎಂಬ ಪದಗಳು ಇಲ್ಲಿ 'ಗ' ರೂಪ ತಾಳುತ್ತದೆ. ಇದು ಮರಾಠಿಯಿಂದ ಬಂದಿದೆ. ಮರಾಠಿಗರು ಸ್ತ್ರೀಯರಿಗೆ ಕರೆಯುವಾಗ ಹೇಳುವಾಗ 'ಗ' ಅಕ್ಷರ ಹಚ್ಚಿಯೇ ಹೇಳುವುದು ವಾಡಿಕೆಯುಂಟು. ಪುರುಷರಿಗೆ ಇದು ಸಲ್ಲದು. ಆದರೆ ಕನ್ನಡದಲ್ಲಿ ಸ್ತ್ರೀ-ಪುರುಷರಿಗೂ 'ಗ'ಕಾರ ಹಚ್ಚಿ ಮಾತಾಡುವುದು ಈ ಕೆಳಗೆ ಕಾಣಬಹುದು.

ಮರಾಠಿ : ಅಗ ಆಯಿ ಏಗ(ಅಮ್ಮಾ ಬಾ)
ತಾಯಿ ಏಗ(ಅಕ್ಕ ಬಾರೆ)

ಬಾ-ಬಾಗ, ಹೋಗು-ಹೊಗ್ಗ, ಮಾಡು-ಮಾಡ್ಗ, ಹಾಡು-ಹಾಡ್ಗ, ಓದು-ಓದ್ಗ, ಈ 'ಗ'ಕಾರಗಳು ತನಗಿಂತ ಕಿರಿಯರಿಗೆ ಮಾತ್ರ ಹೇಳಬೇಕು ಹಿರಿಯರಿಗೆ ಹೇಳುವಂತಿಲ್ಲ. ಹೆಂಡತಿಯರಿಗೂ 'ಗ'ಕಾರ ಹಚ್ಚಿಯೇ ಮಾತನಾಡಬಹುದು. ರಾಯಚೂರು, ಹಾಗೂ ಬಳ್ಳಾರಿಯ 'ಲೆ' ಎನ್ನುವುದರ ರೂಪವಿದು.

ಶುದ್ಧಕನ್ನಡದ 'ಇದ'>'ಅದ' ಮತ್ತು ಆ್ಯದ

ಬಂದಿದೆ-ಬಂದದ, ಕುಳಿತಿದೆ-ಕುಂತಾದ, ಇಲ್ಲಿ 'ಳ'ಕಾರಕ್ಕೆ ಬದಲು ಬಿಂದು ಬಂದಿದೆ.

ಹೋಗಿದೆ-ಹೋಗ್ಯಾದ, ಮಾಡಿದೆ-ಮಾಡ್ಯಾದ, ಹಾಡಿದೆ-ಹಾಡ್ಯಾದ, ನಿಂತಿದೆ-ನಿಂತಾದ, ನಿಂತ್ಯಾದ, ಓಡಿದೆ-ಓಡ್ಯಾದ

ಸ್ತ್ರೀಯರನ್ನು ಕುರಿತು ಬಾರ, ಹೋಗ್ರ, ಮಾಡ್ರ, ಹೇಳ್ರ ಇತ್ಯಾದಿಯಾಗಿ ಹೇಳುವುದುಂಟು. ಅದರಂತೆ ಬಾನ, ಹೋಗ್ನ(ಹೋಗ), ಏನ, ನೀನ ಇತ್ಯಾದಿ ಕೂಡ ಸ್ತ್ರೀಯರನ್ನು ಹೇಳುವ ಪದಗಳು.

ಪುರುಷರನ್ನು ಕುರಿತು ಬಾರೋ, ಹೋಗ್ರೊ(ಹೋಗೊ) ಮಾಡ್ರೋ, ಹೇಳ್ರೋ, ಇತ್ಯಾದಿಯಾಗಿ ಹೇಳುವುದುಂಟು. ಬೀದರ ಜಿಲ್ಲೆಯ ಘಟವಾಡಿ ಭಾಗಕ್ಕೆ ಬರೊ, ಬರೆ, ಬನೆ, ಎಂದೂ ಬಳಕೆಯಲ್ಲಿದೆ.

## ೩.೧. ಪ್ರಸ್ತುತ ಅಧ್ಯಯನದ ಉದ್ದೇಶ ಮತ್ತು ವಿಧಾನ

ಪ್ರಸ್ತುತ ಮಹಾಪ್ರಬಂಧದಲ್ಲಿ ಬೀದರ ಕನ್ನಡ ಸಾಮಾಜಿಕ ಹಾಗೂ ಪ್ರಾದೇಶಿಕ ಪ್ರಭೇದಗಳು, ಭಾಷಾಶಾಸ್ತ್ರೀಯ ಅಧ್ಯಯನ ಎಂಬ ತೌಲನಿಕ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಈ ಅಧ್ಯಯನಕ್ಕೆ ಹಿನ್ನೆಲೆಯಾಗಿ ಭಾಷಾಧ್ಯಯನದ ಅರ್ಥ ಮತ್ತು ಸ್ವರೂಪ, ಕನ್ನಡದ ಭಾಷಾರಚನೆ ಸಾಮಾಜಿಕ ಹಾಗೂ ಪ್ರಾದೇಶಿಕವಾಗಿ ವರ್ಗೀಕರಣ, ಕನ್ನಡ ಭಾಷಾಶಾಸ್ತ್ರದ ಹಿನ್ನೆಲೆಯಲ್ಲಿ ಅಂತಾರಾಷ್ಟ್ರೀಯ ಭಾಷಾಭ್ಯಾಸ ಸಂಬಂಧ ಇವುಗಳ ಬಗೆಗೆ ಸ್ಥೂಲವಾದ ವಿವರಣೆ ಕೊಡಲಾಗಿದೆ. ಬೀದರ ಕನ್ನಡ ಭಾಷಿಕ ಅಧ್ಯಯನದ ಕುರಿತಾದ ಬರೆಹಗಳು ಆಗಿಲ್ಲದಿರುವುದರಿಂದ ಈ ವಿಷಯ ನನಗೆ ಕುತೂಹಲ ಮೂಡಿಸಿತು. ಈ ವಿಷಯ ಪ್ರಸ್ತುತ ಸಂಶೋಧನೆಗೆ ಅಗತ್ಯವಾದ ತಾತ್ವಿಕ ಹಿನ್ನೆಲೆಯನ್ನು ರೂಪಿಸುತ್ತವೆ ಎಂಬುದು ಗ್ರಹಿಕೆಯ ಹಿನ್ನೆಲೆಯಲ್ಲಿ ಇದನ್ನು ಆರಿಸಿಕೊಳ್ಳಲಾಯಿತು.

ಪ್ರಸ್ತುತ ಅಧ್ಯಯನದಲ್ಲಿ ಸಾಮಾಜಿಕ ಹಾಗೂ ಪ್ರಾದೇಶಿಕ ಪ್ರಭೇದಗಳು ಎಂದು ಎರಡು ಬಗೆಯ ಹಿನ್ನೆಲೆಯಲ್ಲಿ ವರ್ಣನಾತ್ಮಕವಾಗಿ ಹಾಗೂ ತೌಲನಿಕವಾಗಿ ಭಾಷಾಶಾಸ್ತ್ರೀಯ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ. ಜೊತೆಗೆ ನುಡಿಗಟ್ಟುಗಳು, ಗಾದೆ ಮಾತುಗಳು, ವ್ಯಕ್ತಿನಾಮಗಳು, ಸ್ಥಳನಾಮಗಳು, ವಿಶಿಷ್ಟಪದಗಳು, ಅವುಗಳು ವಿವಿಧಡೆಗೆ ವಿಶಿಷ್ಟ ಅರ್ಥವನ್ನು ಹೇಗೆ ಹೊಂದಿದೆ ಅಡ್ಡಹೆಸರುಗಳು ಹೇಗೆ ಹುಟ್ಟುತ್ತವೆ, ಇಲ್ಲಿಯ ಬೈಗಳ ವಿವಿಧ ರೀತಿಗಳು, ಸಂಬೋಧನಾ ಧ್ವನಿಗಳಿಗೆ ಪ್ರಾಣಿಗಳು ಹಾಗೂ ಪಕ್ಷಿಗಳು ಹೇಗೆ ಸ್ಪಂದಿಸುತ್ತವೆಂಬುದು ಇಲ್ಲಿ ಚರ್ಚಿಸಲಾಗಿದೆ. ವ್ಯಾಕರಣ ರೀತಿಗೆ ವರೆ ಹಚ್ಚಿ ನೋಡಿದಾಗ ಬೀದರ ಕನ್ನಡ ಹೊಂದುವ ಪರಿವರ್ತನೆ ವಿರೋಧವಾಗಿ ಅರ್ಥ ಕೊಡುವುದು, ಧ್ವನಿಯಲ್ಲಿ ಬದಲಾವಣೆಯ ಬಗ್ಗೆ ವಿವರಣಾತ್ಮಕವಾಗಿ ಚರ್ಚಿಸಲಾಗಿದೆ.

ಈ ಅಧ್ಯಯನದ ಕಾರ್ಯಕ್ಷೇತ್ರವಾದ ಬೀದರ ಜಿಲ್ಲೆಯ ಭಾಲ್ಕಿ, ಬೀದರ, ಬಸವಕಲ್ಯಾಣ, ಹುಮುನಾಬಾದ ಹಾಗೂ ಔರಾದ ತಾಲೂಕುಗಳ ಕಡೆಗೆ ಹೋಗಿ ಸಂತೆ, ಜಾತ್ರೆ, ಮದುವೆ ಮುಂತಾದ ಜನ ಸಂದಣಿಯ ಸ್ಥಳಗಳಿಗೆ ಭೇಟಿ ನೀಡಿ ವಿಷಯ ಸಂಗ್ರಿಸಲಾಗಿದೆ. ಬೈಗಳಿಗಾಗಿ ಜಗಳ ನಡೆದಲ್ಲಿಗೆ ಹೋಗುವುದು ಸಾಧ್ಯವಾದ ಕಡೆ ಧ್ವನಿ ಸುರಳಿಯನ್ನು ಬಳಸಲಾಗಿದೆ. ಈ ಜಗಳ ಆಕಸ್ಮಿಕವಾಗಿದ್ದುದರಿಂದ ಕಷ್ಟ ಸಾಧ್ಯವಾಯಿತು. ಕುಡುಕರ ಮನೆಗೆ ಸಂಜೆ ಭೇಟಿಯಾಗುವದು ಎಂದೂ ಮರೆಯಲಿಲ್ಲ. ಕೆಲವೊಮ್ಮೆ ಪೋಲಿಸ್ ಸ್ಟೇಶನ್‌ಗಳಿಗೆ ಭೇಟಿಯೂ ಮಾಡಲಾಗಿದೆ. ಇಂಥ ರೀತಿಯ ಸಂಶೋಧನೆ ಬೀದರ ಜಿಲ್ಲೆಗೆ

ಹೊಚ್ಚಹೊಸದು. ಎಂ.ಮುರಗೆಪ್ಪನವರು ಈ ಭಾಗದ ಭಾಷಾಧ್ಯಯನಕ್ಕೆ ಕೈ ಹಾಕಿದ್ದಾರೆ. ಅದೇ ರೀತಿಯಾಗಿ ಕ್ಯಾತನಹಳ್ಳಿ ರಾಮಣ್ಣ ಈ ಭಾಗದ ಜಾನಪದ ಕಥೆಗಳ ಸಂಗ್ರಹ ಮಾಡಿದ್ದಾರೆ. ಆದರೆ ಕಥೆ ಹೇಳುವಾಗ ಬೀದರ ಭಾಷೆಯ ದೃಷ್ಟಿಯಿಂದ ಎಡುವಿ ಬೀಳುತ್ತಾರೆ. ಅವರ ಪ್ರಾದೇಶಿಕ ನುಡಿಗಟ್ಟುಗಳು ಇಲ್ಲಿ ಬಂದು ಸೇರಿವೆ. ಡಾ.ಕುಯವಿರ ಶೀಗಿಯ ಹಾಡುಗಳು, ಡಾ.ಜಗನ್ನಾಥ ಹೆಬ್ಬಾಳೆಯವರ ಹಾಗೂ ಡಿ.ಬಿ.ನಾಯಕರ ಭುಲಾಯಿ ಪದಗಳು ಈ ಭಾಷೆಯ ಪ್ರತಿಬಿಂಬವಾಗಿ ನಿಂತಿವೆ. ಡಾ.ಸೋಮನಾಥ ನುಚ್ಚಾರವರು ಕೋಲಾಟದ ಪದಗಳು ಸಂಗ್ರಹಿಸಿದ್ದಾರೆ. ಆದರೆ ಅವುಗಳು ಪ್ರಕಟಗೊಳ್ಳದಿರುವುದು ವಿಶಾದನೀಯ. ಈ ಎಲ್ಲ ವಿವಿಧತೆಗಳಲ್ಲಿಯ ಸಾಂಸ್ಕೃತಿಕ ಮೌಲ್ಯವನ್ನು ಪ್ರತಿಬಿಂಬಿಸುವದೆ ಈ ಅಧ್ಯಯನದ ಉದ್ದೇಶವಾಗಿದೆ. ಕಾರ್ಯಕ್ಷೇತ್ರ ಕೈಗೊಂಡ ನಕ್ಷೆಯನ್ನು ಪುಟ ಸಂಖ್ಯೆ.....ಕೊಡಲಾಗಿದೆ.

ಪ್ರಾದೇಶಿಕವಾಗಿ ಮುಖ್ಯವಾಗಿ ನದಿಹಳ್ಳಗಳು, ಗಡಿಭಾಗಗಳು ದೃಷ್ಟಿಯಲ್ಲಿಟ್ಟುಕೊಂಡು ವಿಭಾಗಿಸಲಾ. ಸಾಮಾಜಿಕವಾಗಿ ಅಭ್ಯಾಶಿಸುವಾಗ ವಿಶೇಷವಾಗಿ ಮೂರು ಜಾತಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ತೌಲನಿಕವಾಗಿ ಚರ್ಚಿಸಲಾಗಿದೆ. ದ್ವಿಭಾಷಿಗರು ಭಾಷೆಯ ಬಗ್ಗೆಯೂ ವಿಶೇಷವಾಗಿ ಚರ್ಚಿಸಲಾಗಿದೆ. ಈ ಇಂಥ ಚರ್ಚೆಯೇ ಪ್ರಸ್ತುತ ಅಧ್ಯಯನದ ಗುರಿ ಮತ್ತು ಉದ್ದೇಶವಾಗಿದೆ.

### ೩.೧.೧. ಬೀದರ ಕನ್ನಡ ಸಾಮಾಜಿಕ ಪ್ರಭೇದಗಳು

ಈ ಮೇಲ್ಕಂಡ ಶೀರ್ಷಿಕೆಯೇ ಹೇಳುವಂತೆ ಇದು ಬೀದರ ಕನ್ನಡ ಸಾಮಾಜಿಕ ಪ್ರಭೇದವನ್ನು ಕುರಿತು ಚರ್ಚಿಸುವ 'ಸಮಾಜೋಭಾಷಿಕ ಅಧ್ಯಯನ'. ದ್ವಿಭಾಷಿಕತೆ, ಬಹುಭಾಷಿಕತೆಗಳ ಅಧ್ಯಯನ ಇತ್ಯಾದಿ ಅಂಶಗಳನ್ನು ಇಲ್ಲಿ ಸಮಾಜೋಭಾಷಿಕ ಅಧ್ಯಯನದೊಳಗಡೆ ಸಮಾವೇಶಗೊಳಿಸಲಾಗಿದೆ. ಸಾಮಾಜಿಕ ಪ್ರಭೇದಗಳಾದ ಬ್ರಾಹ್ಮಣರ ಕನ್ನಡ, ಲಿಂಗಾಯತರ ಕನ್ನಡ, ದ್ವಿಭಾಷಿಗರ ಕನ್ನಡ ಹಾಗೂ ಪರಿಶಿಷ್ಟ ಜಾತಿಯರ ಕನ್ನಡದ ಅಧ್ಯಯನವನ್ನು ಇಲ್ಲಿ ಅವಲೋಕಿಸಲಾಗಿದೆ. ಬೀದರ ಕನ್ನಡದ ಮೇಲೆ ಉರ್ದು ಮರಾಠಿ, ಹಿಂದಿ ಹಾಗೂ ಇಂಗ್ಲೀಷ್ ಭಾಷೆಗಳ ಪ್ರಭಾವವನ್ನು ಗುರುತಿಸಲಾಗಿದೆ.

ಈ ಎಲ್ಲಾ ಗಮನಾರ್ಹ ಅಂಶಗಳ ನಡುವೆ ಸೆಣಸಾಡುವುದು ಪ್ರಸ್ತುತ ಪ್ರಬಂಧದಲ್ಲಿದೆ. ಭಾಷಾವಿಜ್ಞಾನದ ಆಧುನಿಕ ಕ್ಷೇತ್ರವು ತನ್ನ ಪ್ರಾರಂಭಿಕ ದೆಸೆಯಿಂದಲೇ ಭಾಷೆಯ ಅಮೂರ್ತ ಸ್ವರೂಪದ ಆವಿಷ್ಕಾರದತ್ತ ಗಮನಹರಿಸಿತು. ಉಚ್ಚಾರಗಳನ್ನು ಹೊರಡಿಸುವ ಭಾಷಿಕರು ಅಸ್ತಿತ್ವದಲ್ಲಿರುವರೊ ಎಂಬ ವಾಸವಾಂಶದ ಕಡೆಗೆ ಗಮನ ಕೊಡದೆ ಭಾಷೆಯ ಅಂತಸ್ಸು ಉಚ್ಚಾರಣೆಗಳನ್ನು ಇಲ್ಲಿ ಅಧ್ಯಯನ ಕ್ಷೇತ್ರವಾಗಿ ಪರಿಗಣಿಸಲಾಗಿದೆ.

'ಸಾಮಾಜಿಕ ಭಾಷಾ ವಿಜ್ಞಾನ' ಎಂಬ ಪರಿಭಾಷೆಯು ಭಾಷಾ ನಡವಳಿಕೆಯ ಅಧ್ಯಯನಕ್ಕೆ ಸಂಬಂದಿಸಿದ ವಿವಿಧ ಬಗೆಯ ಸಮಿಪನಗಳನ್ನು ಉಲ್ಲೇಖಿಸುತ್ತದೆ. ಇದು ಭಾಷಾ ವಿಜ್ಞಾನದ ವ್ಯವಹಾರಗಳನ್ನು ಸಮಾಜ ವಿಜ್ಞಾನದ ಇತರ ವ್ಯವಹಾರಗಳ ಜತೆಗೆ ಒಂದುಗೂಡಿಸುವ ನಿಟ್ಟಿನಲ್ಲಿ ಪ್ರಯತ್ನಿಸುತ್ತದೆ. ಸಾಮಾಜಿಕ ಭಾಷಾ ವಿಜ್ಞಾನವು ಶುದ್ಧ ಭಾಷಾವಿಜ್ಞಾನದ ಗುರಿಗಳನ್ನು ಹಂಚಿಕೊಳ್ಳುವ ಭಾಷಾ ವಿಜ್ಞಾನದ ಒಂದು ಪ್ರಭೇದವಾಗಿದೆ. ಭಾಷಿಕ ಭಾಷಾ ಶಾಸ್ತ್ರಜ್ಞರ ಪ್ರಕಾರ ಇಂತಹ ವ್ಯತ್ಯಾಸಗಳು ಭಾಷಾ ಪ್ರವೃತ್ತಿಯ ಅಂತರಿಕ ಅಂಶಗಳೇ ಹೊರತು ಬಾಹ್ಯ ಸಂಗತಿಗಳಲ್ಲ.

ಭಾಷಿಕ ವ್ಯವಸ್ಥೆಯ ಒಂದು ಭಾಗವಾಗಿಯೇ ಇವುಗಳನ್ನು ಚರ್ಚಿಸಬೇಕಾಗುತ್ತದೆ. ಉದಾಹರಣೆಗೆ ಬೀದರಿನ ಮಾಂಸಾಹಾರಿ ಸಮುದಾಯದ ಕನ್ನಡಿಗನೊಬ್ಬನಲ್ಲಿ ಮಾಂಸಕ್ಕೆ ಸಂವಾದಿಯಾಗಿ ಹಲವು ಪದಗಳಿರುತ್ತವೆ. ಅವನು ತನ್ನದೇ ಸಮುದಾಯದವರೊಂದಿಗೆ ವ್ಯವಹರಿಸುವಾಗ ಸಾಮಾನ್ಯ ಗ್ರಾಮ್ಯ ರೂಪವಾದ 'ಪಲ್ಯ' ಬಳಸುತ್ತಾನೆ. ಹೆಚ್ಚಾಗಿ ಈ ಪದ ಸ್ತ್ರೀಯರ ಬಾಯಲ್ಲಿ ಬಳಕೆಯಾಗುತ್ತದೆ. ಬ್ರಾಹ್ಮಣರೊಂದಿಗೋ ಇತರ ಶಾಖಾಹಾರಿ ಸಮುದಾಯದವರೊಂದಿಗೋ ಔಪಚಾರಿಕ ಸಂದರ್ಭದಲ್ಲಿ ವ್ಯವಹರಿಸುವಾಗ ಅವನು 'ಮಟನ್' ಪದವನ್ನು ಉಪಯೋಗಿಸುತ್ತಾನೆ. ಆತ ವಿದ್ಯಾವಂತನಾಗಿದ್ದರೆ ಕೆಲವು ಸಂದರ್ಭದಲ್ಲಿ 'ಮೀಟ್' ಪದವನ್ನ ಬಳಸುತ್ತಾನೆ. ಆದರೆ ಸಸ್ಯಹಾರಿ ಮೇಲ್ವರ್ಗದ ಜನರು ಖಂಡಾ ಅಂತಲೇ ಬಳಸುತ್ತಾರೆ. ವಿದ್ಯಾವಂತರು 'ಮಟನ್' ಎಂದು ಬಳಸುತ್ತಾರೆ. ಮಾಂಸಹಾರಿಗಳು ಖಂಡ ಎಂದೊಡನೆ ಅವಚ್ಯ ಶಬ್ದ ಎಂದು ಭಾವಿಸಿಕೊಳ್ಳುತ್ತಾರೆ. ಆದರೆ ಜೀವಂತವಾದ ಮನುಷ್ಯನು ದನಕರುದೊ ಕೊಡಲಿ ಪೆಟ್ಟಿನಿಂದೊ ಮತ್ತಾವದರಿಂದೊ ಹೊರ ಕಾಣಿಸುವ ಭಾಗಕ್ಕೆ 'ಖಂಡ ಕಾಣ್ಯಾದ ಎಂದು ಬಳಸುವುದು ವಾಡಿಕೆಯಲ್ಲಿದೆ. ಹೊಲೆಮಾದಿಗರು, ತಿನ್ನುವುದಕ್ಕಾಗಿ ತರುವ ಮಾಂಸಕ್ಕಾಗಲಿ, ಅದರ ಸಾರಿಗಾಗಲಿ ಪಲ್ಯ ಅಂತಲೇ ಹೇಳುತ್ತಾರೆ. ಮುಸಲ್ಮಾನರು ಕನ್ನಡ ಮಾತನಾಡುವಾಗ ಗೋಶ ಎಂಬ ಪದವೇ ಬಳಸುತ್ತಾರೆ.

ಸಾಮಾಜಿಕ ಭಾಷಾವಿಜ್ಞಾನಕ್ಕೆ ಸಂಬಂಧಿಸಿದ್ದಂತೆ ಸಂಕುಚಿತ ಹಾಗೂ ವ್ಯಾಪಕ ಎರಡು ಅರ್ಥಗಳಲ್ಲಿ ನಡೆದ ಅಧ್ಯಯನಗಳನ್ನು ಕೆಳಗಿನ ಚರ್ಚೆಯಲ್ಲಿ ಸಮೀಕ್ಷಿಸಲು ಪ್ರಯತ್ನಿಸಲಾಗಿದೆ. ಸಾಮಾಜಿಕ ಭಾಷಾ ವಿಜ್ಞಾನ ಕ್ಷೇತ್ರಕ್ಕೂ ದಕ್ಷಿಣ ಏಷಿಯಾದ ಭಾಷಾ ಅಧ್ಯಯನಗಳಿಂದಲೇ ಪ್ರಾರಂಭಿಕ ಪ್ರೇರಣೆ ದೊರೆಯಿತ್ತೆನ್ನಬಹುದು.

'ಲಿಂಗ್ವಿಸ್ಟಿಕ್ ಡೈವರ್ಸಿಟಿ ಇನ್ ಸೌತ್ ಏಷಿಯಾ' ಎಂಬ ಸಂಪುಟವು ದ್ರಾವಿಡ ಭಾಷೆಗಳಾದ ತಮಿಳು ಮತ್ತು ಕನ್ನಡವೂ ಸೇರಿದಂತೆ ವಿವಿಧ ದಕ್ಷಿಣ ಏಷಿಯಾ ಭಾಷೆಗಳ ಸಮಾಜೋ ಭಾಷಿಕ ವ್ಯತ್ಯಾಸಗಳಿಗೆ ಸಂಬಂಧಿಸಿದ ಪ್ರಾರಂಭಿಕ ಘಟ್ಟದ ಅಸಂಖ್ಯಾ ಅಧ್ಯಯನಗಳನ್ನು ಒಳಗೊಂಡಿದೆ.

ಇಲ್ಲಿ ಐದು ಬಗೆಯ ಪ್ರಮುಖ ವ್ಯತ್ಯಾಸಗಳನ್ನು ಗುರುತಿಸಲಾಗಿದೆ. ಅವುಗಳೆಂದರೆ ಬ್ರಾಹ್ಮಣ ಕನ್ನಡ, ಲಿಂಗಾಯಿತ ಕನ್ನಡ, ಮುಸಲ್ಮಾನ ಕನ್ನಡ, ಹೊಲೆಯರ ಕನ್ನಡ ಹಾಗೂ ಮಾದಿಗರ ಕನ್ನಡ. 'ಸಾಮಾಜಿಕ ಉಪಭಾಷೆ' ಎಂದು ಪರಿಭಾಷೆಯು ಒಂದೇ ಪ್ರದೇಶದಲ್ಲಿ ಇತರ ಪ್ರಭೇದಗಳೊಂದಿಗೆ, ಜತೆಜತೆಯಾಗಿ ಅಸ್ತಿತ್ವದಲ್ಲಿರುವ ಭಾಷಾಪ್ರಭೇದಗಳಿಗೆ ಸಂಬಂಧಿಸಿದುದ್ದಾಗಿರುತ್ತದೆ. ಆದರೆ ಸಾಮಾಜಿಕ ಅಂಶಗಳ ಆಧಾರದಿಂದ ಇವು ಪ್ರತ್ಯೇಕಿಸಲ್ಪಡುತ್ತವೆ. ಮೇಲೆ ಗುರುತಿಸಲಾದ ಲಿಂಗಾಯತ ಕನ್ನಡಕ್ಕೂ ಹೊಲೆ ಮಾದಿಗರ ಕನ್ನಡಕ್ಕೂ ಇರುವಂತಹುದೇ ವ್ಯತ್ಯಾಸಗಳು ಭಾರತದೆಲ್ಲೆಡೆ ಕಂಡು ಬರುತ್ತವೆ. ಇವು 'ಜಾತೀಯ ಉಪಭಾಷೆ' ಎಂಬ ಪರಿಭಾಷೆಯ ಹುಟ್ಟಿಗೂ ಕಾರಣವಾದವು. ಜಾತಿಗೆ ಸಂಬಂಧಿಸಿದ್ದ ಭಾಷಾ ವ್ಯಾತ್ಯಾಸಗಳ ಬಗೆಗೆ ಸಾಕಷ್ಟು ಮಾಹಿತಿಗಳು ಸಿಗುತ್ತವೆ. ಕೆಲವು ಪುರಾವೆಗಳ ಪ್ರಕಾರ ಈ ಪರಸ್ಪರ ಸಂಬಂಧವು ಭೌಗೋಳಿಕ ಭಿನ್ನತೆಗಳಿಂದ ಸ್ವತಂತ್ರವಾದುದು. ಜಾತಿಯು ಭಾಷಾ ವ್ಯತ್ಯಾಸವನ್ನು ಪ್ರಭಾವಿಸುವ ಏಕೈಕ ಸಾಮಾಜಿಕ ವ್ಯತ್ಯಾಸಕಾರಕವಾಗಿದೆ. ಧರ್ಮ, ಔದ್ಯೋಗಿಕ ಸ್ಥಾನಮಾನ, ವಯಸ್ಸು, ಲಿಂಗ ಹಾಗೂ ವಸತಿಸ್ಥಳ(ಹಳ್ಳಿಗಾಡು ಪ್ರದೇಶ)ಗಳಂತಹ ಇತರ ಅಂಶಗಳೊಂದಿಗೂ ಭಾಷಾ ವ್ಯತ್ಯಾಸಗಳಿಗೆ ಪರಸ್ಪರ ಸಂಬಂಧವಿರುತ್ತದೆ. ಇವುಗಳೊಳಗಿನ ಸಂಬಂಧಗಳ ಕುರಿತು ಇದುವರೆಗೆ ನಮಗೆ ಹೆಚ್ಚೇನೂ ತಿಳಿದಿಲ್ಲ. ನಿರ್ದಿಷ್ಟವಾಗಿ ಹೇಳುವುದಾದರೆ, ಸಮಕಾಲೀನ ಸಂದರ್ಭದಲ್ಲಿ ಜಾತಿ, ಸಾಮಾಜಿಕ ವರ್ಗ, ಶಿಕ್ಷಣ ಮತ್ತು ನಗರೀಕರಣಗಳಂತಹ ಪ್ರಮುಖ ಅಂಶಗಳ ಪರಸ್ಪರ ಸಂಬಂಧಾತ್ಮಕ ಪ್ರಾಮುಖ್ಯತೆಯೇ ನೆಂಬುದು ನಮಗೆ ತಿಳಿದಿಲ್ಲ.

ಕ್ರಿಯಾತ್ಮಕ ವ್ಯತ್ಯಾಸವು ವಿವಿಧ ಸನ್ನಿವೇಶ ಅಥವಾ ಪಾತ್ರಗಳಿಗೆ ಸಂಬಂಧಿಸಿದ್ದಂತೆ ಮೇಲ್ಜಾತಿಯ ಗುಂಪಿಗೂ ಕೆಳಜಾತಿಯ ಗುಂಪಿಗೂ ವ್ಯತ್ಯಾಸವಾಗುವುದು. ಉದಾಹರಣೆ ಹುಡುಗಿ ಪ್ರೌಢಾವಸ್ಥೆಗೆ ಬಂದರೆ ಮೇಲ್ವರ್ಗದವರು. 'ಹುಡುಗಿ' 'ಧೊಡ್ಡಾಕಿ ಆಗ್ಯಾಳ್' ಇದೇ ಮಾತನ್ನ ಕೆಳವರ್ಗದ ಜನ 'ಪೋರಿ ಮೈನೆರ್ದಾಳ್' ಎಂಬ ರೂಪಗಳೊಳಗಿನ ವ್ಯತ್ಯಾಸವು ಸಾಮಾಜಿಕವಾದುದಾದರೂ ಈ ಎರಡೂ ಪಂಗಡಗಳಲ್ಲೂ ಔಪಚಾರಿಕ ಭಿನ್ನರೂಪವಾದ ಹುಡಗಿ ದೊಡ್ಡವಳಾಗಿದ್ದಾಳೆಂಬುದು ಅಸ್ತಿತ್ವದಲ್ಲಿರುತ್ತದೆ. ಈ ತೆರನಾದ ವ್ಯತ್ಯಾಸವನ್ನು ಉನ್ನತೀಕರಿಸಿದ ವ್ಯತ್ಯಾಸವೆಂದೂ ಕರೆಯಲಾಗುತ್ತದೆ. ಅಂದರೆ ಇಲ್ಲಿ ಭಾಷೆಯೊಂದರ ಕೆಳಸ್ತರದ ಅಥವಾ ಅನೌಪಚಾರಿಕ ಭಿನ್ನರೂಪಕ್ಕಿಂತ ಹೆಚ್ಚು ಮೌಲಿಕವೆನಿಸಿದ ಅಥವಾ ಔಪಚಾರಿಕ ಎನಿಸಿದ ಭಿನ್ನರೂಪವು ಮೇಲ್ಮೈ ಸಾಧಿಸಿರುತ್ತದೆ.

ಬೀದರಿನ ಬ್ರಾಹ್ಮಣ ಸಮುದಾಯದವರು ತಮ್ಮದೇ ಜನರೊಂದಿಗೆ ವ್ಯವಹರಿಸುವಾಗ ಶಿಷ್ಟಭಾಷೆ ಅಥವಾ ಸಂಸ್ಕೃತ ಪದಗಳನ್ನು ಬಳಸಿ ಮಾತನ್ನಾಡುವುದುಂಟು ಆದರೆ ಬಾಹ್ಯ ಸಮಾಜದೊಂದಿಗೆ ವ್ಯವಹರಿಸುವಾಗ ಪ್ರಾದೇಶಿಕ ಉಪಭಾಷೆಯಲ್ಲಿಯೇ ಮಾತನ್ನಾಡುತ್ತಾರೆ. ಉದಾ : ಕಾಲಿನಲ್ಲಿರುವ

ಮುಳ್ಳು ತೆಗೆಯುವಾಗೊ, ಅಥವಾ ಉಗುರು ತೆಗೆಯುವಾಗ ರಕ್ತ ಬರುತ್ತಿತ್ತೆಂದರೇ ಬ್ರಾಹ್ಮಣರು 'ಜೀವಾಳ'ಕ ಹತ್ತ್ಯದ ಅಂದರೆ ಲಿಂಗಾಯತರು 'ಕಳ್ಳಿಗಿ' ಹತ್ತ್ಯಾದ; ಹೊಲೆಮಾದಿಗರು ಕಿಳ್ಳಿಗಿ ಹತ್ತ್ಯಾದ; ಜಿವಾಳಕ ಹತ್ತ್ಯಾದ; ಮುಸಲ್ಮಾನರು ಜಿವಾಡ್‌ಕ ಹಾತ್ತ್ಯಾದ., ಬ್ರಾಹ್ಮಣರು ಚಿಂತಿ, ಲಿಂಗಾಯತ ಕುದಿ, ಹೊಲೆಮಾದಿಗರು ಫಿಕಿರ್., ಬ್ರಾಹ್ಮಣ ಭೇಟಿ ಆದ, ಲಿಂಗಾಯತ ಸಿಕ್ಕಿದ, ಹೊಲೆಮಾದಿಗರು ಗಂಟ್ ಬಿದ್ದ ಮುಸಲ್ಮಾನರು ಮುಲಾಖತ್ ಆಯಿತು. ಬ್ರಾಹ್ಮಣರು 'ಕೆಂಪು' ಲಿಂಗಾಯತ ಕೆಂಪಾಂದು, ಹೊಲೆ ಮಾದಿಗರು 'ಖೆಂಪಾದ್' ಮುಸಲ್ಮಾನರು 'ಲಾಲಿ'; ಬ್ರಾಹ್ಮಣರು ಆಕಸ್ಮಿಕ, ಲಿಂಗಯತ ಅಕಾಸ್ಮತ್, ಹೊಲೆಮಾದಿಗರು 'ಆಚಾನಕ' 'ಇಂಥ' ಬ್ರಾಹ್ಮಣರದ್ದಾದರೆ, 'ಹಿಂತಾ' ಲಿಂಗಾಯತರದಾಯ್ತು ಹೊಲೆ ಮಾದಿಗರಲ್ಲಿ 'ಖಿಂತಾ' ಆಗುತ್ತದೆ. ಭಾಷಾ ರೂಪಗಳಲ್ಲಿ ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ನಡುವೆ ಧ್ವನಿಮಾತ್ಮಕ ವ್ಯತ್ಯಾಸಗಳಿರುವುದನ್ನು ಕಾಣಬಹುದು. ಇಂಥ ಸಂದರ್ಭಗಳಲ್ಲಿ ಬ್ರಾಹ್ಮಣರ ಉಚ್ಚಾರಣೆಯೇ ಹೆಚ್ಚು ಶುದ್ಧವಾದುದು ಎಂಬ ತಿಳುವಳಿಕೆಯೂ ಇದೆ.

ಬ್ರಾಹ್ಮಣೇತರ ಭಾಷಾ ಪ್ರಭೇದಗಳನ್ನು ಅಧ್ಯಯನ ಮಾಡಿದಾಗ ಕೆಳಜಾತಿಯಲ್ಲಿಯ ಭಿನ್ನತೆಗಳು ಇತರ ಬ್ರಾಹ್ಮಣೇತ ಭಾಷಾ ಪ್ರಭೇದಗಳಿಗಿಂತಲೂ ಪ್ರತ್ಯೇಕವಾಗಿ ಗೋಚರವಾಗುತ್ತವೆ. ಅದು ಹೇಗೆಂದರೆ ಲಿಂಗಾಯತರ ಉಚ್ಚಾರಣೆ ಹಾಗೂ ಕೆಳಜಾತಿಗಳವರ ಉಚ್ಚಾರಣೆ. ಇದು ಸ್ಪೃಶ್ಯ ಮತ್ತು ಅಸ್ಪೃಶ್ಯ ಜಾತಿಗಳೊಳಗೆ ಮುಖ್ಯವಾಗಿ ಧ್ವನಿಮಾ ವ್ಯತ್ಯಾಸಗಳಿರುವುದನ್ನು ತೋರಿಸಿಕೊಡುತ್ತದೆ. ಅಸ್ಪೃಶ್ಯರು ತಮ್ಮ ಭಾಷೆಯಿಂದ ಗುರುತಿಸಲ್ಪಡುತ್ತಾರೆಂದು ಹೇಳುತ್ತಾ ಬರಲಾಗಿದೆ, ಇದು ಸತ್ಯದ ಸಂಗತಿಯಾಗಿದೆ.

ಸದ್ಯ ಗಮನಿಸಿದಂತೆ ಮುಸಲ್ಮಾನರದೂ ಭಾಷಾ ಭೇದವುಳ್ಳ ಒಂದು ಗುಂಪೆನಿಸುತ್ತದೆ. ಹಿಳ್ಳೆಯವರು ಇದರ ಬಗ್ಗೆ ಅಧ್ಯಯನ ನಡೆಸಿದ್ದಾರೆ. ಇದು ಮಲಯಾಳಂನಲ್ಲಿ ಕೇರಳದ ಮುಸಲ್ಮಾನರ ಭಾಷಾ ಪ್ರಭೇದವನ್ನು ಅರಿಯಲು ಸಾಧ್ಯವಾಗಿದೆ.

ಕೇರಳದ "ಆಚಾರಂ ಪಳಯಲ್" ಎಂಬ ಸಂಪ್ರದಾಯದ ಪ್ರಕಾರ ಮೇಲ್ಜಾತಿಯವರು ಬಳಸುವ ಕೆಲವು ಪದಗಳನ್ನು ಕೆಳಜಾತಿಯವರು ಮಾತನಾಡಬಾರದೆಂದು ಅವರ ಮೇಲೆ ನಿಷೇಧ ಹೇರಲಾಗುತ್ತದೆ. ಇದರ ಪರಿಣಾಮವೆಂಬಂತೆ ಭಾಷಾ ಬಳಕೆಯ ಕ್ಷೇತ್ರದಲ್ಲಿ ಮೇಲ್ವರ್ಗದ ಸಾಮಾಜಿಕ ಕಟ್ಟುಪಾಡನ್ನು ಮೀರಿ ಮುಕ್ತ ಸಾಮಾಜಿಕ ನೀತಿಯನ್ನು ಪಾಲಿಸುವುದು ಕಷ್ಟವೆನಿಸುತ್ತದೆ. ಇದು ಉಣ್ಣಿಯವರ ವರದಿ. ಆದರೆ ಈ ತರವಾದ ಯಾವ ಕಟ್ಟುಪಾಡು ಭಾಷಾ ಬಳಕೆಯಲ್ಲಿಲ್ಲ. ಯಾವ ಜಾತಿಯು ಯಾವ ಶಬ್ದವೂ ಬಳಸಬಹುದು. ದೇಶ ಸ್ವಾತಂತ್ರಪೂರ್ವದಲ್ಲಿ ಅಡುಗೆಯಲ್ಲಿ ತಾರತಮ್ಯವಿತ್ತು. ಲಿಂಗಾಯತರು, ಇತರ ಮೇಲ್ಜಾತಿಯವರು ಎಣ್ಣೆಯಲ್ಲಿ ಬೇಯಿಸಿದ(ಕರಿದ) ಆಹಾರ ಮಾಡಬೇಕು, ಭುಜಿಸಬೇಕು. ಆದರೆ ಕೆಳಜಾತಿಯವರು ಬರೀ ನೀರಿನಲ್ಲಿ ಬೇಯಿಸಿದ(ಕುದಿಸಿದ) ಆಹಾರವನ್ನು ಸಿದ್ಧಪಡಿಸಬೇಕು ಮತ್ತು

ಸೇವಿಸಬೇಕು. ಒಂದು ವೇಳೆ ಎಣ್ಣೆಯಲ್ಲಿ ಕರಿದ ಆಹಾರ ಸೇವಿಸುತ್ತಿದ್ದರೆ ಅದು ಮೇಲ್ಜಾತಿಯವರು ಕೊಟ್ಟದ್ದಾಗಿದ್ದರೆ ಮಾತ್ರ ಅಡ್ಡಿಯಿಲ್ಲ.

ಭಾಷಾ ಬಳಕೆಯಲ್ಲಿ ಒಂದು ನಿಯಮವಿದೆ. ಅದೇನೆಂದರೆ ಮೇಲ್ಜಾತಿಯ ವ್ಯಕ್ತಿ ಕೆಳಜಾತಿಯನೊಂದಿಗೆ ಸಂಭಾಷಣೆಯಲ್ಲಿ ತೊಡಗಿದಾಗ ಮೇಲ್ಜಾತಿಯವನು ಕಟ್ಟೆಯ ಮೇಲೊ, ಆಸನದ ಮೇಲೊ ಅಥವಾ ಸ್ವಲ್ಪ ದೂರವೊ ಇದ್ದು ಮಾತನಾಡಿಸುತ್ತಾನೆ. ಅದು ಸೇವಕನಿಗೆ ಆದೇಶಿಸುವಂತೆ. ಆದರೆ ಕೆಳಜಾತಿಯವನು ಮಾತನಾಡುವಾಗ ಕುಳಿತಿರಬಾರದು. ಒಂದು ವೇಳೆ ಕುಳಿತರೂ ಆಸನದ ಮೇಲೆ ಕುಳಿತೊ, ಮೇಲ್ಜಾತಿಯ ಮನೆಯೊಳ ಹೊಕ್ಕೊ ಮಾತನಾಡಬಾರದು. ಬಾಗಿಲದ ಮೆಟ್ಟಲು ಕೆಳಗೆ ನಿಂತು ಮಾತನಾಡಬೇಕು ಯಜಮಾನನಿಗೆ ಮಾತಾನಾಡಿದಂತೆ. ವಿನಂತಿಸಿ ಕೊಳ್ಳಬೇಕು ಆದೇಶಿಸಲು ಬಾರದು. ಬಹುವಚನದಲ್ಲಿ ಸಂಬೋಧಿಸಬೇಕು ಇದರಲ್ಲಿ ವಯಸ್ಸಿನ ಹೆಚ್ಚು ಕಡಿಮೆಯಿಲ್ಲ. ಕೆಳಜಾತಿಯ ಯಜಮಾನನಿಗೂ ಮೇಲ್ಜಾತಿಯ ಸಣ್ಣ ಮಗುವು ಏಕ ವಚನದಲ್ಲಿ ಮಾತನಾಡಿಸಬಹುದು. ಅವರ ಕಾಲು ಈತನಿಗೆ ತಾಕಿದರೂ ಚಿಂತಿಯಿಲ್ಲ ಆದರೆ ಇವನ ಕೈಯೂ ಅವರಿಗೆ ತಾಗಬಾರದು. ಇತ್ತಿತ್ತಲಾಗಿ ಇದು ಕಡಿಮೆಯಾಗುತ್ತ ಬಂದಿದೆ. ಆದರೆ ಕೆಲವು ಸಂದರ್ಭದಲ್ಲಿ ಈ ಕಟ್ಟಾಚಾರಣೆ ಬಿಡುವ ಹಾಗಿಲ್ಲ, ಹೀಗಿದ್ದುದರಿಂದಲೇ ಮೇಲ್ವರ್ಗದವರ ಭಾಷೆಯ ಶಬ್ದಗಳಿಗೂ ಕೆಳವರ್ಗದವರ ಭಾಷೆಯ ಶಬ್ದಗಳಿಗೆ ವ್ಯತ್ಯಾಸವಿದೆ ಎಂದು ಹೇಳಬಹುದು. ಇನ್ನೊಂದು ಕಾರಣ ಬೀದರಿನ ಕೆಳಜಾತಿಯವರಾದ ಹೊಲೆಯ, ಮಾದಿಗ, ಮಧ್ಯಮ ವರ್ಗದವರಾದ ಕುರುಬ, ಬಡಿಗ, ಕ್ಷೌರಿಕ, ಕುಂಬಾರ, ಕಂಬಾರ ಘಾಣಿಗ ಮುಂತಾದವರ ಭಾಷೆ ಕನ್ನಡ ಕೆಲವು ಕುಟುಂಬದವರು ಮರಾಠಿ ಮನೆಮಾತಾಗಿರುತ್ತದೆ. ಅದೇ ರೀತಿ ಹೆಳವರು, ವಡ್ಡರು, ಮುಂತಾದವರ ಮನೆ ಭಾಷೆ ತೆಲುಗುವಾಗಿರುವುದರಿಂದ ಇವರ ಭಾಷೆಯು ಮೇಲ್ವರ್ಗದವರ ಭಾಷೆಗಿಂತ ಭಿನ್ನವಾಗಿದೆ.

ಲಿಂಗಾಯಿತ ಗಲ್ಲಿ(ಬಡವಾಣಿ) ಆದರೆ ಹೊಲೆ ಮಾದಿಗರದು ಕೇರಿಯಾಗುತ್ತದೆ. ಲಿಂಗಾಯತರಲ್ಲಿ ಜ್ವಾಳದಬಾನಾ(ಜೋಳ ಕುದಿಸಿ ಮೆದುಮಾಡಿದ ಖಾದ್ಯ)ಕ್ಕೆ ಹೊಲೆ ಮಾದಿಗರು 'ಖಿಚಡಿ', 'ಬಿಳಿಜ್ವಾಳ' ಲಿಂಗಾಯತರೆಂದರೇ ಧೊಡ್ಡಜ್ವಾಳ(ಜಾಳಾ) ಎಂದು ಹೊಲೆ ಮಾದಿಗರೆನ್ನುತ್ತಾರೆ. ಗಟ್ಟಿಯಾದ ಪಲ್ಯೆಗೆ ಲಿಂಗಾಯತರು ಮುಧ್‌ಬ್ಯಾಳಿ ಹೊಲೆಮಾದಿಗರದು 'ಘಟ್ಟ್ಯಾನ್ ಬ್ಯಾಳಿ'/ಘಟ್ಟ್ಯಾನಪಲ್ಯ.

ಸಾರಿಗೆ ಲಿಂಗಾಯತರು ಖಾರ್ಬ್ಯಾಳಿ ಹೊಲೆಮಾದಿಗರು ಬ್ಯಾಳಿ, ಅಳೂಸನಬ್ಯಾಳಿ ಹೀಗೆ ಕೆಳಗಿನ ಉದಾಹರಣೆ ಗಮನಿಸಬಹುದು.

| ಲಿಂಗಾಯತರು | ಮಧ್ಯಮವರ್ಗದವರು | ಹೊಲೆಮಾದಿಗರು |
|---|---|---|
| ಹಿಟ್ಪಲ್ಯ | ಹಿಟ್ಬಿನ್‌ಪಲ್ಯ | ಹಿಟ್ಬಿನ್‌ಪಲ್ಯ |
| ತಂಗುಳು | ತಂಗುಳ್ | ತೊಂಗುಳ್ |
| ಫಾಣಿ | ಫೋಣಿ | ಫೋಣ್ಗಿ |
| ಹೆಬರೆಡ್ | ಹೆಬರೆಟ್ | ಹೆಬ್ರೆಟ್ |
| ಲಂಗಾ | ಲಂಗಾ | ಘುಡಕಿ |
| ಬ್ಯಾಲರ್ | ಬ್ಯಾರಲ್ | ಬ್ಯಾರಲ್ |
| ಬಾಗಿಲು | ಬಾಗಿಲ್ | ಬಾಕುಲ್ |
| ಮಾಯಿನ್ಕಾಯಿ | ಮಾಯಿನ್ಕಾಯಿ | ಮಾನೆಕಾಯಿ |
| ಖಬ್ಬಿನ್‌ಹಾಲು | ಖಬ್ಬಿನಹಾಲ್ | ಖಬ್ಬಿನ್‌ರಸಾ |
| ಬಬ್ಲಿಗಿಡಾ | ಬೊಬ್ಲಿಗಿಡಾ | ಬೊಬ್ಲಿಗಿಡಾ |
| ಬೆಯಿನ್‌ಗಿಡಾ | ಬೈನ್‌ಗಿಡಾ/ಬೇನ್ | ಬೇನ್‌ಗಿಡಾ |
| ತಪ್ಪಲ್ | ತಪ್ಪಲ್ | ತೊಪ್ಪಲ್ |
| ಸುಂಟರ್‌ಘಾಳಿ | ಸುಂಟರ್‌ಘಾಳಿ | ದೆವ್‌ಘಾಳಿ |
| ಕಂಬಾ | ಖಂಬಾ | ಖಂಬಾ/ಖೊಂಬಾ |
| ಚಂಪಾ | ಚಂಪಾ | ನಾಕ್‌ಬಟ್ |
| ಕೂಕಮ್ | ಕೂಕಮ | ಕೂಕಾಮ್ |
| ಕೊಟಗಿ | ಕೊಟಕಿ | ಛಪ್ಪರು |
| ಗೊಂಡ್ಯಾ | ಗೊಂಡ್ಯಾ | ಗುಂಡಿ |
| ಜೋಡಾ | ಜೋಡಾ/ಬೂಟ್ | ಬೂಟ್ |
| ಗ್ಯಾಡಿ | ಗ್ಯಾಡಿ | ಘ್ಯಾಡಿ/ಘೋಡಿ |
| ಥೆಮಗಿ | ಥ್ಯಾಮಗಿ | ಥಮಗಿ |
| ಹರವಿ | ಹರವಿ | ಹರಿ (ಮಡಿಕೆ) |
| ನಿಟ್ಟಗ | ನಿಟ್ಟಗ | ನಿಟ್ಟಂಗ್(ಅಳತೆ ಸಾಮಗ್ರಿ) |
| ಮನಗ್ಯಾಳ | ಮೊಕೊಂಡಾಳ | ಮೊಕೊಂಡಾಳ |

| ಲಿಂಗಾಯತರು | ಮಧ್ಯಮವರ್ಗದವರು | ಹೊಲೆಮಾದಿಗರು |
|---|---|---|
| ಬೆಲ್ಲದನ್ನ | ಸೈಯನ | ಸಯನ್ನ |
| ಮುಂಡಾಸಿ | ಪಟಕಾ | ರುಮಾಲ |
| ಕಳ್ಳಿಗ | ಕಳ್ಳ್ | ಜಿವಾಳ(ರಕ್ತಬರುವುದು) |
| ಝುರಿಭಾಂಯ್ | ಭಾರಂಭಾಯಿ | ಭಾರಂಭಾಯಿ(ಬಾವಿ) |
| ಅಟಿ | ಅಟಿ | ಯಟಿ(ಹೆಣಿ) |
| ಲೀಲಾ | ನೀಲ | ಲೀಲಾ(ಲೀಲೆ) |
| ಗಾಯ್‌ಮಾಳ | ಗಾಯ್‌ಮಾಳ | ಪಡಕ್(N.A) |
| ಝುರ್ಪಿ | ಜರಿಯ | ಝುರ್ಪಿ(ಜಲೆ) |
| - | ಪರಿಸಿತಿ | - |
| - | ಥಾಪನಾ | ಉದ್ಘಾಟನ(ಸ್ಥಾಪನೆ) |
| ದಮ್‌ಹಿಡಿ | ನಿಂದುರ | ದಮ್(ತಡೆ) |
| ಅಟಾಟಿ | ಅಟಾಟಿ | ಅಟಾಟಿ(ಅವಸರ) |
| ಕನ್ನಡಿ | ಅರಸಿ | ಅರ್ಸಿ |
| ನಿಂಬಿ | ನಿಂಬಿ | ಲಿಂಬಿ |
| ಮೆಟ್ | ಜೋಡಾ | ಜೋಡ |
| ಸಿನ್ಯಾ | - | - |
| ತೆಲಿದಿಂಬಿ | ತೆಲಗುಂಬಿ | ದಿಂಬಿ |
| ಬಾಜು | ಬಾಜಿಗಿ | ಬಲ್ಲಿ (ಹತ್ತಿರ) |
| ಖರೆ | ಖರಟಕೆ | ಖರ್ಪನ್(ಆದರೆ) |
| ಕೌದಿ | ಖೌದಿ | ಖೌಂದಿ |
| ನೆಪ್ಪು | ನ್ಯನಪು | ನೆಂಪು |
| ಬೆಳಗಡಿ | ಬೆಳಗಡ್ಡಿ | ಬೆಳಗಡ್ಡಿ |
| ತಗ್ಗು | ತಗ್ಗು | ತೆಗ್ಗು |
| ಡಬ್ರಿ | ಡೊಬ್ರ | ಡ್ಬೊಬ್ರಿ |

| ಲಿಂಗಾಯತರು | ಮಧ್ಯಮವರ್ಗದವರು | ಹೊಲೆಮಾದಿಗರು |
|---|---|---|
| ಬೀಜ | ಬೀಜಾ | ಭೀಜ-ಬೀಂಜಾ |
| ಕೊಟ್ಟ | ಕೊಟ್ಟ | ಕ್ವೊಟ್ಟ |
| ದೀಪಾ | ಚಿಮಣಿ | ಧೀಪಾ/ಚಿಮ್ನಿ |
| ಡೆಲೋಜಿ | ಢೊಲೋಜಾ | ಡೊಲೊಜಿ |
| ಹೊಂಕುಳು | ಹೊಕ್ಕುಳು | ಹೊಂಕುಳ್ |
| ಝಾಡು | ಝಾಡು | ಸೊಡ್ಡು |
| ಕಡ್ಡಿ | ಕಡ್ಡಿ | ಖಡ್ಡಿ |
| ಕಾಯ್ | ಕಾಯ್ | ಕ್ಯಾಯ್ |
| ನವುಲ | ನೌವುಲ್ | ನೌವುಲ್ |
| ಲಗ್ಗುಣ | ಲಗ್ಗುಣ | ಮದಿ/ಮೊದಿ |

| ಶಿಷ್ಟಕನ್ನಡ | ಲಿಂಗಾಯತ | ಮಧ್ಯಮವರ್ಗ | ಹೊಲೆಮಾದಿಗರು |
|---|---|---|---|
| ಉಂಗುಷ್ಟ | ಉಂಗುಟ್ | - | - |
| ಜೆಡೆ | ಜೆಡಿ | ಝುಟ್ಟಾ | ಝುಟ್ಟಾ/ಝುಪ್ರಿ |
| ಆಯುಷ್ಯ | ಆಯುಷ್ | ಆಯಿಸ್ | ಆಯಿಸ್ |
| ಕುಳಿತ | ಕುಂತ | ಕುಂತ | ಖುಂತ |
| ಸಂಗತ | ಶಂಗ್ಯಾ | ಸಂಗ್ಯ್ತ | ಸಂಗಾಟ್ |
| ವಿಧಿ | ಇದಿ | ಇದಿ | ಇದಿ |

| ಲಿಂಗಾಯತರು | ಇತರರು |
|---|---|
| ತಿನ್ರಿ | ತಿನುರಿ |
| ಕೊಂಡ್ರ | ಕೊಂಡುರ್ |
| ಕುಂತ್ರ | ಖಂತೂರ |
| ಎದ್ರ | ಎದ್ದೂರ್ |
| ಇದ್ರ | ಇದ್ದೂರ |
| ಬರ್‌ದ್ರ | ಬರ್ದೂರ |

| | |
|---|---|
| ಓದಿದ್ರು | ಓದ್ದೂರ್ |
| ಕೊಟ್ರು | ಕೊಟ್ಟೂರ |
| ಹೊಂಟ್ರು | ಹೊಂಟೂರ |
| ಹಡದ್ರು | ಹಡದುರ್ |
| ನಿಂತ್ರು | ನಿಂತೂರ್ |

ಸಾಮಾಜಿಕ ಭಾಷ್ಯಾ ಪ್ರಭೇದಗಳನ್ನು ಕುರಿತು ಚರ್ಚಿಸುವಾಗ ಮುಖ್ಯವಾಗಿ ನಮ್ಮೆದುರಿಗೆ ನಿಲ್ಲುವದೇನೆಂದರೆ ಏಕವಚನ, ಬಹುವಚನ. ಬಹುವಚನಗಳೆಲ್ಲ ಮೇಲ್ವರ್ಗದವರಿಗೆ, ಏಕವಚನಗಳೆಲ್ಲ ಕೆಳವರ್ಗದವರಿಗೆ ಎಂದು. ಹೌದು ಇದರಲ್ಲಿ ಸಂಶಯವಿಲ್ಲ. ಈ ಹಿನ್ನೆಲೆಯಲ್ಲಿ ಮರಾಠಿ ಪ್ರಭಾವದ 'ಅಗ', 'ಏಗ' ಪದಗಳು ಬೀದರ ಕನ್ನಡದಲ್ಲಿ ನುಸುಳಿ ಬಂದ ವಿಷಯವನ್ನು ಇಲ್ಲಿ ಚರ್ಚಿಸಲಾಗಿದೆ. ಮಧ್ಯ ಕರ್ನಾಟಕದ ಕನ್ನಡದ 'ಲೆ' ಎಂಬಲ್ಲಿ ಬಳಕೆಯಾಗುತ್ತದೆ. ಅಲ್ಲಿಯ 'ಲೆ' ಇಲ್ಲಿ 'ಗ'ವಾಗಿದೆ. ಗಂಡ ಹೆಂಡತಿಯನ್ನು ಮಾತನಾಡಿಸುವಾಗ 'ಗ' ಧ್ವನಿಮಾದೊಂದಿಗೆ ಮಾತುಕತೆ ಮುಂದುವರೆಯುತ್ತದೆ.

| | | |
|---|---|---|
| ಉದಾ : | ಬಾಗಲಕ್ಷ್ಮೀ | ba:ga laxmI |
| | ಹೋಗ ಲಕ್ಷ್ಮೀ | bo:ga laxmI |
| | ನೀರ್ಕುಡುಗ ಲಕ್ಷ್ಮೀ | ni:rkuḍuga laxmI |
| | ರೊಟ್ಟಿ ಕುಡುಗಲಕ್ಷ್ಮೀ | rottima:ḍga laxmI |

ಹಿರಿಯರು ಕಿರಿಯರಿಗೆ 'ಗ' ಪ್ರತ್ಯಯ ಬಳಸಿ ಮಾತನಾಡಿಸುತ್ತಾರೆ. ಮೇಲ್ವರ್ಗದವರು ಕೆಳವರ್ಗದವರನ್ನು 'ಗ' ಪ್ರತ್ಯಯದೊಂದಿಗೆ ಮಾತನಾಡಿಸುತ್ತಾರೆ. ಈ ರೂಪ ಹೊಲೆಮಾದಿಗರಲ್ಲಿ, ಮಧ್ಯಮ ವರ್ಗದವರಲ್ಲಿ ಹೆಚ್ಚು ಬಳಕೆಯಲ್ಲಿದೆ. ಆದರೆ ಹೆಂಡತಿ ಗಂಡನನ್ನು ಹೇಳುವಂತಿಲ್ಲ 'ಬಾರೊ' ಪುಲ್ಲಿಂಗವನ್ನು ಸೂಚಿಸುವ ಆಕೃತಿಮಾ. ಹಿರಿಯ ಪುರುಷರು ಸ್ತ್ರೀಯರು ಕಿರಿಯರನ್ನು ಮಕ್ಕಳನ್ನು ಮಾತನಾಡಿಸುವಾಗ ಬಾರೊ ಎಂಬ ಆಕೃತಿಮಾ ಬಳಸುತ್ತಾರೆ. ಈ ಪ್ರಭೇದ ಕೆಳವರ್ಗದವರಲ್ಲಿ ಹಿರಿಯ ಕಿರಿಯರೆನ್ನದೆ ಬಳಕೆಯಾಗುತ್ತದೆ.

| | | | |
|---|---|---|---|
| ಉದಾ : | ಬಾರೊಯಪ್ಪಾ | ba:royappa: | |
| | ಬಾರೊ ಮುತ್ಯ | ba:ro mutE | |
| | ಬಾರೊ ಯಣ್ಣ | ba:ro yaṇṇa | |
| | ಬಾರೊ ತಮ್ಮ | ba:ro tamma: | |
| | ಬಾರೊ ಮಮ್ಮ | ba:ro mamma: | ಇತ್ಯಾದಿ |

ಮಧ್ಯಮ ವರ್ಗದವರು ಬಾರೊ ಎಂದು ಕೆಳಜಾತಿಯ ಹಿರಿಯನಿಗೆ ಮಾತನಾಡಿಸಿದರೆ ಬಹಳ ಗೌರವ ಸೂಚಿಸಿದಂತೆ. ಮೇಲ್ವರ್ಗದವರಾಗಲಿ ಮಧ್ಯಮ ವರ್ಗದವರಾಗಲಿ ಕಿರಿಯರು, ಕೆಳವರ್ಗದವರನ್ನು ಏನೋ ಒಂದು ಬಹಳ ಗೌರವ ಕೊಟ್ಟಂತೆ 'ಬಾರೊ' ಎಂದು ಕರೆದಾಗ ಆಗಲಿ 'ತೊಕೊರೊ' ಎಂದು ಕೊಡುವಾಗ ಆಗಲಿ ವಯಸ್ಸಿಗೆ ಯಾವ ನಿರ್ಭಧವಿಲ್ಲ. ಸಂಬಂಧವಾಚಿ ಪದಗಳಾದ ಯಪ್ಪಾ, ಮುತ್ಯಾ ಯಣ, ತಮ್ಮ, ಮಮ್ಮ, ಪದಗಳು ಬಳಸುವುದಿಲ್ಲ. ಇದು ಅವರವರ ಜಾತಿಯ ಹಿರಿಯರಿಗೆ ಕೊಡುವ ಗೌರವ ಎಂಬಂತೆ ಅವರವರ ಜಾತಿಯವರೊಡನೆ ಮಾತನ್ನಾಡುವಾಗ ಬಳಸಲಾಗುತ್ತದೆ. ತಂದೆಗೆ ವಯಸ್ಸಿನಲ್ಲಿ ಸಣ್ಣವನಿದ್ದರೆ, ಕಾಕ, ಸ್ವಲ್ಪ ಹಿರಿಯನಿದ್ದರೆ ದೊಡ್ಡಪ್ಪನೊ, ಮಮ್ಮನೊ ಬಹಳ ಹಿರಿಯನಿಗೆ ಮುತ್ಯ ಎನ್ನುವ ಪದಗಳೂ ಬೀದರ ಕನ್ನಡದಲ್ಲಿ ಬಳಕೆಯಲ್ಲಿವೆ. ಆದರೆ ಈ ಪದಗಳನ್ನು ಬಳಸಿ ಕೆಳವರ್ಗದವರು ಮೇಲ್ವರ್ಗದವರನ್ನು ಹೇಳುವಂತಿಲ್ಲ. ಕೆಳಜಾತಿಯವರು ತಮ್ಮ ಜಾತಿಯವರೊಂದಿಗೆ ಮಾತನಾಡುವಾಗ ಸಂಬಂಧ ಸೂಚಕ ಪದಗಳನ್ನುಪಯೋಗಿಸಿ ಮಾತನಾಡುವುದು ರೂಢಿಯಲ್ಲಿದೆ. ಅಷ್ಟೆಯಲ್ಲದೆ ತಮ್ಮ ತಮ್ಮ ಹಿರಿಯರಿಗೆ ಏಕವಚನ ಪದಸೂಚಿಗಳಾದ ಬಾರೊ, ಮೊಕೊರೊ, ಬಿಗಿರೊ, ಕುಡಿರೊ ಪದಗಳಿಂದ ಮಾತನಾಡಿಸುತ್ತಾರೆ.

| | |
|---|---|
| ಬಾರೊಯಪ್ಪ | ba:reyappa |
| ಮೊಕೊರ ಮುತ್ಯಾ | mokoro mutE |
| ಬೀಡಿ ಬಿಗಿರೊ ಯಣ್ಣಾ | bI:d bigiro yanna |
| ಚ್ಯಾಕುಡಿರೊ ಮಮ್ಮ | cekuḍiro momma |

ಬಹುವಚನ ಪದಸೂಚಿಯಾದ ಬರ್ರಿ, ಬರ್ಯೊ, ಅಂದರೆ 'ರೊ' ಧ್ವನಿಮಾ 'ರ್ರಿ', 'ರ್ಯೊ' ಎಂಬ ಪರಿವರ್ತನೆಯೊಂದಿಗೆ ಬಳಕೆಯಾಗುತ್ತದೆ. ರೆ, ರ, ನ, ನೆ, ಪ್ರತ್ಯಯಗಳು ಸ್ತ್ರೀ ಸೂಚಕ ಧ್ವನಿಮಾಗಳಾಗಿ, ಬಳಕೆಯಾಗುತ್ತವೆ. 'ನೊ' ಧ್ವನಿಮ ಪುಲ್ಲಿಂಗ ರೂಪಕ್ಕೆ ಬಳಕೆಯಾದೆ.

ಭಾಷೆಯಲ್ಲಿನ ಸಾಮಾಜಿಕ ಚಹರೆಯನ್ನು ಕೇವಲ ಭಾಷಿಕ ಪರಿಕರಗಳಿಂದಷ್ಟೇ ವಿವರಿಸುವುದು ಕಷ್ಟದ ಕೆಲಸ. ಒಂದೇ ಸಮಾಜದಲ್ಲಿ ಜೀವಿಸುವ ಜನರು ವಿವಿಧ ಜಾತಿ, ಧರ್ಮ ವೃತ್ತಿಗಳಿಗೆ ಸೇರಿರುತ್ತಾರೆ.

ಹಾಗೆಯೇ ಆ ಸಮಾಜದ ರಚನೆಯೊಳಗೆ ನಿರ್ವಹಿಸುವ ಜವಾಬ್ದಾರಿ ಕೆಲಸಗಳಿಗೆ ಅನುಗುಣವಾಗಿ ಬೇರೆ ಬೇರೆ ಅಂತಸ್ತುಗಳಲ್ಲಿರುತ್ತಾರೆ. ಸಾಮಾಜಿಕ ಹಿನ್ನಲೆಗೂ ಭಾಷೆಗೂ ಇರುವ ಸಂಬಂಧಗಳನ್ನು ಗುರುತಿಸುವುದು ಸಾಮಾಜಿಕ ಭಾಷಾ ಶಾಸ್ತ್ರದಲ್ಲಿ ನಡೆದಿರುವ ಸಂಶೋಧನೆಯ ಫಲವಾಗಿರುತ್ತದೆ. ಮೇಲ್ವರ್ಗದವರು ಪುರಾಣ, ವಚನಗಳನ್ನು, ಓದುವುದು, ಹಾಡುವುದು, ಕೇಳುವುದು ಹೆಚ್ಚಾಗಿರುವುದರಿಂದ ಅವರ ಭಾಷೆಯ ಉಚ್ಚಾರಣೆ ಸ್ಪಷ್ಟ ಹಾಗೂ ಶಿಷ್ಟ ಭಾಷೆಗೆ ಹತ್ತಿರವಾಗಿರುತ್ತದೆ.

ಸಮುದಾಯದಲ್ಲಿ ಒಗಟ್ಟು ಅಂತರ, ಆತ್ಮೀಯತೆ ಸಂಪ್ರದಾಯಗಳನ್ನು ಗುರುತಿಸುವ ಅಂಶಗಳೆಂದರೆ ಒಂದು ಪ್ರಭೇದದಿಂದ ಇನ್ನೊಂದು ಪ್ರಭೇದಕ್ಕೆ ಜಿಗಿಯುವುದು.

ಒಂದು ಭಾಷೆಯಲ್ಲಿ ಎರಡು ಸಂಪೂರ್ಣ ವಿಭಿನ್ನ ಪ್ರಭೇದಗಳು ಬಳಕೆಯಲ್ಲಿದ್ದು ಅವು ಸಾಮಾಜಿಕ ರಚನೆಯನ್ನು ಗುರುತಿಸುವ ಅಂಶಗಳಾಗಿದ್ದಾಗ ಎರಡೂ ಪ್ರಭೇದಗಳೂ ಸಹವರ್ತಿಗಳಾಗಿ ಬಳಕೆಯಲ್ಲಿರುತ್ತವೆ. ಈ ರೀತಿಯ ದ್ವಿಸ್ವರತೆಯ ಪರಿಸ್ಥಿತಿಯು ತುಂಬಾ ವ್ಯಾಪಾಕವಾಗಿದೆ.

| ಲಿಂಗಾಯತ್ | ಹೊಲೆಮಾದಿಗರು |
|---|---|
| ಗ್ವಾಡಿ | ಘ್ವಾಡಿ |
| ಕಟ್ಗಿ | ಖಟ್ಕಿ |
| ಲಂಗಾ | ಫಡಕಿ |
| ಕೌದಿ | ಖೌದಿ\ಖೌಂದಿ |
| ಹಾಸ್ಕಿ | ಗೋಡ್ಡಿ |
| ಬೀಜ | ಭೀಜ\ಭೀಂಜಾ |

ಈ ಭಾಷಾ ಸಮುದಾಯಗಳು ಉನ್ನತ ಮತ್ತು ಕೆಳ ಎಂಬ ಭೇದವನ್ನು ಗುರುತಿಸಲಾಗಿದೆ. ಉನ್ನತ ಮತ್ತು ಕೆಳಪ್ರಭೇದಗಳ ನಡುವಿನ ಭೇದವು ಕಾರ್ಯಾತ್ಮಕವಾಗಿ ಸಾಮಾನ್ಯವಾಗಿ ಸ್ಪಷ್ಟವಾಗಿದೆ.

ಲಿಂಗಾಯತ ಮತ್ತು ಹೊಲೆಮಾದಿಗರು ಧ್ವನಿಶಾಸ್ತ್ರ ವ್ಯಾಕರಣ ಮತ್ತು ಪದಕೋಶಗಳಲ್ಲಿ ಪ್ರದರ್ಶಿಸುತ್ತವೆ. ಇದಕ್ಕೆ ಸಾರಾಸಗಟು ಉದಾಹರಣೆಗಳು ಕನ್ನಡದಲ್ಲಿ ದೊರಕುವುದಿಲ್ಲ. ಆದರೆ ಮೇಲೆ ಗುರುತಿಸಲಾದ ಉದಾಹರಣೆಗಳು ಕನ್ನಡದಲ್ಲಿ ಬಹಳ ದೊರಕುತ್ತವೆ. ಕನ್ನಡದಲ್ಲಿ ಇಂತಹ ಕೆಲವು ಉದಾಹರಣೆಗಳನ್ನು ನೋಡಬೇಕೆಂದರೆ ಮದುವೆ ಸಂದರ್ಭದಲ್ಲಿ ಗಂಡು, ಹೆಣ್ಣಿಗೆ, ತಾಳಿ, ಅಕ್ಕಿ ಹಾಲು ಇವುಗಳೆಲ್ಲಕ್ಕೂ ಸಾಮಾನ್ಯ ಸಂದಭರದ ಹೆಸರನಲ್ಲದೇ ಬೇರೆ ಬೇರೆ ಹೆಸರಿನಿಂದ ಗುರುತಿಸುವುದು

‘ಅಕ್ಕ ಕೇಳವ್ವ ಅಕ್ಕಯ್ಯ ಕೇಳಯ್ಯ, ನಾನೊಂದು ಕನಸಕಂಡೆ!
ಅಕ್ಕಿಯಡಕೆ ಓಲೆ ತೆಂಗಿನಕಾಯ ಕಂಡೆ!’’

ಇಲ್ಲಿ ಬರುವ ಓಲೆ, ತೆಂಗು, ಅಕ್ಕಿ, ಅಡಿಕೆ, ಇವೆಲ್ಲ ಮಂಗಳಕರ ಎಂಬ ಭಾವನೆ ಮದುವೆ ಸಂದರ್ಭದಲ್ಲಿ ತೆಗೆದುಕೊಂಡರೆ ಸಾಮಾನ್ಯ ಅರ್ಥದಲ್ಲಿ ದಿನನಿತ್ಯದ ಬದುಕಿನ ಖಾದ್ಯಗಳು ಉನ್ನತ ಭಾಷೆಯ ಪ್ರಭೇದವು ಯಾವಾಗಲೂ ಸುಂದರ ಮತ್ತು ತರ್ಕಬದ್ಧವಾದದ್ದು ಎಂಬ ನಂಬಿಕೆಯಿದೆ. ಆದರೆ ವ್ಯವಹಾರದಲ್ಲಿ ಈ ರೀತಿ ಮಾತನಾಡಿದರೆ ಕೃತಕ ಎನಿಸುತ್ತದೆ.

ಕನ್ನಡ ಭಾಷೆಯನ್ನನುಲಕ್ಷಿಸಿದರೆ ಬರಹಗಳಲ್ಲಿ ಈ ತರಹದ ಮಾದರಿಗಳನ್ನು ನೋಡಬಹುದು. ಉದಾ : ಮನ್ಸ್ಯಾ, ಗಣುಸ್, ಗಣುಸ್ಮನ್ಸ್ಯಾ, ವ್ಯಕ್ತಿ, ಆಳ್ಮನ್ಸ್ಯಾ, ಪುರಸ್ಯ ಈ ಎಲ್ಲ ಪದಗಳು ಪುಲ್ಲಿಂಗ ಏಕವಚನವನ್ನೇ ಸೂಚಿಸುತ್ತವೆ. ಬಹು ಹಿಂದಿನ ಕಾಲದಿಂದ ಮಾನವ ಮನುಷ್ಯ ಪದ ಬಂದರೂ ಮಾನವಳು, ಮನುಷ್ಯಳು ಎಂದು ಯಾವಕಡೆ ಬಳಕೆಯಾಗಿಲ್ಲ. ಎಂದು ಡಾ.ಡಿ.ಪಾಂಡುರಂಗಬಾಬು ಚಿಂತಿಸುತ್ತಾರೆ. ಹೌದು ಸ್ತ್ರೀ-ಪುರುಷ ಎಂದು ಬಳಕೆಯಗಿದೆ. ಈ ವಿಷಯದ ಬಗ್ಗೆ ಇನ್ನು ಚಿಂತಿಸಬೇಕಾಗಿದೆ.

ಒಟ್ಟಿನಲ್ಲಿ ಹೇಳುವುದಾದರೆ ಗ್ರಾಂಥಿಕ ಭಾಷೆಗೂ ಅಡುನುಡಿಗು ಬಹಳ ವ್ಯತ್ಯಾಸವಿದೆ. ಅದರಲ್ಲಿಯೂ ಆಡುನುಡಿಗಳ ಸಾಮಾಜಿಕ ಹಾಗೂ ಪ್ರಾದೇಶಿಕ ಬದಲಾವಣೆ ಕಾಣುವುದು ಸಹಜ ಏಕೆ ಹೀಗೆ ಎಂಬುದೇ ಈ ಅಧ್ಯಯನದ ಉದ್ದೇಶವಾಗಿದೆ.

ಮ : ಇದು ಕನ್ನಡದ ವ್ಯಂಜನ. ಅನುನಾಸಿಕವು ಹೌದು. ಪವರ್ಗದ ಯಾವುದೇ ಧ್ವನಿಯ ಮೊದಲು ಬಿಂದು ಬಂದರೆ ಅನುನಾಸಿಕದ ಹೊಣೆ ನಿರ್ವಹಿಸುತ್ತದೆ.

ಉದಾ : ಪಂಪ - ಪಮ್ಪ
ಕಂಪು - ಕಮ್ಪು
ಅಂಬು - ಅಮ್ಬು

ಬೀದರ ಕನ್ನಡದ ಸಾಮಾಜಿಕ ಪ್ರಭೇದಗಳಲ್ಲಿ 'ಮ' ಎನ್ನುವ ಧ್ವನಿ 'ಮತ್ತು' ಎನ್ನುವ ಆಕೃತಿಮಾದ ಕೆಲಸವನ್ನು ನಿರ್ವಹಿಸುತ್ತದೆ. ಮಧ್ಯಮವರ್ಗದವರು, ಹಾಗೂ ಕೆಳವರ್ಗದವರು ಈ ಧ್ವನಿಯನ್ನು ಬಳಸುತ್ತಾರೆ. ಆದರೆ ಹೆಚ್ಚಾಗಿ ಕೆಳವರ್ಗದವರಲ್ಲಿ ಭಾಲ್ಕಿ ನಗರದ ಅಶೋಕನಗರ ಹಾಗೂ ಭೀಮ ನಗರದ ಸ್ತ್ರೀಯರ ವಿಶೇಷ ಧ್ವನಿಯಾಗಿದೆ. ಇದು ವಿದ್ಯಾವಂತರಲ್ಲಿಲ್ಲ, ಅವಿದ್ಯಾವಂತರ ಹಾಗೂ ವಯಸ್ಕಾರ ಬಾಯಲ್ಲಿ ಹೆಚ್ಚು ಪುಟಿಯುತ್ತದೆ.

ಇಬ್ಬರು ಸ್ತ್ರೀಯರಿಗೆ ಎಲ್ಲೊ ಹೋಗುವುದಿತ್ತು ಎಂದು ಇಟ್ಟುಕೊಳ್ಳೋಣ. ಆದರೆ ಒಬ್ಬಾಕೆ ಬಂದು ಉತ್ಸುಕತೆ ತೋರುವುದು ಬಿಟ್ಟು ನಿರುತ್ಸಾಹ ತೋರಿ ಬರದೆ ಇರುತ್ತಾಳೆ. ಆಗ ಆಕೆಗಾಗಿ ಕಾಯುತ್ತಾ ಕುಳಿತ ಸ್ತ್ರೀಯು ಮರುದಿವಸ ಕೇಳುತ್ತಾಳೆ.

"ಯಾಕss ಇಟಾ ನಿನ್ನರ್ತಾ ಅಂದಿss ಯಾಕ್ಬಂದಿಲಾss ಧಂಧ್ಯಾ ತೋಲಿತ್ಯಾನೂ'? ಅಂದಾಗ ಆಕೆ 'ಧಂಧ್ಯಾಯಾನ್ ದೌಡ್ ದೌಡ್ ಮಾಡಿ ಮುಗ್ಸಿದಾ' ಎಂದು ಇನ್ನು ಏನೋ ಹೇಳುವವಳೀದ್ದಾಳೆ ಆಗ ಮತ್ತೊಬ್ಬಾಕೆ ಒಳಗೆ ಬಾಯಿ ಹಾಕಿ' ಧಂಧ್ಯಾ ಆದುರ್ 'ಮ' ಬರಾಣಿತ್ತೊ, ಆಗ ಆಕೆ 'ಬರ್ಲಾಕ್ಯಾನ್ಸರೆಗ ನಂಪಾರುನಪ್ ಬರಾವ್ ಇದ್ದುನ್ಗಾss ಸಿದ್ದಾ'. ಅಂದಾಗ 'ಮ' ನಿನ್ಗಂಡ ಯಾನ್ಮಾಡ್ತಿದ? ಅನ್ನುತ್ತಾಳೆ

ಬರ್ತಿದಾ 'ಮ' ಖರೆ ಯಾಕೊ ಬರ್ಭ್ಯಾಡ್ದು ಅಂತಂದು ಬಂದಿಲೆಯವಾ ಆಗ ಸಿದ್ದಾ 'ಮ' ಧೊರಿ ನಿಂಗ್ ಕೇಳೇ ಕೇಳ್ದಾ ಅಂದಾಗ ಇಟಾ 'ಮ' ಯಾನಲತಿನ್ನ ಬ್ಯೆ'' ಎಂದಳು (ಸಿದ್ದಾ, ಇಟಾ-ಸ್ತ್ರೀಯ ಹೆಸರುಗಳು). ಹೀಗಾಗಿ 'ಮ' ಧ್ವನಿ 'ಮತ್ತು ಧ್ವನಿಯ ಕೆಲಸ ನಿರ್ವಹಿಸಿ ಸಂಭಾಷಣೆಯಲ್ಲಿ ಇಬ್ಬರ ಮಾತುಗಳಿಗೆ ಸೇತುವೆ ನಿರ್ಮಿಸುತ್ತದೆ. ಈ 'ಮ' ಭಾಲ್ಕಿ ತಾಲ್ಲೂಕಿನ ನಾಗರಾಳ, ಬೀರಿ(ಬಿ), ಬೀರಿ(ಕೆ) ಕೂಲ್ಡಿ ಗ್ರಾಮಗಳಲ್ಲಿ ಯಾವ ಸಾಮಾಜಿಕ ಪ್ರಭೇದವಿಲ್ಲದೆ ಬಳಕೆಯಾಗುತ್ತದೆ.

ಸಾಮಾಜಿಕ ಪ್ರಭೇದಗಳಲ್ಲಿ ಸಮನಾರ್ಥ ಶಬ್ದಗಳು ಒಂದೊಂದು ಸಮಾಜ ಒಂದೊಂದು ರೀತಿಯ ಸಮನಾರ್ಥ ಪದ ಬಳಸುತ್ತದೆ.

ಉದಾ : 'ಸಾಯು' ಪದಕ್ಕೆ

| | | |
|---|---|---|
| ಲಿಂಗೈಕ್ಯರಾದ್ರು | lingaIkEra:dru | ಲಿಂಗಾಯತರು |
| ಕೈಲಾಸಕ ಹೋದ್ರು | kaila:sak ho:dru | ಪ್ರತಿಷ್ಠಿತರು |
| ಮಹಾಪ್ರಸ್ಥಾನರಾದ್ರು | maha:prasta:na radru | ಬ್ರಾಹ್ಮಣರು |
| ಸತ್ಹೋದ | satho:da | ಹೊಲೆಮಾದಿಗರು |
| ಕೊಂಕ್ಕಂಡು\ಗೊಟುಕ್ ಅಂತು kokkãtu | | (ದನಕರುಗಳಿಗೆ) |

ಆಯಾ ಸಾಮಾಜಿಕ ಸ್ಥಾನಮಾನಗಳನ್ನುನುಸರಿಸಿ ಈ ಎಲ್ಲ ಸಮಾನಾರ್ಥಕಗಳು ಬಳಕೆಯಾಗುತ್ತವೆ. ಕೆಲವು ಸಮಾನಾರ್ಥಕಗಳ ಬಳಕೆಯ ಸಂದರ್ಭವನ್ನು ಗಮನಿಸಿದಾಗ ಅವು ಸಮಾನಾರ್ಥವನ್ನು ಕೊಡುವ ಬದಲು ಪೂರಕಾರ್ಥವನ್ನು ಕೊಡುತ್ತದೆ.

ಸ್ಥಳ/ಪ್ರದೇಶ

'ಖಳದಾಗ ಜ್ಯಾಗ ಖಾಲಿ ಅದ' (ಸ್ಥಳ)

khald:g JEga kha:li ada

'ಅಲ್ಲಿರಾ ಜಾಗ ನಮ್ದು' (ಪ್ರದೇಶ)

alliJra: JEga namdU

'ಆ ಜಾಗ ಹಾಂಗೆ ಬಿಟ್ಟಿ' (ಖಾಲಿಜಾಗ)

a:JEgahange biṭṭI

ಸಮಯ

'ಭತಮುರ್ಗಿದಿಂದ ಭಲ್ಕಿ ಎಡ್ ತಾಸಿನ ಹಾದಿ'(ಕಾಲಾವಧಿ)

'ದೋನ್ಪಾರ್ ಆಯಿತು ಬಂದಿಲೆ' (ಹೊತ್ತು)

'ಅವ್ಪುಂದ್ ಯಾಳಿ ಛಂದಿಲ್ಲ' (ದೈವ)

'ನಮಗ ಬೀ ಮೋಕಾ ಸಿಗ್ಲಿ ನೋಡಾರಿ' (ಅವಕಾಶ)

| ಭೇದಿ | ಬಳಸುವ ಪದ | ಸಾಮಾಜಿಕ ವರ್ಗ |
|---|---|---|
| | "ನನಗ ಭೇದಿ ಸುರು ಆಗಾದ" | ಬ್ರಾಹ್ಮಣ |
| | "ನನಗ ಮೈದಾನ ಹತ್ಯಾದ" | ಪ್ರತಿಷ್ಠಿತರು |
| | "ನನಗ ಹೊರಕಡಿ ಹತ್ಯಾದ" | ಲಿಂಗಾಯತ |
| | "ನಂಗ ಹೇಲ್ಗಿ ಹತ್ಯಾದ" | ಹೊಲೆಮಾದಿಗರು |

ಮೌಂಸ

| | | |
|---|---|---|
| khaṇḍa/Mouns | ಖಂಡ\ ಮಾಂಸ್ | ಬ್ರಾಹ್ಮಣ |
| khaṇḍ/Matan | ಖಂಡ\ಮಟನ್ | ಪ್ರತಿಷ್ಠಿತರು |
| khaṇḍ | ಖಂಡ | ಲಿಂಗಾಯತ |
| palE/Matan | ಪಲ್ಯ\ಮಟನ | ಹೊಲೆಮಾದಿಗರು |

ರಕ್ತ

| | | |
|---|---|---|
| ರಕ್ತಾ | rakta | ಬ್ರಾಹ್ಮಣರು |
| ರಗ್ತಾ | ragta: | ಪ್ರತಿಷ್ಠಿತರು |
| ರಗ್ತಾ | ragta: | ಲಿಂಗಾಯತರು |
| ನೆತ್ತುರು | nettur: | ಹೊಲೆಮಾದಿಗರು |

ವಯಸ್ಸಿಗೆ ಬಂದಾಕೆ

| | | |
|---|---|---|
| ಧೊಡ್ಡುಡಗಿ ಆಗ್ಯಾಳ | dhoḍhudgi a:gEl | ಬ್ರಾಹ್ಮಣ |
| ಮೈನೆರೆದ್ರಾಳ | mainerda:la | ಕಾರ್ಮಿಕವರ್ಗ |
| ಧೊಡ್ಡಾಕಿ ಆಗ್ಯಾಳ | dhoḍḍa:kia:gEl | ಲಿಂಗಾಯತ |
| ಮೈ ನೆರದಾಳ್ | mainerda:l | ಹೊಲೆಮಾದಿಗರು |

ತುಚ್ಛ ಮಾತಿನಲ್ಲಿ ಸಾಮಾನ್ಯವಾಗಿ ಹುಡಗುರು 'ಕುಳ್ಳಿ ಒಡ್ದುದ'ದ ಎಂದು ಅಪಹಾಸ್ಯ ಮಾಡುತ್ತಾರೆ.

ವಿವಾಹ

| | | |
|---|---|---|
| ಲಗ್ಗುಣ | laggun | ಬ್ರಾಹ್ಮಣರು |
| ವಿವಾಹ | viva:ha | ಪ್ರತಿಷ್ಠಿತರು |
| ಲಗ್ಗುಣ್ | laggun | ಲಿಂಗಾಯತರು |
| ಮದಿ | madI | ಹೊಲೆಮಾದಿಗರು |

| ಶಿಷ್ಟ ಕನ್ನಡ | ಬ್ರಾಹ್ಮಣ | ವಿದ್ಯಾವಂತರು | ಲಿಂಗಾಯತರು | ಹೊಲೆಮಾದಿಗರು |
|---|---|---|---|---|
| ಗೋಡೆ | ಗ್ವಾಡಿ | ಗ್ವಾಡಿ | ಗ್ವಾಡಿ | ಘ್ವಾಡಿ\ಘೋಡಿ |
| ಕೂದಲು | ಕೂದ್ಲು | ಕೂದುಲ್ | ಕೂದ್ಲು | ಕೂದುಲ್\ ಕೂಂದುಲ್ |
| ಬಾವಿ | ಬಾವಿ | ಬಾವಿ | ಭಾಯ್ | ಭಾಂಯ್ |
| ಖಂಡ | ಖಂಡಾ | ಮಟನ್ | ಖಂಡಾ | ಪಲ್ಯ\ಮಟನ್\ಮಟಣ್ |
| ಮಲವಿಸರ್ಜನೆ | ಹೊರ್ಕ್ | ಸಂಡಾಸ್ | ತೆಮ್ಗಿತಗೊಂಡು | ಹೇಳಾಕ್\ ಸಂಡಾಸ್ |
| ಉಚ್ಚೆ | ಕಾಲ್ಮಡಿ | ಏಕಿ\ಒಂದುಕ್ | ಕಾಲ್ಮಡಿ | ಉಚ್ಚೆ |
| ಹೆಂಡತಿಯ ಸಹೋದರ | ಮೈದುನ | ಭಾವಜಿ | ಭಾವ್ಮಯ್ದುನ್ | ಭಾವ |
| ಹೆಂಡತಿ | ಮನ್ಯಾಕಿ | ಮಿಸೆಸ್ | ಮನ್ಯಾಕಿ | ಹೆಣ್ತಿ\ಹೆಂತಿ |
| ನೆಂಟರು | ಬೀಗುರು | - | ನೆಂಟ್ರು | ನೆಂಟರ್ |
| ಅಭ್ಯಾಸ | - | ಹ್ಯಾಬಿಟ್ | ರಾಟಿ | ರ್ಹಾಟಿ |
| ಹೊದ್ದಿಕೊಳ್ಳುವದು | - | ಹೊಚ್‌ಕೊಳ್ಳಮಾರು | ಧುಪಾಟಿ | ಛತರಂಜಿ |
| ಬಾಗಿಲು | ಬಾಗ್ಲಾ | ಬಾಗ್ಲು | ಚೌಕಟ\ಬಾಗಿಲ್ | ಬಾಕುಲ್ |
| ಕಿಟಕಿ | ಕಿಟಕಿ | - | ಖಿಡ್ಕಿ | ಖಿಡಕಿ |
| ಬೆರಳು | ಬೊಳ್ | ಬೆಳ್ | ಬೊಳ್\ಬೊಟ್ | ಬಟ್ |
| ಬಾಚಣಕಿ | - | ಕೋಂಬ್ | ಹಣಗಿ | ಬಾಚುಣ್ಕಿ |
| ಬೋಳ್ | ಬೋಳ್ | ಬೋಡಾ | ಬೋಡುಕ | ಹೊಂಡ್ಯಾ |
| ಕಟ್ಟಿಗೆ | ಕಟ್ಕಿ | ಕಟ್ಕಿ | ಹುರಿಗಿಚ್ | ಖಟ್ಕಿ |
| ಅಭ್ಯಾಸಮಾಡು | ಓದುತಾನ | ಸ್ಟಡಿ | ಓದ್ಲಾತಾನ | ಬರಿಲಾತಾನ |
| ತಿಗ | ತಿಕ | ತಿಕ | ತಿಗ | ಕುಡಿತಿಕಾ |
| ಹೆಂಡತಿ ತಂಗಿಯ ಗಂಡ | ಸಡಕ್ | ಸಾಡು | ಸಡಕ | ಸಾಡು |
| ಲಂಗ | ಲಂಗ | ಲಂಗಾ | ಲಂಗಾ | ಫಡಕಿ |
| ಕುಪ್ಪಸ | ಕುಬ್ಸಾ | ಜಾಕಿಟ್ | ಕುಬ್ಸಾ | ಪೋಲ್ಕ |
| ಶವಸಂಸ್ಕಾರ | ಮೊಕ್ಷಕ | ಶವಸಂಸ್ಕಾರ | ಮಣ್ಣಿಗಿ | ಮುಣ್ಣಿಗಿ |
| ತಾಳಿಗೆ | ತಾಳ್ಗಿ | ತಾಳ್ಕಿ | ಕಾಳ್ಗಿ | ಟಾಳ್ಕಿ |

| | | | | |
|---|---|---|---|---|
| ಕನ್ನಡಿ | ಕನ್ನಡಿ | ಕನ್‌ಡಿ | ಕನಡಿ | ಆರ್ಸಿ |
| - | ನಿಕ್ಕರ | ಹಂಡರಬಟ್ | ಚೆಡ್ಡಿ | ಚೊಲಾಣಿ |
| ನಾಡಿ | - | ನಾಡಿ | ನಾಡಿ | ಲಾಡಿ |
| ಕೆಂಪಗೆ | ಕೆಂಪಗ | ಕೆಂಪುದು | ಖ್ಯಾಂಪಂದು | ಖೆಂಪಾನ |
| ಕರಿದು | ಕರಿದು | ಕರ್ರಗ | ಕರ್ರಂದು | ಖರ್ರರಂದು |
| ಮುನಿ | ಮುನುದಾನ | ಮುಣುದಾನ | ಮುಣದಾನ | ಮುಣ್ಸ್ಯಾನ್ |
| ಪಲ್ಯೆ | ಗಟಪಲ್ಯ | ಘುಟ್ಯಾನ ಸಾರ | ಘುಟಪಲ್ಯ | ಘುಟ್ಯ್ಯಾನ್ ಬ್ಯಾಳಿ |
| ಗಾಸ್ಲೇಟ್ | ರಾಕೇಲ್\ಗ್ಯಾಸ್ | ಘಾಸ್ಲೆಟ್ | ಗಾಸ್ಪೆಲ್ | ಘಾಲಸೆಟ |
| ಲೋಲಕ | - | ಝುಮ್ಮಾ | ಝುಮ್ಮಾ | ಝುಬ್ಬೆ |
| ಬಂಗಾರಸರಪಳಿ | ಲ್ಯಾಕಿಟ್ | ನೆಕ್ಲೆಸ್ | ಲ್ಯಾಕಿಟ್ | ಲಾಕಿಟ್ |
| ದಿಂಬ | ದಿಂಬಿ | ದಿಂಬಿ | ಡಿಂಬಿ | ತೆಲಿಗುಂಬಿ |
| ಹೆಂಡತಿಯನ್ನು ಬಿಡುವುದು | - | ಬಿಟ್ಟ | ಫರಾಗತಿ | ಫರಾಕತಿ |
| ಹೆಬ್ಬಾಗಿಲ | ಹೆಬ್ಬಾಗಿಲು | ಹೊರಬಾಗಿಲ | ಹೊರಬಾಗಿಲು | ಧೊಡಬಾಗಿಲು |
| ಲಕ್ಷ್ಮಿ\ಸಿರಿ | ಲಕ್ಷ್ಮಿ | ಸಂಪತು | ಲಕ್ಷಿಮಿ | ಬರ್ಕತ್ |
| ಸಿಪ್ಪೆ | ಸಪ್ಪಿ | ಸೊಪ್ಪಿ | ಸಪ್ಪಿ | ಹಿಪ್ಪಿ\ಸಪ್ಪಿ |
| ಮಾವಿನಹಣ್ಣು | ಮಾಯಿನ್ಕಾಯಿ | ಮಾಯಿನ್ಕಾಯಿ | ಮಾಯಿನ್ಕಾಯ್ | ಮಾನೆಕಾಯ್ |
| ಸೀತಾಫಲ | ಸೀತಾಫಳ | ಸಿತಾಫಲ್ಯ | ಸೀತಾಪಳ್ | ಸಿತಾಪುಳ್ |
| - | ಫುಡೆಪಲ್ಯ | ಫುಂಡೆಪಲ್ಯ . | ಫುಂಡಿಪಲ್ಯ | |
| ಬಿಡುವ | ಫುರ್ | ಸತ್ | ಫುರ್ಸತ್ತಿ | ಫುರ್ಸತಿ |
| ಬಹಳ | ಮಸ್ತಾ\ಭಾಳ್ | ಬೊಕ್ಕೂಳ | ಢಿಗಾರಿತಿಳಿ | ತೋಲ |
| ಬೇಳೆ | ಬ್ಯಾಳೆ | ಬ್ಯಾಳಿ | ಬ್ಯಾಳಿ | ಬ್ಯಾಳಿ\ಭ್ಯಾಳಿ |
| ದೇವರು | ದೇವ್ರು | ದೇವುರ್ | ದ್ಯಾವ್ರು | ದ್ಯಾವುರ್ |
| ಪ್ರೀತಿ | ಪ್ರೀತಿ | ಮಾಯ\ಪಿರ್ತಿ | ಮವ್\ಮಾಯಾ | |
| ಆರೋಗ್ಯ | ಆರಾಮ | ಆರಾಮ | ಅರಾಮ್ | |
| ಶಂಖ | ಶಂಕ | ಶಂಕ | ಸಂಕಾ | |

| | | | | |
|---|---|---|---|---|
| ಕಬ್ಬಿನಹಾಲು | ಕಬ್ಬಿನಹಾಲ್ | ಖಬ್ಬಿನಹಾಲು | ಖಬ್ಬಿನರಸ | |
| ನವಿಲು | ನವುಲು | ನೌವುಲ್ | ನೌಲು | |
| ಪಾಯಸ | ದೂದ್ ಖೀರ | ದೂದಖೀರ್ | ಹಾಲುಹುಗ್ಗಿ | |
| ಏಡಿ | ಎಂಡಿ | ಎಂಡಿ | ಖೆಕಡಿ | |
| ಮೊಸರು | ಮಸುರು | ಮಸ್ರ | ಮೊಸುರ\ಮಾಸುರ್ | |
| ಹಾಲುಕಾಯಿಸುವ | ಒಲೆ | ಹಾಲ್ವಾಳಿ | ಹತಾಳಿ | ಥಾಳಿ |
| ಹಾಸಿಗೆ | ಹಾಸಿಗಿ | ಹಾಸ್ಗಿ | ಹಾಸ್ಕಿ | |
| ಬಳುಳ್ಳಿ | ಬೆಳುಳಿ | ಬಳ್ಳುಳ್ಳಿ | ಬೆಳಗಡ್ಡಿ | ಬೆಳ್ಳಡ್ಡಿ |
| - | ಪುರ್ಕ್ | ಪೊಕ್ಕು | ಪಕ್ | ಫುನ್ಸಿ |
| - | - | ತಿಂಡಿ | ಕಚಲತುದ | ಬೆವುರು |
| ಬೆಯಿಸಿ | ಹುರಿ | ಹುರಿ | ಸುಡು | |
| ಜೋಳದ ಬೋನ | ಎಂಬುಲ್ ಬಾನ | ಜ್ವಾಳ್ದಾಬ್ನ | - | ಖಿಚಡಿ |
| ಹುಳಿಪಲ್ಯೆ | ಹುಳ್ಪಲ್ಯ | ಹುಳ್ಪಲ್ಯ | ಹುಳ್ಪಾಬ್ಯಳಿ | |
| ವಗ್ರಣ್ಣೆ | - | ಫಾಣಿ | ಪೋಣ್ಗಿ | |
| ಕರೆ | ಕರಿ | ಕರಿ | ತಾಳು | |
| ಸ್ನಾನ | ಸ್ನಾನ್ | ಝುಳಕಾ | ಮೈತೊಳ್ಕೊಮಾದು | |
| ಬಸವನಗುಡಿ | ಬಸವನಗುಡಿ | ಬಸವಣ್ಣನಗುಡಿ | ಬಸಣ್ಣದೇರುಗುಡಿ | |
| ಇಲಿ | ಇಲಿ\ಇಲ್ಬೆಪ್ | ಇಲ್ಬಪ್ | ಇಲ್ಬಬತ್ | |
| - | ಬಾಸುಣಕಿ | ಭಾಸುಣಕಿ | ಅರಸಿಣ್ | |
| ಮುಂಜಾನೆ | ಮುಂಜೆನ | ಮುಂಜೆಳಿ | ಮುಂಜಲಿ | |
| ಸಂಜೆ | ಸಂಜಿ | ಸಂಜಿ | ಥಂಜಿ | |
| ತಿಣಕು | ತಿಣುಕು | ತಿಣುಕು | ಟೆಣುಕು | |
| - | ಹೊಂಕಳ | ಹೊಂಕುಳ | ಹೊಕ್ಕುಳು | |
| - | ಭಂಡಿ | ಭಂಡಿ | ಗಾಡಿ | |
| ಚಕ್ರ | ಗಾಲಿ | ಫಾಲಿ | ಚಾಕ | |

| | | | | |
|---|---|---|---|---|
| ಜ್ವರ | - | ಉರಿ\ಜ್ವರ | ಜಡ | ಉರಿ |
| ಜೆಡೆ | ಹಿಂಡುಲು | ಹಿಂಡುಲು | ಮೇರಿ | |
| - | ಬಡತನ | ಬಡು | ಗರಿಬ್ | |
| ಬಾಳುವೆ | ಬಾಳ್ಯಾ | ಬಾಳ್ಯಾ | ಜಿಂದಗಾಣಿ | |
| ಲಟ್ಪಣಿಗೆ | - | ಬೆಲ್ಲುಣಗಿ | ಲಾಟನಕಿ | |
| ಸೆಗಣಿ | - | ಹೆಂಡ್ಯಾ | ಹೆಂಡಿ | |
| ಪ್ರಪಂಚ | ಪ್ರಪಂಚ್ | ಪರಪಂಚ\ಜಗತ್ಯ | ದುನ್ಯಾ | |
| ಅಂಗಡಿ | ಬಜಾರ | ಬಾಜಾರ | ಅಂಗ್ಡಿ | |
| ಚಿಕ್ಕದು | ಸಣದು | ಸಣ್ಣದು | ಶಣ್ಣದು | |
| ದೊಡ್ಡದು | ದೊಡದು | ಧೋಡದು | ದೊಡ್ಡುದು | |
| ಹಂಚು | ಹಂಚ | ಹೆಂಚ\ೀವಿ | ತವಿ | |
| ದೀಪ | ದೀಪ | ಧೀಪ | ಧೀಪಾ\ಚಿಮಣಿ | |
| ಎಮ್ಮೆ | ಎಮ್ಮಿ | ಎಮ್ಮಿ | ಯಮ್ಮಿ | |
| ಅಪ್ಪ | ಅಪ್ಪ | ಎಪ್ಪ | ಯಪ್ಪಾ | |
| ಅವ್ವ | ಅವ್ವ | ಎವ್ವ | ಯವ್ವಾ | |
| ಅಕ್ಕ | ಅಕ್ಕ | ಅಕ್ | ಯಕಾ | |
| ಎರಡು | ಎರ್ಡು | ಎಡ್ಡು | ಮಡ್ಡ | |
| ಹತ್ತು | ಹತ್ತು | ಹತ್ತು | ಧಾ\ದಸ್ | |
| ಹದಿನೈದ | ಹದಿನೈದು | ಪಂದ್ರಾ | ಪಂದ್ರಾ | |
| ಹದಿನೈದುದಿನ | ಹದ್ನೈದಿನ | ಪಂದ್ರಾ\ಹದೊಂದು | ಹದೊಂದು | |
| ಐದುಹತ್ತು | ಐಧತ್ತು | ಹತ್ತುಹದ್ನೈದು | ಧಾಪಂದ್ರಾ | |
| ಗೌಡರು | ಗೌಡ್ರು | ಗೌಡ್ರು | ಗೌಡುರ್\ | ಗೋಡುರ್ |
| ಗೌಡತಿ | ಗೌಡ್ತಿ | ಗೌಡ್ತಿ | ಗೋಡ್ತಿ | |
| ದೊರೆ | ದೊರಿ | ಧೊರಿ | ಧರಿ | |
| ದೊರೆತಿ | ದೊರ್ತಿ | ಧೊರ್ತಿ | ಧರ್ತಿ | |

| | | | | |
|---|---|---|---|---|
| ದೃಷ್ಟಿ | ದಿಟ್ಟಿ | ಧಿಟ್ಟಿ | ಧಿಟ್ಟಿ | |
| ಗುಳ್ | ಗುಳ್ | ಫುಳ್ | ಗುಳ್ | ಘುಳ್ |
| ಕಡಗ | ಕಡ್ಗ | ಕಡ್ಗ | ಖಡ್ಗ | |
| ಚೆಲುವೆ | ಚೆದರ | ಚೆದುರ | ಚೆದೂರ್ | ಛಂದ್ |
| ಹುಡುಗ | - | ಚೊಂದ್ | ಬಂದ್ | |
| ಹುಡುಗಿ | - | ಚೊಂದಿ | ಬಂದಿ | |
| ಹುಡುಗಿ | ಹುಡ್ಗಿ | ಪೋರಿ | ಪೋರಿ | |
| ಹುಡುಗ | ಹುಡುಗ | ಪೋರ್ | ಪಾರ | |
| ಕೌದಿ | ಕೌದಿ | ಕೌಂದಿ | ಖೌಂದಿ\ಖೌದಿ | |
| ದುರ್ಗುಟ್ಟೆ | ಗುರ್ | ಕಾಸಿ | ಘುರ್‌ಕಾಸಿ | ಘುರ್ಕಾಸಿ |
| ಕಂಬ | ಕಂಬ | ಖಂಬ | ಖೊಂಬ\ಖಂಬಾ | |
| ಏನು | ಏನು | ಏನು | ಯಾನು | ಯಾನು |
| ವೇಳೆ | ವೇಳಿ | ಯಾಳಿ | ಯಾಳಿ | |
| - | ಜಗು | ಎಳಿ | ಎಳಿ | |
| - | ಭೇಟಿ | ಆಯಿತು | ಭೇಟಿಯಾಯಿತು | ಗಂಟುಬಿದ್ದ |
| - | - | ಗೈರಾಡಿ ಪಡಕ್ | ಗೈರಾಣೆತಿಳಿ | ಪಡಕ್ |
| ಕಳೆ | ಸೊದಿ | ಸೊದಿ | ಸೆದಿ | |
| ನಿಂಬೆ | ನಿಂಬಿಕಾಯಿ | ನಿಂಬೆಕಾಯಿ | ಲಿಂಬಿಕಾಯಿ/ಲಿಂಬು | |
| ಆಕಸ್ಮಿಕ | ಆಕಸ್ಮಿಕ | ಅಕಾಸ್ಮತ್ | ಅಚಾನಾಕ್ | |
| ಮಲಗಿಕೊ | ಮಲ್ಕೊ | ಮೊಕೊ | ಮಂಕೊ | ಮೊಕೊ |
| ತುಟ್ಟಿ | ತುಟಿ | ಲುಸ್ಕಾಣ | ಲುಸ್ಕಾನ್ | ಲಕ್ಷಾನ |
| ಬದಿಯಲಿ | ಬದಿಲಿ | ಬಾಜು | ಬಲ್ಲಿ | |
| - | ಖರೆ | ಖರೆ | ಖರಟ್ಕೆ | |
| ಅಕ್ಷತ | ಅಕ್ಷತೆ | ಅಕ್ಷಾಂತಿ | ಅಕ್ಷಾಂತಿ | |
| - | - | ಡಬ್ರಿ | ಡೊಬ್ರಿ | ಗೊಚ್ |

| | | | | |
|---|---|---|---|---|
| - | - | ಆರಣ್ಗೆ | ಸೊಲ್ಗಿ | ಎಡ್ಸೇರ್ |
| ಬೀಜ | ಬೀಜ | ಬೀಜಾ | ಭೀಂಜಾ\ಬೀಜ | ಭೀಜಾ |
| ಕೊಟ್ಟು | ಕೊಟ್ಟು | ಕೊಟ್ಟೆ | ಕ್ಕೊಟ್ಟು | |
| - | ಢೆಲ್‌ಜಿ | ಡೆಲೊಜಿ | ಢ್ಯೊಲೋಜಿ | |
| ಹುಣಸೆ | ಹುಣ್ಸೆ | ಹುಣ್ಚೆ | ಹ್ಹುಂಚಿ | |
| - | ಬೂದಿ | ಬೂದಿ | ಭೂದಿ | ಭೆವ್ರುಟ್ |
| ಬಿಸಿ | ಬಿಸಿ | ಬಿಸಿ | ಭೆಚ್ಚಗ್ | |
| - | - | ತೊಗಾರಿ | ತೊಗ್ರಿ\ತಗ್ರಿ | |
| - | - | ಜೊಲ್ಲು | ಜೊಂಡು | |
| ಕಸಬರಿಕೆ | ಝುಜಾಡು | ಝಾಡು | ಸೊಡ್ನು | |
| - | ರಜಗಿಲ್ | ರಜಗಿಲ್ | ರಜಗಿಲ್ | |
| - | - | ಚಾಳಿ | ಚಾಲ್ | |
| ಮೊಟ್ಟೆ | ತತ್ತಿ | ಅಂಡಿ\ತತ್ತಿ | ಅಂಡಿ | |
| ಬಟ್ಟೆ | ಬಟ್ಟೆ | ಅರ್‌ಬಿ | ಅರ್ಬಿ | |
| ಉಪ್ಪು | ಉಪ್ಪು | ಉಪ್ಪು | ವುಪ್ಪು | |
| - | ಮೆಣಸಿನ್‌ಕಾಯಿ | ಮೆಣ್ಸ್ಯಾಕ್ಯಯ | ಮೆಣ್ಸ್ಯಾಕ್ಯಯ್\ಮೆಂಚ್ಯಾಕಾಯ್ | |
| ಮುಳುಗ | ಮುಳುಗ | ಮುಣುಗು | ಮುಣುಗು | |
| ಬೀಸು | ಬೀಸು | ಬೀಸ್ | ಭೀಸ | |
| ತಿಗರೆ | ತಿಗುರಿ | ತಿಗರಿ | ಟಿಗರಿ | |
| ಬ್ರಹ್ಮ | ಬ್ರಮ್ಮ | ಬ್ರಮ್ಮ | ಬರಮ | |
| ಪಾರ್ವತಿ | ಪಾರ್ವತಿ | ಪಾರ್ಬತಿ\ಪಾರ್ವತಿ | ಪಾರ್ಬತಿ | |
| ತೊಟ್ಟಿಲು | ತೋಟ್ಲು | ತೊಟ್ಲು | ತೊಟ್ಟಿಲ್ | |
| ಬೋಳು | ಬೋಳು | ಬೋಳ್ | ಭೋಳ್ | |
| ಕೆಮ್ಮು | ಕೆಮ್ | ಖೆಮ್ | ಖೆಮ್ | |
| ಕಹಿ | ಖಯ್ | ಖೈ | ಖೈಂಯ್ | |

| | | | | |
|---|---|---|---|---|
| ಸಿಹಿ | ಸಯ್ | ಸೈ | ಸೈಂಯ್\ಸಯ್ | |
| ಸೂಳೆ | ಸೂಳಿ | ರಂಡಿ | ರಂಡಿ | |
| ತಡೆ | ತಡಿ | ದಮ್ | ನಿಂದುರ್\ದಮ್ | |
| ದಂಟೆ | ದಂಟೆ | ದಂಟ್ಯಾ | ದಂಟಾ | |
| ಟೊಂಗೆ | ಟೊಂಗಿ | ಫಂಟಿ/ಫಳ್ಯಾ | ಪಂಟಿ\ಫಾಂಟಿ | ಫಳ್ಳಿ |
| ನಿಧಾನ | ನಿಧಾನ | ಹವ್ವಳು | ಹಳ್ಳು | |
| ಹಸಿರು | ಜೋಳದ | ದಂಟು | ಬಾಟುಕ | ಬಾಟುಕ್/ಕಿಳ್ಳು |
| ಹುಳು ತಿಂದಿವೆ | ಹುಳುಹತ್ಯಾವ | ಪುಟ್‌ಪುಟಿ | ಹತ್ಯಾವ | ಹುಳಾಹತ್ಯಾವ |
| ಬೆಯಿಸಿದ | ಕಡುಬು | ಕಡುಬ | ಕಡುಬು | ಕೊಡಬ್ಯಾಳಿ, ದಿವ್ನಿ |
| - | - | ಕುಮುಟ್ | ಕಿಮುಟ್ | |
| ಗೋಧಿ | ಗೋದಿ | ಗೋದಿ | ಘೋದಿ | |
| ಜೋಳ | ಗೋಳ | ಜ್ವಾಳ | ಜ್ವಾಳಾ | ಜಾಳಾ |
| - | - | ಬಾರ್ಕೊಲ್ | ಬಾರ್ಕೋಲ್ | ರೋಣಿ |
| ಶಾಲೆ | ಶಾಲಿ | ಸಾಳಿ | ಶೌಳಿ\ಸಾಳಿ | |
| ಸಂತೋಷ | ಸಂತೋಸ | ಖುಸಿ | ಖುಸಿ | |
| ಗಾಜು | ಗಾಜ್ | ಕಾಂಚು | ಕಾಂಚು\ಕಾಚು | |
| ಗಿರಾಕಿ | ಗಿರಾಕಿ | ಗಿರಾಕಿ | ಗಿರಾಕ್ | |
| ಅಂಗುಷ್ಟ | ಅಂಗುಟು | ಉಂಗುಂಟ | ಅಂಗ್ವಾ | ಉಂಗೂಟ್ |
| ಹಿಂಗು | ಹಿಂಗು | ಹಿಂಗ್ | ಇಂಗ್ | ಹಿಂಗ್ |
| ವ್ಯವಹಾರ | ವ್ಯವಾರ | ಹೆವಾರ | ಯಾವಾರ | |
| - | ಸಮಾಧಿಮಾಡ್ಯಾರ | ಸಮಾದಿಮಾಡ್ಯಾರ | ಹೂಳ್ಯಾರ | |
| ಅನ್ಯಾಯ | ಅನ್ಯಾಯ | ಅನ್ಯಾಯ್ | ಅನ್ಯೆ | |
| ಮಹಿಮೆ | ಮಹಿಮೆ | ಮೈಹಿಮಾ | ಮೈಮೆ | |
| ಮೀನ | ಮೀನು | ಮೀಣ್ | ಮೀಣ್ | |
| ಚೀಲ | ಚೀಲ | ಚೀಲ | ಠೈಲಿ | |

| | | | | |
|---|---|---|---|---|
| ಆಯುಷ್ಯ | ಆಯುಷ್ | ಆಯುಷ್ | ಆಯುಸ್\ವಯಸ್ | |
| ಶ್ರೀ | ಶಿರಿ | ಸಿರಿ | ಸಿರಿ | |
| ಏಕದಶ | ಏಕಾದಸಿ | ಎಕ್ಕಾದಸಿ | ಎಕಾದಸಿ | ಉಪಾಸ್ |
| ಗುಗ್ಗುರಿ | ಗುಗುರಿ | ಘುಗುರಿ | ಘುಘುರಿ | |
| ಗುಲ್ಲು | ಗಲಾಟೆ | ಗರ್ದಿ | ಘುರ್ ದಾಳಿ | |
| ಚಟ್ಟ | ಚಟ್ಟ | ಚಟ್ಟಾ | ಸತ್‌ಗಿ\ಸದಾಗಿ | |
| ತೇಗು | ಢೇಕರ್‌ಕಿ | ಢೇಕುರ್‌ಕಿ | ಢೇಕರ್ಕಿ | |
| ದಾವಣಿ | ದಾವಣಿ | ದಾವುಣಿ | ಡಾವಣಿ | |
| ಡೋಲು | ಡೋಲ್ | ಢೋಲ್ | ಢೋಲ್\ಡುಗ್ಗಾ | |
| ನಡುವೆ | ನಡು | ನಡು | ನಡು\ಬೀಚ್ | |
| ನತ್ತು | ನತ್ತು | ನತ್ನಿ | ನತ್ನಿ\ಮುರು | |
| ನಸೆ | ನಸ್ಯ | ನಿಸ್ಸಾ | ನಿಸಾ | |
| ಪಗಡಿ | ಪಗಡಿ | ಮುಂಡಾಸಿ | ಪಟ್ಕಾ\ರುಮಾಲ | |
| ಪಕಾಲಿ | - | ಪಕಾಲಿ | ಪಕಾಲಿ(ಕುರುಬರಲ್ಲಿ ಬಳಕೆ) | |
| ಪತ್ರಾವಳಿ | ಎಲಿ | ಪತ್ರೋಳೀಗಿ | ಪತ್ರೋಳ್ಗಿ\ಪತ್ರೋಳಿ | |
| ಪರಾತ | ಪರಾತ | ಪಾರಾತ | ತಾಂಬಡಿ | |
| ಪಾಪೋಸು | ಪಾಪಾಸ | ಪಾಪಸ | ಪಾಪಸ್ | ಜೋಡಾ |
| ಪುಕ್ಕ | ಪುಕ್ಕ | ಅಂಜ್ | ಬುರ್ಕ | ಡರ್‌ಪುಕ್ |
| ಬಕ್ಕರೆ | ಬಕ್ಕರಿ | ಬೋಕಿ | ಬೋಕಿ | |
| ಬಾಚಿ | ಬಾಚಿ | ಬಾಳ್ಬಿ\ಬಾಚಿ | ಭಾಳ್ಬಿ | |
| ಬೂಟರ | ಬೂಟುಕ | ಭೂಟುಕ್ | ಭೂಟುಕ್ | |
| ಬೋಣಿ | ಬೋಣಿ | ಭೋಣ್ಗಿ | ಭೋಣ್ಗಿ | |
| ಬೋನ | ಅನ್ನ | ಬಾನಾ | ಬಾನ | ಬಾನಾ |
| - | ಭಾಂಡೆ | ಭಾಡ್ಯಾ | ಭಾಂಡ್ಯಾ | |
| ಮೆಳ್ಳು | ಮೆಳ್ | ಮೆಳ್\ಬಾಂಗ್ | ಬಾಂಗ್ | |

| | | | | |
|---|---|---|---|---|
| ಮೊಂಡ | ಮೊಂಡ | ಮೊಂಡ\ಮಂಡ | ಮುಂಡ್ | |
| ವಾರಿ | ವಾರಿಗಿ | ವಾರ್ಗಿ | ವಾರ್ಗಿ | |
| ಬೀಡಿಸೇದು | ಬೀಡಿಸೇದು | ಬೀಡಿಬಿಗಿ | ಬೀಡಿಬಿಗಿ | |
| - | ಹಿಕಮತ್ತು | ಹಿಕಮತ್ತು | ಹಿಕ್‌ಮತಿ | ಹಿಕಮತಿ |
| ವಾಸನೆ | ವಾಸನ್ | ಘಾಣ್ | ಘಾಣಿ | |
| ಉಂಗ್ರ | ಉಂಗ್ರ | ಬಟುಂಗುರ್ | ಉಂಗುರ್ | |
| - | - ಹಣ್ಗಿ | ಬಾಚಣ್ಕಿ | ಕೊಂಗೈ | |
| ಸಾಗ್ವಾನ | ಸಾಗ್ವಾನ | ಸಾಗ್ವಾನ್ | ಸಾಗೋನಿ | |
| - | ಹಿಟ್ನರ್‌ಬಿ | ಹಿಟ್ನರ್ | ಹಿಟ್ಟಿನ್ನರಬಿ | |
| ಕುತ್ತಿಗೆ | ಕುತ್ಗಿ | ಕುತ್ಗಿ | ಕೊಳ್ಳ್ | ಕುತ್ಕಿ |
| - | ಪಟಾಕಿ | ಘಟಾಕ್ತಿ | ಘಟ್‌ಕಾಡಿ | |
| ಪ್ರೌಢಾವಸ್ಥೆ | ಪೊರಬಟ್ಗಿ | ಪೋರಾಬಟ್ಗಿ | ಪಾರಾಬಟ್ಟಿ | |
| - | - | ರೊಟ್ಗೆಪೌಡ್ | ರೊಟ್ಟಿಪಾಡು | |
| - | ಪುಕ್ಕಟ್ | ಫುಗ್ಸಟೆ | ಫುಗ್ಸಟೆ\ಫುಗಲ್ | |

ಹೊಲೆಮಾದಿಗರ ಕಾಲಂನಲ್ಲಿ ವಿಶಿಷ್ಟ ಪ್ರಭೇದ ಪದಗಳು ಮಾತ್ರ ಗುರುತಿಸಲಾಗಿದೆ. ಉಳಿದವುಗಳು ಲಿಂಗಾಯರಂತೆ ಬಳಸುತ್ತಾರೆ.

### ೩.೧.೨. ಬೀದರ ಕನ್ನಡ ಪ್ರಾದೇಶಿಕ ಪ್ರಭೇದಗಳು

"...ಬಾರೊ ಸಾಧನ ಕೇರಿಗೆ" ಈ ಸಾಲು ದ.ರಾ.ಬೇಂದ್ರೆಯವರದು. ಇಲ್ಲಿ ಬಾರೊ ಎಂಬ ಪದ ಬ್+ಆ+ರ್+ಓ ಬಾ+ರೊ, ಬಾರ್ +ಒ. ಇಲ್ಲಿ ಬಾ ಎಂದರೆ ಬನ್ನಿ, ಬರು ಎಂದು ಅರ್ಥಕೊಟ್ಟರೆ 'ರೊ' ಎಂಬ ಧ್ವನಿ ವಿಶಿಷ್ಟವಾದ ಅರ್ಥಕೊಡುವುದು. ಇದು ಪುಲಿಂಗವನ್ನು ಸಂಬೋಧಿಸುವ ಧ್ವನಿಮಾ; ಬೀದರ ಕನ್ನಡದಲ್ಲಿ ಹೇಗೆ ಬಳಸಲಾಗುತ್ತದೆಂದು ಪರಿಶೀಲಿಸುವುದು ಸೂಕ್ತವೆನಿಸುತ್ತದೆ.

| | |
|---|---|
| ಬಾರ್ +ಒ - ಬಾರೊ | ba:ro |
| ಬಾರ್ +ಅಪ್ಪ - ಬಾರಪ್ಪ | ba:rappa |
| ಬಾರ್ +ಅಣ್ಣ - ಬಾರಣ್ಣ | ba:raṇṇa |
| ಬಾರ್ +ಅಕ್ಕ - ಬಾರಕ್ಕ | ba:rakk |
| ಬಾರ್ +ಅವ್ವ - ಬಾರವ್ವ | ba:ravva: ಎಂದಾಗುತ್ತದೆ. |

ಆದರೆ ಬೀದರ ಕನ್ನಡದಲ್ಲಿ ಹೀಗಾಗದೆ ಸಂಬಂಧವಾಚಿ ಪದದ ಆದಿಯ ಸ್ವರ ಲೋಪವಾಗಿ ಯತ್ವ ಬರುತ್ತದೆ.

| | | |
|---|---|---|
| ಬಾರ್ + ಒ + ಯಪ್ಪ | - ಬಾರೊssಯಪ್ಪಾ | ba:royappa: |
| ಬಾರ್ + ಅ + ಯವ್ವ | - ಬಾರssಯವ್ವ | ba:rayavva |
| ಬಾರ್ + ಒ + ಅಯಣ್ಣ | - ಬಾರೊssಯಣ್ಣ. | ba:royanna |
| ಬರ್ + ಅ + ಯಕ್ಕ | - ಬಾರssಯಕ್ಕಾ | ba:rayakka: |

'ಬಾರೊ' ಪದ ಬೀದರ ಕನ್ನಡದಲ್ಲಿ ಪುಲ್ಲಿಂಗ ವಾಚಕ ಪದವಾಗಿದೆ. ಬ್ +ಆ+ರ್ +ಒ=ಬಾರೊ. ಔರಾವ ತಾಲೂಕಿನಕ ನಿಡೋದಾ ಗ್ರಾಮದಲ್ಲಿ ರೆ.ಎನ್.ಆರ್.ಲೂಕ್ ನವರು ಭಾವ ಪರವಶರಾಗಿ 'ಬಾರೊ ಬಾರೋ ಯೇಸುಸ್ವಾಮಿ ಬಾರೊ' ಎಂದು ಹಾಡುತಾರೆ. ಈಸಾಲು ಬೀದರ ಕನ್ನಡದ ಕನ್ನಡಿಯಾಗಿದೆ. ಹೀಗಾಗಿ ಈ ಭಾಗದಲ್ಲಿ ಬರೀ ಮನುಷ್ಯರನ್ನು ಸಂಬೋಧಿಸುವುದಲ್ಲದೆ ದೇವರನೂ 'ಬಾರೊ' ಎಂದು ಕರೆಯಬಹುದು ಎಂದಾಯಿತು. ಘಟವಾಡಿಯಾಚೆ 'ಬರೊ' ಎಂದಾಗುತ್ತದೆ.

| | |
|---|---|
| ಬಾರೊ ಅಂಬ್ರಿಷ್ | ba:ro ambris |
| ಹೋಗ್ ರೊ ಅಂಬ್ರಿಷ್ | ho:gra: ambris |
| ಬಾರೊ ಯಪ್ಪಾ | ba:ro yappa: |
| ಬಾರೊ ಮಮ್ಮ | baro mamma |

ಬಹು ವಚನದಲ್ಲಿ ಲಿಂಗಭೇದವಿಲ್ಲದೆ, ಬರ್ರಿ (barrI) ಬರ್ಯೊ (baryo) ಎಂದಾಗುತ್ತದೆ. ಬರ್ಯೊ ಪದ ಹಿರಿಯರು ಕಿರಿಯರಿಗೆ ಹೇಳಬಹುದು. ಕಿರಿಯರು ಹಿರಿಯರಿಗೆ ಹೇಳುವಂತಿಲ್ಲ, ಇದೇ ರೀತಿ ಬಾರೊ ಎಂಬ ಪದ ಪುಲ್ಲಿಂಗವಾಚಕದಂತೆ ಸ್ತ್ರೀಲಿಂಗದಲ್ಲಿ 'ಬಾರೆ' ಎಂದಾಗುತ್ತದೆ. ರೆ.ಎನ್ .ಆರ್ .ಲೂಕ್ ನವರು ಬೀದರ ಕನ್ನಡದಲ್ಲಿ

"ಬಾರೆ ತಂಗಿ ಭಜನಿಯ ಮಾಡದುಕ
ಯೇಸು ಹುಟ್ಯಾನ್ ಬಾರೆ ನೋಡದುಕ"

ಎಂದು ಹಾಡಿದ್ದು ಇಲ್ಲಿ ನೆನೆಯಬೇಕು. 'ಬಾರೆ' ಇದು ಒಂದೊಂದು ಪ್ರಾಂತ್ಯಕ್ಕೆ ಒಂದೊಂದು ರೂಪತಾಳುತ್ತದೆ.

ಬಾರೆ ba:re
ಬಾರ ba:ra (ಮಾಂಜ್ರಾ ನದಿಯ ದಕ್ಷಿಣ ಭೂಪ್ರದೇಶದಲ್ಲಿ ಕಂಡುಬರುತ್ತದೆ.)

'ಬಾಸ', 'ಬಾನೆ' ಎಂಬ ಪದಗಳು ಕೂಡ ಈ ಸೃಷ್ಟಿಯೇ. ಶಬ್ದದ ಕೊನೆಯಲ್ಲಿ ಬರುವ ರಕಾರ

ಹೋಗಿ ನಕಾರ ಬಂದಿದೆ. ಘಟವಾಡಿಯಾಚೆ 'ಬರ ಎಂದಾಗುತ್ತದೆ.

ಬಾನ ba:na ಮಾಂಜ್ರಾ ನದಿಯ ಉತ್ತರದಡದಿಂದಾಚೆ

ಬಾನೆ ba:ne ಬೀದರ ತಾಲೂಕಿನ ಮಾಂಜ್ರಾನದಿಯ ದಕ್ಷಿಣ ಭಾಗಕ್ಕೆ

ಪುಲಿಂಗವೂ ಕೂಡ ಬಾನೋ, ಹೋಗ್‌ನೋ ಎಂದಾಗುತ್ತದೆ.

ಬಾನೊ ba:no ದೇವಣಿ ನದಿಯ ಪಶ್ಚಿಮ ಕಡೆಗೆ ಬಳಕೆಯಲ್ಲಿದೆ

ಹೋಗ್‌ನೋ ho:gno ದೇವಣಿ ನದಿಯ ಪಶ್ಚಿಮ ಕಡೆಗೆ ಬಳಕೆಯಲ್ಲಿದೆ

ಮೊಕೊನೋ mokono ದೇವಣಿ ನದಿಯ ಪಶ್ಚಿಮ ಕಡೆಗೆ ಬಳಕೆಯಲ್ಲಿದೆ

ಈ ಪ್ರಾದೇಶಿಕ ಪ್ರಭಾವ ಮಾಂಜ್ರಾ ಹಾಗೂ ದೇವಣಿ ನದಿಯ ನಡುವಿನ ಭೂಪ್ರದೇಶದಲ್ಲಿ ಮಾತ್ರ ಹೆಚ್ಚು ಕಂಡುಬರುತ್ತದೆ (ಸೊನಾಳ್, ಸೊನಾಳವಾಡಿ ಗ್ರಾಮದಲ್ಲಿ).

೨. ಬಾ, ಬರ್ ಧಾತುವಿಗೆ 'ಗ' ಎಂಬ ಪ್ರತ್ಯಯ ಬರುತ್ತದೆ ಇದು ಬಹುಶಃ ಮರಾಠಿಯಿಂದ ಬಂದಿರಬಹುದೆನೊ, 'ಗ' ಎಂಬ ಪ್ರತ್ಯಯ ಮರಾಠಿ ಭಾಷೆಯಲ್ಲಿ ಸ್ತ್ರೀಯನ್ನು ಸಂಬೋಧಿಸುವುದಾಗಿದೆ.

ಅಗ ಏಗ ಆಯಿ -ಬಾ ತಾಯಿ

ಯೇಗ ಬಾಯಿ - ಬಾ ತಂಗಿ ಎಂದಾಗುತ್ತದೆ

ಇಲ್ಲಿ 'ಅಗ' 'ಗ' ಪ್ರತ್ಯಯಗಳಲ್ಲಿ ಎರಡನೆಯ 'ಗ' ಬೀದರ ಕನ್ನಡದಲ್ಲಿ ಸ್ತ್ರೀ ಸೂಚಕ ಪದವಾಗಿ ಬಳಕೆಯಾಗುತ್ತದೆ. ಕೆಲವು ವೇಳೆ ಪುರುಷರಿಗೂ 'ಗ' ಪ್ರತ್ಯಯ ಹತ್ತುತ್ತದೆ. ಮಧ್ಯ ಕರ್ನಾಟಕದ ಕನ್ನಡ ಬಳಕೆಯಲ್ಲಿ 'ಲೇ' ಪ್ರತ್ಯಯ ಬಳಕೆಯಲ್ಲಿದೆ. 'ಲೇ' ಧ್ವನಿಯ ಜಾಗದಲ್ಲಿ 'ಗ' ಧ್ವನಿ ಸೇರುತ್ತದೆ. ಅದು ಈ ಕೆಳಗೆ ಚರ್ಚಿಸಲಾಗಿದೆ. 'ಗ' ಪ್ರತ್ಯಯ ಗಂಡ ಹೆಂಡತಿಗೆ ಹೇಳುವುದು ಪ್ರಚಲಿತದಲ್ಲಿದೆ. ಹೆಂಡತಿ ಹೆಸರು ಲಕ್ಷ್ಮಿ ಎಂದಿದ್ದಾರೆ.

| ಬೀದರ ಕನ್ನಡ | ಮಧ್ಯಕರ್ನಾಟಕ (ಕನ್ನಡ ರಾಯಚೂರು, ಬಳ್ಳಾರಿ) |
|---|---|
| ಬಾಗಲಕ್ಷ್ಮೀ | ಬಾಲೇ ಲಕ್ಷ್ಮೀ |
| ಹೋಗ ಲಕ್ಷ್ಮೀ | ಹೋಗಲೇ ಲಕ್ಷ್ಮೀ |
| ಖೊಡ್ಗ ಲಕ್ಷ್ಮೀ | ಕುಳಿತುಕೊಳ್ಳಲೇ ಲಕ್ಷ್ಮೀ |
| ಮೊಕೊಗ ಲಕ್ಷ್ಮೀ | ಮಲಗಿಕೊ ಲೇ ಲಕ್ಷ್ಮೀ |

ಸಣ್ಣ ವಯಸ್ಸಿನ ಹೆಣ್ಣು ಮಗುವಿದ್ದರೆ ಆಕೆಯ ಹೆಸರು ಹೇಳಿ ಈ ಮೇಲಿನಂತೆ ಹೇಳವುದು ರೂಢಿಯಲ್ಲಿದೆ. ವಯಸ್ಸಿನಲ್ಲಿ ಹಿರಿಯ ಸ್ತ್ರೀಯರಿದ್ದರೆ ಅವರಿಗೆ 'ಗ' ಪ್ರತ್ಯಯ ಹಚ್ಚುವುದೇ ಇಲ್ಲ. ಆಕೆಯ ಗಂಡ ಮಾತ್ರ ಹೇಳಬಹುದು. 'ಗ' ಪ್ರತ್ಯಯ ಪುಲ್ಲಿಂಗಕ್ಕೆ ವಯಸ್ಸಿನಲ್ಲಿ ಕಿರಿಯರಾದವರಿಗೆ

ಕುರುಬರು ಯಾವಾಗಲೂ ಊರ ಹೊರಗೆ ಮತ್ತು ನದಿ ದಂಡೆ, ಗುಡ್ಡ ಬೆಟ್ಟಗಳ ಸಹವಾಸವೇ ಅವರದು. ಬಸವಕಲ್ಯಾಣಕಡೆ ರಾಜಗೊಂಡರ ಮನೆಗಳೇ ಬೇರೆಯಾಗಿವೆ. ಯಾವುದರಿಂದೂ ಚಪ್ಪರ ಛಾವಣಿ ಮಾಡಿಕೊಂಡು ಅಡವಿಯಲ್ಲಿಯೇ ಇದ್ದಾರೆ. ಅವರ ಭಾಷೆ ನಗರ ಭಾಷೆಗೆ ಹೇಗೆ ಸಮಾನವಾದೀತು. ಕುಡು,ಜಿಡ್ಡಿ, ಕೋರಾ(ಕೊಟಗಿ), ಹಿಕ್ಕಿ, ಗ್ಯಾತ, ಪಿಲ್ಲಿ, ಬೋಕುಡ, ಪಕಾಲಿ, ಘುಂಗಡಿ, ಬುದುಲಿ, ಎಣ್ಣೆ ಬುದಲಿ, ತತರಣಗಿ, ಭಾಲ್ಯಾ ಮುಂತಾದ ಪದಗಳು ಹಳೆಯವೆ. ಶ, ಷ, ಸ ವ್ಯಾತ್ಯಾಸಗಳಿಲ್ಲ ಸಕಾರವೆ ಇವೆರಡರ ಕೆಲಸ ಮಾಡುತ್ತದೆ. ಅವರು ಸಾಂಸ್ಕೃತಿಕ ಹಬ್ಬಗಳಲ್ಲಿ ಡೊಳ್ಳು ಬಾರಿಸುವುದು ಅದಕ್ಕೆ ತಕ್ಕಂತೆ ತಾಳ ಹೆಜ್ಜೆ ಹಾಕುವುದು ಅರಿಶಿಣ ಬಳಿದು ಕೊಳ್ಳುವುದು ವರ್ಷಕ್ಕೊಮ್ಮೆ ಮೈಲಾರಕ್ಕೆ ಹೋಗುವುದೊಂದೆ ಪರಿಪಾಠ.

ಘಾಂಟಿ, ಫ್ಯಾಜಿ, ಪಟ್ಯಾ, ಪಾಡುಕ, ಗಾಯ್‌ರಾಣಿ, ಥಾಪನಾ, ಖಂಡಗ ಕುರಿ, ಊರ ಸಹವಾಸ ತಪ್ಪಿದುದಕ್ಕೆ ವ್ಯವಹಾರ ತಿಳಿಯದು. ಹೀಗಾಗಿ ಈ ಭಾಗಕ್ಕೆ ಕುರುಬರನ್ನು ಮಳ್ ಕುರುಬರ್ ಎನ್ನುತ್ತಾರೆ.

ವಿವಿಧ ಸಾಮಾಜಿಕ ವರ್ಗಗಳಿಗೆ ಸೇರಿದ ವಿಭಿನ್ನ ಕುಟುಂಬಗಳೊಂದಿಗೆ ಸಂಕೇತಗಳ ಮೂಲ ಬೆಸೆದುಕೊಂಡಿರುತ್ತದೆ. ಮತ್ತು ನಿರ್ಣಾಯಕ ಸಾಮಾಜೀಕರಣದ ಸಂದರ್ಭಗಳ ಮೂಲಕ ಇದರ ಪ್ರಸರಣವಾಗುತ್ತದೆ. ಮೇಲ್ವರ್ಗದ ಮಕ್ಕಳು ಹೆಚ್ಚಿನ ಪ್ರಮಾಣದಲ್ಲಿ ಶಾಲೆಗೆ ಹೋಗುತ್ತಾರೆ. ಅವರ ತಂದೆತಾಯಿ ತಪ್ಪದೇ ಶಾಲೆಗೆ ಹೋಗಲು ಪ್ರೇರೆಪಿಸುತ್ತಾರೆ. ಆದರೆ ಕೆಳವರ್ಗದವರು ಮಕ್ಕಳ ಬಗ್ಗೆ ಅಷ್ಟು ಚಿಂತಿಸುವುದಿಲ್ಲ. ಅವರ ಗಮನ ಮಕ್ಕಳ ಅಭಿವೃದ್ಧಿಯಡಿಗೆ ಹರಿಯುವುದೇ ಇಲ್ಲ.

ಮಧ್ಯಮವರ್ಗದವರು ಕರಕುಶಲ ಕರ್ಮಿಗಳಾಗಿದ್ದರಿಂದ ಅವರೂ ಶಾಲೆಯ ಕಡೆ ಅಷ್ಟು ಗಮನ ಹರಿಸುವುದಿಲ್ಲ. ಹೀಗಾಗಿ ಅವರ ಧ್ವನಿಪೆಟ್ಟಿಗೆ ಕಡಿಮೆಯಾಗುತ್ತದೆ. ವ್ಯವಹಾರದಲ್ಲಿ ಯಾರಾರೊ ಬೇರೆ ಬೇರೆ ಭಾಷೆಯ ಶಬ್ದಗಳ ಅವರು ವೀಕ್ಷಿಸುವುದರಿಂದ ಅವರ ಭಾಷೆಯಲ್ಲಿ ವ್ಯತ್ಯಾಸ ಕಾಣುತ್ತದೆ. ಖಂಡಿತವಾಗಿಯೂ ಕೆಳವರ್ಗದ ಭಾಷಿಕರು ಅಮೂರ್ತ ಕಲ್ಪನೆಯನ್ನು ನಿರ್ಬಂಧಿತ ಸಂಕೇತಗಳಲ್ಲಿಯೇ ನಿರ್ವಹಿಸುವುದು ಸಾಧ್ಯವಿದೆ ಎಂದು ಹೇಳಬಹುದು.

ಬೀದರದ ಬ್ರಾಹ್ಮಣರು ಮಕ್ಕಳಿಗೆ ಸರಿಯಾದ ಶಾಲೆಗೆ ಕಳುಹಿಸುವುದು, ಅಭ್ಯಾಸ ಮಾಡುವುದು ಎಚ್ಚರಿಕೆಯಿಂದ ನಿರ್ವಹಿಸುತ್ತಾರೆ. ಹೀಗಾಗಿ ಅವರು ಮಕ್ಕಳು ಸರಿಯಾಗಿ ಕಲಿತು ಕನ್ನಡ ಪದಗಳು ಸರಿಯಾಗಿ, ಗ್ರಾಂಥಿಕ ಭಾಷೆಗೆ ಹತ್ತಿರವಿದ್ದ ಭಾಷೆ ಬಳಸುತ್ತಾರೆ ಮತ್ತು ಅವರ ನಿವಾಸಕ್ಕೆ ಬೇರೆ ಭಾಷಿಗರ ಒಡನಾಟ ಕಡಿಮೆಯಾಗಿದ್ದುದ್ದೆ ಇದಕ್ಕೆ ಮುಖ್ಯವಾದ ಕಾರಣವಾಗಿದೆ.

ಕೆಳವರ್ಗದ ಜನ ಮೇಲ್ವರ್ಗದವರ ಸಹಾಯಕರು ಹೊಲಸನ್ನು ಸ್ವಚ್ಛಗೊಳಿಸುವವರು ಅವರ ಮನೆಯ ಮುಂದೆ ಸತ್ತ ಎತ್ತೊ ಎಮ್ಮೆಯೊ ಬೇಗ ಖಾಲಿಮಾಡಿ ತನ್ನ ಅಂಗಳದಲ್ಲಿ ಹಾಕಿ ಕೊಯ್ಯುವುದು,

ಸಹಾಯಕ್ಕೆ ಮಕ್ಕಳಿಗೆ ಉಪಯೋಗಿಸಿಕೊಳ್ಳುವುದು, ಇದರಿಂದ ಒಳ್ಳೊಳ್ಳೆ ವಿಚಾರಗಳು ಈ ಮಕ್ಕಳ ತಲೆಯಲ್ಲಿ ಹೇಗೆ ಬಂದೀತು? ತೊಗಲು, ಚೆರ್ಬಿ, ಖಂಡ, ಖೊಂಬು, ಖುರಾ, ಎಲು, ಡೋಗಿ, ಕೆಚ್ಚಿ, ಡೊಂಪುರ್ ಈ ಶಬ್ದಗಳು ಇವರ ಬಾಯಲ್ಲಿ ಪುಟಿಯುತ್ತವೆ.

**ಗೌರವ ಸೂಚಕ ಭಾಷೆ**

ಸಮಾಜದಲ್ಲಿ ಬೀದರ ಬ್ರಾಹ್ಮಣರು ಪರಸ್ಪರ ಗೌರವ ಸೂಚಿಸಲು ಕೆಲ ಸಮೂಹಗಳು ಒಂದು ಸಂಕೀರ್ಣವಾದ ಭಾಷಿಕ ರೂಪವನ್ನು ಬಳಸುತ್ತವೆ. ಗೌರವಾರ್ಥವಾಗಿ ಪದಗಳು ಆನಾದಿ ಕಾಲದಿಂದಲೇ ಪಡಿಯುತ್ತಾ ಬಂದಿದ್ದಾರೆ ಮೇಲ್ವರ್ಗದವರು ವಯಸ್ಸು, ಲಿಂಗ ಭೇದವಿಲ್ಲದೆ ಸಾಮಾಜಿಕ ಕೆಳವರ್ಗವೆಲ್ಲ ಅವರಿಗೆ ಗೌರವದಿಂದ ಕಾಣಬೇಕು ಗೌರವಾರ್ಥ ಪದಗಳು ಬಳಸಬೇಕು ಎಂದು ಪರಂಪರಾಗತವಾಗಿ ಬಂದಿದೆ. ಅವರಿಗೆ ಸಮಾಜದಲ್ಲಿ ಮಾನ ಮರ್ಯಾದೆಯಿಂದಿರುತ್ತಾರೆ.

**ಸಾಮಾಜಿಕ ಅಂತಸ್ತು ಮತ್ತು ಪಾತ್ರ**

ಅಂತಸ್ತು ಎಂದರೆ ಸಮಾಜದಲ್ಲಿ ವ್ಯಕ್ತಿ ಪಡೆದುಕೊಂಡ ಸ್ಥಾನಮಾನ. ದೊರೆ, ಹಿರಿಯ, ಗಂಡ, ಹೆಂಡತಿ ಇತ್ಯಾದಿ. ಈ ಯಾವ ಪಾತ್ರದಲ್ಲಿದ್ದರೂ ಕೆಳವರ್ಗದವರಿಗೆ ಗೌರವಾರ್ಥರೆ, ದೊರೆಗಳೇ ಮೇಲ್ವರ್ಗದಲ್ಲಿ ಮನೆಯಲ್ಲೊಂದು ಹೊರಗೊಂದು ಸ್ಥಾನಮಾನ ಹೊಂದಿರುತ್ತಾನೆ. ಕೆಳಜಾತಿಯವನಿಗೆ ಇದು ಸಲ್ಲದಿರುತ್ತದೆ. ಆಶ್ವಾಸನೆ, ಪರಮ ಪೂಜ್ಯತೆ ಮಾತುಗಳನ್ನು ಹೇಳಬಹುದು. ವೇದಿಕೆ ಮೇಲೆ ನಿಂತು ಹೇಳುವುದೆಲ್ಲ ಶಿಷ್ಟ ಭಾಷೆಗೆ ಹತ್ತಿರವಾಯಿತು. ತಕ್ಕಂತೆ ಸಂಸ್ಕೃತಿಯೂ ಪಳಗಿಸಿಕೊಳ್ಳುತ್ತಾರೆ. ಕೆಳವರ್ಗದವರದೂ ನಿಂತು ಕೇಳುವುದು; ಎಷ್ಟೋ ಸಲ ಕೇಳದೆಯೇ ಇರುತ್ತಾರೆ. ಮೇಲ್ವರ್ಗದವರ ದನದ ಕೊಟ್ಟಿಗೆ ಬಳಿಯುವುದರಲ್ಲಿ ಇವರ ಹೊತ್ತು ಹೋಗುತ್ತದೆ.

ಕೆಳಜಾತಿಯವರು ದೊಡ್ಡ ದೊಡ್ಡ ವಿಚಾರಗಳು ಮಾಡುವುದಿಲ್ಲ. ಊರಬಗ್ಗೆಯೋ ದೇಶದ ಬಗ್ಗೆಯೇ ಚಿಂತಿಸುವುದಿಲ್ಲ. ಚುನಾವಣೆ ಬಂದರೆ ಮಾಲಿಕರು ಹೇಳಿದಕ್ಕೆ ಮತ ಚಲಾಯಿಸುತ್ತಾರೆ. ವ್ಯಕ್ತಿ ವೃತ್ತಿಕ್ಕನುಸಾರವಾಸಗಿ ತಮ್ಮ ಧ್ವನಿ, ತಾನ, ಏರಿಳಿತಗಳಲ್ಲಿ ವ್ಯತ್ಯಾಸ ಮಾಡಿಕೊಳ್ಳುವ ಅಗತ್ಯವೂ ಕಂಡುಬರುತ್ತದೆ. ಬಡಿಗರಲ್ಲಿ, ರೀಟಾ, ಲೀಟಾ, ರಂದಾ, ಬಾಳ್ಚಿ, ಕರಗಸ್, ಉಳಿ, ಪಟಾಸಿ, ಕೆತ್ತು ಪದಗಳು ಸೇರಿಕೊಂಡರೆ ಕುಂಬಾರರಲ್ಲಿ ಮಣ್ಣು ಆವ್ಗಿ, ಗಡ್ಗಿ, ಕುಳ್ಳಿ, ಮಗಿ, ರಂಜನ್ಗಿ, ಹಾಲ್ಗಡ್ಗಿ, ನೀರಿನ್ಹರಿ, ತತರಣ್ಗೆ, ಹಣ್ತಿ, ಮುಚ್ಚಳ ಪದಗಳು, ಅವರು ದಿನ ನಿತ್ಯ ಬಳಸುವ ಪದಗಳಾದವು. ಇವು ಸಾಮಾನ್ಯವಾಗಿ ಜನ ತಮ್ಮ ಮನೋಭಿಲಾಷೆಗಳನ್ನು ತಮ್ಮ ಸುತ್ತಲಿನವರಿಗೆ ವಿಭಿನ್ನವಾಗಿ ತಮ್ಮ ತಮ್ಮ ಭಾಷಿಕ ಶಬ್ದಗಳಿಂದ ಅರ್ಥಮಾಡಿಕೊಳ್ಳುತ್ತಾರೆ. ಇದು ದ್ವಿಭಾಷಿಕ ಪರಿಸರದಲ್ಲಿ ಹೆಚ್ಚು. ಒಂದು ಭಾಷಿಕ

ಮಾತ್ರ ಹಿರಿಯರು ಹೇಳಬಹುದು. ಹೆಸರು ಅಂಬ್ರಿಷ ಇದ್ದರೆ

ಬಾ ಗ ba:ga ambrisE

ಹೋಗ್ ಗಅಂಬ್ರಿಷ್ಯಾ ha:ga ambrisE

ಇಲ ನಡುವಿನಲ್ಲಿ `ಗ' ಪ್ರತ್ಯಯಬಂದು ಆವ್ಯಕ್ತಿಯ ಹೆಸರು ಕೆಡುತ್ತದೆ. ಅಂಬ್ರಿಷ್ ಇದ್ದುದು ಅಂಬ್ರಿಷ್ಯಾ ಆಗುತ್ತದೆ. ಒಂದು ವೇಳೆ 'ರೊ' ಎಂಬ ಪ್ರತ್ಯಯ ಹತ್ತಿದರೆ

ಬಾರೊ ಅಂಬ್ರಿಷ್ ba:ro ambris

ಹೋಗರೊ ಅಂಬ್ರಿಷ್ ho:gro ambris ಎಂದಾಗುತ್ತದೆ.

ಹೊರತು ಬಾರೊ ಅಂಬ್ರಿಷ್ಯಾ, ಹೋಗರೊ ಅಂಬ್ರಿಷ್ಯಾ ಎಂದಾಗುವುದಿಲ್ಲ. 'ಗ' ಪ್ರತ್ಯ ಹೆಚ್ಚಾಗಿ ಅವಿದ್ಯಾವಂತರಲ್ಲಿ ರೂಢಿಯಲ್ಲಿದೆ. ಜಗಳದಲ್ಲಿ ಬೈಯ್ಯುವಾಗ ವಯಸ್ಸಿನ ಮತ್ತು ಸ್ತ್ರೀ ಪುರುಷ್ಯರ ಭೇದವಿಲ್ಲದೆ `ಗ' ಪ್ರತ್ಯಯ ನಡುನಡುವೆ ಬರುತ್ತದೆ. ಗೌಡರು, ದೊರೆಗಳು, ಸಾಹುಕಾರರು ಹೊಲೆಮಾದಗರಿಗೆ `ಗ' ಪ್ರತ್ಯಯದಿಂದ ಮಾತನಾಡಿಸಬಹುದು. ಇಲ್ಲಿ ವಯಸ್ಸಿನ ನಿರ್ಬಂಧವಿಲ್ಲ. ಮೇಲ್ಜಾತಿಯ ಮಗು, `ಗ' ಪ್ರತ್ಯಯ ಉಪಯೋಗಿಸಿ ಹೊಲೆಮಾದಿಗರ ಹಿರಿಯನನ್ನೂ ಮಾತನಾಡಿಸಬಹುದು. ಇದೆ 'ಗ' ಪ್ರತ್ಯಯ ಬೀದರ ತಾಲೂಕಿನ ಕಡೆ `ಗೆ' ಯಾಗಿ ಮಾರ್ಪಾಟು ಹೊಂದುತ್ತದೆ.

ಬಾ ಗೆ ಅಂಬ್ರಿಷ್ಯಾ ba:ge ambrisE

ಹೊ ಗ್ಗೆ ಅಂಬ್ರಿಷ್ಯಾ hogge ambrisE

ಖೂಡ್ ಗೆ, ಮೊಕೆಗೆ (khu:dge, mokege) ಇತ್ಯಾದಿ

ಕೆಲವು ಕಡೆ 'ಗ'ಕಾರಕ್ಕೆ ದ್ವಿತ್ವ ಬರುತ್ತದೆ(ಗ>ಗ್ಗ).

'ಗ' ಪ್ರತ್ಯಯವು ಮರಾಠಿಗರಲ್ಲಿ ಮರಾಠಿಯನಾಡುವಾಗ ಪುಲ್ಲಿಂಗದಲ್ಲಿ ಬಳಕೆಯಾಗುವುದಿಲ್ಲ. ಸ್ತ್ರೀಲಿಂಗಕ್ಕೆ ಮಾತ್ರ ಸೀಮಿತವಾಗಿದೆ. ಆದರೆ ಬೀದರ ಕನ್ನಡದಲ್ಲಿ ಸ್ತ್ರೀ ಪುರುಷರ ಲಿಂಗಭೇದವಿಲ್ಲದೆ ಬಳಕೆಯಲ್ಲಿದೆ. 'ಬಾ' ಧ್ವನಿಮಾದಲ್ಲಿ ಬ್ +ಆ ಇದೆ 'ಗ' ಧ್ವನಿಮಾದಲ್ಲಿ ಗ್+ಅ ಇದೆ ಹೀಗಾಗಿ ಬ್ +ಆ+ಗ್ +ಅ 'ಬಾಗ' ಎಂಬ ಪದ ಸೃಷ್ಟಿಯಾಗುತ್ತದೆ. ಆದರೆ ಬೀದರ ತಾಲುಕಿನ ಪೂರ್ವಭಾಗದಲ್ಲಿ ಬ್ +ಅ+ಗ್ +ಎ 'ಬಗೆ' ಎಂದಾಗಿ ಏಕವಚನವನ್ನು ಸೂಚಿಸಿದರೆ ಬಹುವಚನದಲ್ಲಿ ಬರ್ಗೆ(barge), ಬರ್ಗ(barga) ಬರ್ಗ್ಯಾ(bargE) ಎಂದಾಗುತ್ತದೆ.

ಬಾಯ್ಯಾ : ಈ ಪದ ಯಾ ಎಂಬ ಧ್ವನಿಮಾ ಯಾವ್ ಯವ್ವ ಪದದಿಂದ ಬಂದಿರುತ್ತದೆ. ಸ್ತ್ರೀಯನ್ನು ಸಂಬೋಧಿಸುವ ರೂಪ, ಇದು ಸಣ್ಣ ಮಕ್ಕಳಿಗೆ ಪ್ರೀತಿಯಿಂದ ಕರೆದು ಲಲ್ಲೆ ಹಾಡುವ ರೂಪವಿದು. ಯಾವಾವದೊ ರೂಪತಾಳಿ ಚಿಕ್ಕವರು ಹಿರಿಯರಿಗೆ ಸಂಬೋಧಿಸುವ ಪದವಾಗಿ ಪರಿತವರ್ತನೆಗೊಂಡಿದೆ.

ನಿಡೇಬಾನ ಗ್ರಾಮದಲ್ಲಿ ಬೇಂದ್ರೆ ಮನೆತನದಲ್ಲಿ ಈ ರೂಪ ಕಂಡುಬರುತ್ತದೆ.

**ಮಾಯಾ** : ma:ya: ಇದು ಪ್ರೀತಿ ಎಂಬ ಅರ್ಥದಲ್ಲಿ ಬೀದರ ಕನ್ನಡದಲ್ಲಿ ಬರುತ್ತದೆ. ಮೋಹ ಎಂಬ ಪದದಿಂದ ಬಂದಿರಬೇಕು. ಇದು ಬಾಯಿಂದ ಬಾಯಿಗೆ ಬಂದು ಪ್ರೀತಿಯೆಂಬ ಅರ್ಥದಲ್ಲಿ ಮೂಡಿ ಬಂದಿದೆ ಎಂದು ಬೀದರ ಜಿಲ್ಲೆಯ ವಿದ್ವಾಂಸರಾದ ಡಾ.ವೈಜಿನಾಥಭಂಡೆಯವರ ಅಭಿಪ್ರಾಯ.

| | |
|---|---|
| ಅವ್ವ ಮಾಯಾ ಮಾಡ್ತಾಳ | avva ma:ya: madta:l |
| ಅಪ್ಪ ಮಾಯಾ ಮಾಡ್ತಾನ್ | appa ma:ya: ma:dta:n |
| ಹೆಣ್ತಿ ಮಾಯಾ ಮಾಡ್ತಾಳ್ | hentI ma:ya ma:dta:l |

ಬೀದರ ಮರಾಠಿಗರು 'ಮಾಯ' ಎಂಬ ಪದ ಬಳಸುತ್ತಾರೆ. ಮರಾಠಿಯಾಡುವಾಗಲೂ 'ಮಯ' ಎಂದು ಬಳಕೆಯಾಗುತ್ತದೆ. ಇಲ್ಲಿ ಮ್+ಆ+ಯ್+ಆ>ಮ್+ಅ+ಯ್+ಅ ಎಂದಾಗುತ್ತದೆ. ಮರಾಠಿಯಲ್ಲಿ

| | |
|---|---|
| le:k maya karatiya | ಮಗಳು ಪ್ರೀತಿ ಮಾಡುತ್ತಾಳೆ |
| ba:ikU maya karatiya | ಹೆಂಡತಿ ಪ್ರೀತಿ ಮಾಡುತಾಳೆ |
| naura maya karatoy | ಗಂಡ ಪ್ರೀತಿ ಮಾಡುತ್ತಾನೆ |

ಇಲ್ಲಿಯ ಮಯ ಎಂಬ ರೂಪ ಕನ್ನಡಕ್ಕೆ ಬಂದು ದೀರ್ಘೀಕರಣಗೊಂಡಿತು.

| | |
|---|---|
| ಮಯ>ಮಾಯಾ | maya>ma:ya: |

ಸರಾಸರಿ ಬೀದರ ಕನ್ನಡದಲ್ಲಿ ಗಂಡ ಹೆಂಡತಿಯನ್ನು ಏಕವಚನದಲ್ಲಿ ಮಾತನಾಡಿಸಬಹುದು. ಆದರೆ ಹೆಂಡತಿ ಗಂಡನನ್ನು ಏಕವಚನದಲ್ಲಿ ಮಾತನಾಡಿಸುವುದಿಲ್ಲ. ಮೂಲ ದ್ರಾವಿಡ ಭಾಷೆಯಲ್ಲಿ 'ಮಹತ' (ಪುಲಿಂಗ) 'ಅಮಹತ'(ಸ್ತ್ರೀಲಿಂಗ)ದ ಭಾವನೆಯಲ್ಲಿ ಬಳಕೆಯಾಗುತ್ತದೆ. ಅದೇ ಅರ್ಥದಲ್ಲಿ ಇಲ್ಲಿ ಗಂಡ ಹೆಂಡತಿಯ ನಡುವೆ ಸಂಭಾಷಣೆ ನಡೆಯುತ್ತದೆ. ಆದರೆ ಬೀದರ ತಾಲೂಕಿನ ಉತ್ತರಭಾಗ ಹಾಗೂ ಹುಮನಾಬಾದ ತಾಲೂಕಿನಲ್ಲಿ ಹೆಂಡತಿಯರು ಕೂಡ ಗಂಡನನ್ನು ಅಮಹತದಂತೆ ಮಾತನಾಡಿಸುವರು. ಇದಕ್ಕೆ ಬೀದರ ಕನ್ನಡದಲ್ಲಿ 'ಅರೆತುರೆ' ಎಂದು ಹೇಳುತ್ತಾರೆ. ಇದು ಹೆಚ್ಚು ಕೆಳವರ್ಗದ ಜನರಲ್ಲಿ ರೂಢಿಯಲ್ಲಿದೆ. ಮೇಲ್ವರ್ಗದವರಲ್ಲಿ ಮರ್ಯಾದೆಯ ಭಾಷೆ ಬಳಕೆಯಲ್ಲಿದೆ ಎಂದು ಸಾಮಾನ್ಯವಾಗಿ ಹೇಳಬಹುದು.

ಗಂಡ ಹೆಂಡತಿಗೆ ಕರೆಯುವ ರೂಢಿ ಇಲ್ಲಿ ಬೇರೆಯದೆ. 'ಇಕರ' ikara $_{sss}$ ಎಂದು ಸಂಭೋಧನೀಯವಾಗಿ, ಸಂಭಾಷಣೆಯ ಮೊದಲಿಗೆ ಹೇಳುವ ಆಕೃತಿಮಾ ಇದು. ಆಗ ಹೆಂಡತಿ ಗಂಡನ ಮಾತುಗಳನ್ನಾಲಿಸಲು ಎಚ್ಚರಾಗುತ್ತಾಳೆ, ಜಾಗೃತಳಾಗುತ್ತಾಳೆ. ಇಲ್ಲಿ ಇಕರ ಎಂದರೆ ತೆಗೆದುಕೊಳ್ಳೆ, ಸ್ವೀಕರಿಸೆ, ಮನನ ಮಾಡಿಕೊಳೆ, ನನ್ನ ಮಾತಿಗೆ ಕಿವಿಗೊಡೆ, ಆಲಿಸೆ ಎಂಬ ಅರ್ಥದಲ್ಲಿ ಬಳಕೆಯಾಗುತ್ತದೆ. ಉರ್ದುವಿನಲ್ಲಿ

'ಏಲೆ'(e:le) ಮರಾಠಿಯಲ್ಲಿ ಹಿಂಗಾ(hinga) ಎಂದು ಹೇಳಿಯೇ ಏನು ಹೇಳಬೇಕಿದೆ ಹೇಳಲು ಆರಂಭಿಸುತ್ತಾರೆ. ಉರ್ದುವಿನ 'ಏಲೆ' ಇಲ್ಲಿ 'ಏ' ಅಂದರೆ ಇದು 'ಲೆ' ತೆಗೆದುಕೊ, ಇದೊ ಸ್ವೀಕರಿಸು ಎಂಬ ಅರ್ಥದಲ್ಲಿ ಬಳಕೆಯಾಗುತ್ತದೆ. ಅದರಂತೆಯೇ ಮರಾಠಿಯ ಹಿಂಗಾ ಅಂದರೆ ಹಿಡಿ, ಹಿಡಿದುಕೊ ತೆಗೆದುಕೊ ಎಂದಾಗುತ್ತದೆ. ಕಲ್ಲು ದನಗಳ ಕಡೆಗೆ ಎಸೆಯುವಾಗ ಹಿಂಗಾ ಘೇ ಎಂಬ ವಾಕ್ಯವಾಗುತ್ತದೆ. ಅಂದರೆ 'ಇದೊ ತೆಗೆದುಕೊ' ಎಂಬ ಅರ್ಥ ಹುಟ್ಟಿಸುತ್ತದೆ. ಈ ಪ್ರಭಾವದಿಂದಾಗಿ ಇಕರss ಎಂಬ ಆಕೃತಿಮಾ ಹುಟ್ಟಿರಬೇಕು.

ಇಲ್ಲಿ 'ಏಲೆ' ಹಿಂಗಾ ಅಂದರೆ 'ಇಗೊ' ಎಂದರ್ಥ ಕೊಡುತ್ತದೆ. 'ರ' ಅಂದರೆ ಸ್ತ್ರೀ ಸಂಬೋಧನಾ ಧ್ವನಿಮಾವಾಗಿದೆ. ಅದರಂತೆಯೇ ಪುರುಷ ಸಂಬೋಧನಾವಾದ ಇಕರಿ, ಇಕರೊ, ಇಕನೊ, ಇಕಗ ಈ ಆಕೃತಿಯನ್ನು ಹೇಳಿಯೇ ಎಚ್ಚರಿಸಿ ಸಂಭಾಷಣೆಗೆ ತೊಡಗುವುದುಂಟು. ಸಂಭಾಷಣೆಯಲ್ಲಿ ನಡು ನಡುವೆ ಈ ಆಕೃತಿಮಾಗಳು ಬರುವುದಿಲ್ಲ. ಮಾತು ಮುಗಿದಾದ ಮೇಲೆ ಸಂಭಾಷಣೆಗೆ ತೊಡಗಿದವರು ಸ್ಥಳವನ್ನು ಬಿಟ್ಟು ಅವರವರ ಕೆಲಸಕ್ಕೆ ಹೋಗುವಾಗ ಯಾವುದೋ ಒಂದು ಮಾತು ಹೇಳಲು ನೆನಪು ಬಂದಾಗ ಬೆನ್ನು ಮಾಡಿ ನಡೆವಾತನಿಗೆ ಪುನಃ ಹಿಂದಿನ ಮಾತಿನಲ್ಲಿ ಈ ಹೇಳಿಕೆಯನ್ನು ಸ್ವೀಕರಿಸು ಎಂಬ ಅರ್ಥದಲ್ಲಿ 'ಇಕ' ಎಂದೇ (ಈ ವರೆಗೆ ಹೇಳಿದ ಸಂಭಾಷಣೆಗೆ ಜೋಡಿಸು) ಎಂಬಂತೆ ಹೇಳುವುದು ರೂಢಿಯಲ್ಲಿದೆ. ಆದರೆ ಗಂಡ ಹೆಂಡತಿಯರು ಒಂದೆ ಮನೆಯಲ್ಲಿದ್ದು ಅಂಗಳದಲ್ಲೊ, ಹಿತ್ತಲಲ್ಲೊ ಇದ್ದರೆ ಹೆಂಡತಿಯಾದವಳು ಗಂಡನಿಗೆ 'ಇಕರಿ' ಎಂದು, ಗಂಡನಾದವನು ಇಕರ, ಇಕರೆ, ಇಕನ, ಇಕನೆ, ಇಕಗ ಎಂದು ಹೆಂಡತಿ ತನ್ನ ಮಾತುಗಳನ್ನು ಆಲಿಸಲು ಪ್ರೇರೆಪಿಸುತ್ತಾನ. ಅಮಹತ್ತಾಗಿ ಇಕಗ ಎಂದು ಹೇಳುವುದುಂಟು.

ಇಕನ, ಇಕನೆ, ಇಕನೊ, ಇಕರೊ ಔರಾದ ತಾಲೂಕು ಮಾಂಜ್ರಾ ನದಿಯ ಉತ್ತರ ಭಾಗದಲ್ಲಿ ಏಕವಚನ ಪ್ರಥಮ ಪುರುಷ್ಯ ಸಂಬೋಧನೆಯ ಶಬ್ದಗಳು ಇಕನ, ಇಕನೆ, ರೂಪಗಳೂ ಈ ಪ್ರಾಂತೀಯ ರೂಪಗಳೇ. ಏನೇ ಎನ್ನುವ ಪದ ಬೀದರ ತಾಲೂಕು ಹಾಗೂ ಔರಾದ ತಾಲೂಕುಗಡೆಯೋ ಹೆಚ್ಚು ರೂಢಿಯಲ್ಲಿದೆ. ಹೆಂಡತಿ ಗಂಡನಿಗೆ ಎನ್ರಿ, ಎಂದೆ ಮಾತನಾಡಿಸುತ್ತಾಳೆ ಇದು ಮಹತ ಪದ್ಧತಿ. ಇಕನೊ, ಇಕರೊ, ಇಕಗ ಎಂಬ ಅಮಹತ್ ಪದಗಳು ಹೆಂಡತಿ ಗಂಡನಿಗೆ ಹೇಳುವಂತಿಲ್ಲ.

**ಹೋಗು(hogu):** ಪ್ರಥಮ ಪುರುಷ ಏಕವಚನ, ಸ್ತ್ರೀ-ಪುರುಷ ಸಂಬೋಧನಾ ರೂಪ ಕೆಲವು ಸಲ 'ಹೋಗೊ' ಎಂದೂ ಬಳಸುವುದೂ ರೂಢಿಯಲ್ಲಿದೆ. ಇದು ಕೂಡ ಪ್ರಥಮ ಪುರುಷ ಏಕವಚನ ಸಂಬೋಧನಾ ರೂಪ. ಆದರೆ ಇಲ್ಲಿ ಹೋಗು ಅಂದರೆ ಹೋಗಲು ಪ್ರೇರೆಪಿಸುವುದು; ಹೋಗೊ ಎಂದರೆ ಹೋಗುವ ಕ್ರಿಯೆಗೆ ದಬ್ಬುವುದು, ಜಾಗ ಖಾಲಿ ಮಾಡು, ನನ್ನ ಮುಂದೆ ನಿಲ್ಲಬೇಡ, ಮುಖ ತೋರಿಸಬೇಡ ಎಂದು ಬೇಸರದ ಧ್ವನಿಯೇ ಈ 'ಹೋಗೋ' ಎಂಬಲಿದೆ.

ಅಮಹತ ಸ್ತ್ರೀ ಸಂಬೋಧನಕ್ಕೆ ಹೋಗೆsss ಹೋಗ್ರೆss ಎಂದಾಗುತ್ತದೆ.

| | | | |
|---|---|---|---|
| ೧. ಬಹುವಚನ | ಲಿಂಗದ್ವಯಕ್ಕೆ | ಹೋಗ್ರಿ | ho:grl |
| ೨. ಬಹುವಚನ | ಪುಲಿಂಗಕ್ಕೆ | ಹೋಗ್ರೋ | ho:grgo: |
| ೩. ಬಹುವಚನ | ಸ್ತ್ರೀಲಿಂಗಕ್ಕೆ | ಹೋಗ್ರೇ | hogre: |
| ೪. ಬಹುವಚನ | ಅಮಹತ್ | ಹೊಗ್ರಿಗss | hogriga |

ಈ ಮೇಲಿನವುಗಳಲ್ಲಿ ಒಂದನೆಯ ಪ್ರೇರೆಪಿಸುವ ಆಕೃತಿ ಹೋಗ್ರಿ ಎಂದು, ಆದರೆ ಉಳಿದ 'ಹೊಗ್ರ್ಯೋ', 'ಹೋಗ್ರೆ' ಹಾಗೂ 'ಹೋಗ್ರಿಗ' ಇವು ಸಿಟ್ಟು ಬಂದು ಹೇಳುವ ಆಕೃತಿಮಾಗಳು. ಇಲ್ಲಿ ಕೇವಲ ಹೋಗು ಎಂಬ ಕ್ರಿಯೆ ಸೂಚಿಸಿದರೂ ಹೋಗ್ರೊ ಎಂಬುದು ಅರ್ಥ ಬೇರೆ ರೂಪ ತಾಳುತ್ತದೆ. ಈ ರೂಪ ಕ್ರಿಯೆ ರೂಪ ತಾಳದಿದ್ದಲ್ಲಿ ಜಗಳ ತಂಟೆ ಹೊಡೆಪೆಟ್ಟು ಆರಂಭವಾಗಲಿಕ್ಕೆ ಸಾಧ್ಯತೆ ಇದೆ.

**ಸರ್ಗಾಛೆಲು :** ಸರ್ಗಾ ಎಂದರೆ ಹೊಲಕ್ಕೆ ತೋರುವ ನೈವೇದ್ಯ ಆಹುತಿಯೂ ಹೌದು. ಈ ಸರ್ಗಾ 'ಚೆರಗು' ಎಂಬ ಆಕೃತಿಮಾದಿಂದ ತತ್ಭವವಾಗಿ ಬಂದು ಸರ್ಗಾ ಎಂಬ ರೂಪದಲ್ಲಿ ಬಳಕೆಯಾಗಿದೆ. ಇದರಲ್ಲಿ ಅಂಬಲಿ, ಕಡುಬು ಭಜ್ಜಿ ಹಾಲು, ಪಾಯಸ ಒಂದೆ ಮಡಿಕೆಯಲ್ಲಿ ಕಲಸಿ ಅದರಲ್ಲಿ ದಂಟು ಅದ್ದಿ ಅದ್ದಿ ಹೊಲದ ತುಂಬೆಲ್ಲ ಸಿಂಪಡಿಸುತ್ತಾರೆ. ಈ ಸಾಂಪ್ರದಾಯ ಬೀದರ ಜಿಲ್ಲೆಕಡೆ ಬಹು ರೂಢಿಯಲ್ಲಿದೆ 'ಎಳ್ಳಾಮವಾಸೆ' ದಿವಸದಂದು ಇಡೀ ದಿವಸ ಬಂದವರಿಗೆ ಊಟ ಮಾಡಿಸುವ ಪದ್ಧತಿ ಇದೆ. ಹಾಲು ತುಪ್ಪ ಪಾಯಸ, ಅಂಬಲಿ-ಖಿಚಡಿ, ಭಜ್ಜಿ ಬಿಳೆ ಜೋಳದ ರೊಟ್ಟಿ ಇದು ವಿಶೀಷ್ಟ ಅಡುಗೆ. ವಿಶೇಷ ಭಜ್ಜಿ, ಅಂಬಲಿ, ಖಿಜಡಿ (ಜೋಳ ನೆನಹಾಕಿ ಪುಡಿಯಾಗದಂತೆ ಎಚ್ಚರದಿಂದ ಕುಟ್ಟಿ ಹೊಟ್ಟು ತೆಗೆದು ಕುದುಸಿದ ಜೋಳದ ಬೋನ), ಭಜ್ಜಿ (ಎಂದರೆ ಕಡಲೆ ಹಿಟ್ಟು ಅದರೊಂದಿಗೆ ಅವರೆ, ತೊಗರೆ, ಸೇಂಗಾ ಹುಳಿ ಸೇರಿಸಿ ಕುದಿಸಿ ವಗ್ರರೆಣ್ಣೆ ಹಾಕಿ ಇಡುವುದು) ಈ ಭಜ್ಜಿ ಹಬ್ಬಕ್ಕ ಮಾಡಿದಾಗ ೧೦-೧೫ ದಿನಗಳವರೆಗೆ ಊಟ ಮಾಡಬಹುದು, ಅಂಬಲಿ ನಾಲ್ಕೈದು ದಿವಸಗಳವರೆಗೆ ಊಟಮಾಡಬಹುದು. ಈ ಖಾದ್ಯ ಜಾತಿ ಮತ ಭೇದವಿಲ್ಲದೆ ಮಾಡುವರು. ಹೊಲಗದ್ದೆ ಇರುವವರು ಕಡ್ಡಾಯವಾಗಿ ಬಿಳೆ ಜೋಳದ ಹೊಲಗಳಿಗೆ ಮಾಡುತ್ತಾರೆ. ಬಿಳೆ ಜೋಳ ಇಲ್ಲದವರು ತೊಗರೆ, ಕಡಲೆ ಹೊಲಗಳಿಗೂ ಮಾಡಬಹುದು.

**ಮೈಲ್ಗಿ :** mailigi ಎಂಬ ಪದ ಬೀದರ ಕನ್ನಡದಲ್ಲಿ ಮೈಲ್ಗಿ-ಮುಡ್ಚಟ್ mailg-muḍcat ಎಂದರೆ ಮಲಿನತೆಗೆ, ಹೆರೆಗೆಯ ಮನೆಗೆ, ಸ್ತ್ರೀಯರ ತಿಂಗಳ ಸೆರಗಿಗೆ ಮೈಲ್ಗಿ-ಮುಡ್ಚಟ್ ಎಂಬ ಅರ್ಥವಿದೆ. ಈ ಸಮಯದಲ್ಲಿ ಸ್ತ್ರೀಯರನ್ನು ಅಸ್ಪೃಶ್ಯರಂತೆ ಕಾಣುವುದುಂಟು ಅವರು ಯಾರಿಗೂ ಮುಟ್ಟಬಾರದು ದೇವರ ಮನೆಯೊಳಗಂತೂ ಹೋಗಲೇ ಬಾರದೆಂಬ ಕಟ್ಟಳೆ ಬೀದರ ಸಂಪ್ರದಾಯದಲ್ಲಿದೆ. ಹೊಲೆ ಮಾದಿಗರಿಗೆ ಕೈ ತಾಕಿದರೆ ಮುಡ್ಚಟ್ ಈ ಮುಡ್ಚಟ್ ಪದ ಎಲ್ಲ ಜಾತಿಯವರೂ ಬಳಸುವುದುಂಟು.

**ಅಪ್ಪೆಸಿ :** appesI ಎಲ್ಲ ಸಾಮಾಜಿಕರು, ಜಿಲ್ಲೆಯ ಎಲ್ಲಡೆ ಈ ಪದ ಬಳಕೆಯಲ್ಲಿದೆ. ಅಪ್ಪೆಸಿ ಅಂದರೆ ಅಪಶಕುನ, ಟಿವ್ವಿವಿ ಪಕ್ಷಿ ಮನೆಯ ಮೇಲಿನಿಂದ ಹಾರಿದರೆ, ಒದರಿದರೆ, ಗೂಬೆ ಉಲಿಯುವುದು, ನಾಯಿ ಊಳಿಡುವುದು, ಕೋಳಿ ಸಮಯಬಿಟ್ಟು ರಾತ್ರಿ ಕೂಗಿದರೆ ಇವೆಲ್ಲ ಸಮಾಜದ ಎಲ್ಲರಿಗೆ ಅಪಶಕುನಗಳೆ.

'ಹಾನ್', 'ಹಾಳ', 'ಹಾರ', 'ಆದ', 'ಆವ್' ಆಕೃತಿಮಗಳು 'ಹಾನ' ಎಂದರೆ ಏಕವಚನ ತೃತೀಯ ಪುರುಷ ಪುಲಿಂಗ ಹಾಳ ಎಂದರೆ ತೃತೀಯ ಪುರುಷ ಸ್ತ್ರೀಲಿಂಗ ಏಕವಚನ, ಹಾರ ಎಂದರೆ ತೃತೀಯ ಪುರುಷ ಲಿಂಗದ್ವಯ ಬಹುವಚನವನ್ನು ಸೂಚಿಸುತ್ತವೆ. ಆದ, ತೃತೀಯ ಪುರುಷ ಅಮಹತ್ ಏಕವಚನ, ಆವ್ ತೃತೀಯ ಪುರುಷ ಅಮಹತ್ ಬಹುವಚನ ಸೂಚಿಸುತ್ತವೆ. ಇವು ಬೀದರ ತಾಲೂಕಿನಲ್ಲಿ ಹೆಚ್ಚು ಬಳಕೆಯಲ್ಲಿದೆ.

### ೩.೧.೩.೧. ಬೀದರ ಕನ್ನಡಿಗರ ಕೆಲವು ವಿಶಿಷ್ಟಪದಗಳು

**ಮಾಲು :** ಸಂಸ್ಕೃತ ಶಬ್ದ, ಮಾಲು ಎಂದರೆ ವಸ್ತು, ಸಲಕರಣೆ ಸಾಮಗ್ರಿ ಇತ್ಯಾದಿ ಅರ್ಥಗಳು ಕೊಡುತ್ತದೆ. ಈ ಆಕೃತಿಮಾ ಘಟಕ ಬೀದರಕನ್ನಡದಲ್ಲಿ ಹೆಚ್ಚು ಅರ್ಥವನ್ನು ಕೊಡುವ ಒಂದು ವಿಶೇಷ ಘಟಕವಾಗಿದೆ.

೧. ಹೋಟೆಲುಗಳಲ್ಲಿ ಅಡುಗೆ ಭಟ್ಟ ಎನ್ನುತ್ತಾನೆ. 'ಪಲ್ಯಮಾಡಾದದ ಮಾಲ್ ಕೊಯಿರಿ', ಇಲ್ಲಿ ಮಾಲ್ ಅಂದರೆ ತರಕಾರಿ ಕಾಯಿಪಲ್ಯ ಇತ್ಯಾದಿ

೨. ಕಿರಾಣಿ ಅಂಗಡಿ ಮಾಲಕ ಹೇಳುತ್ತಾನೆ. 'ಮಾಲ್ ಥುಂಬಿದ' ಇಲ್ಲಿ ಮಾಲ್ ಎಂದರೆ ಕಿರಾಣಿ ಸಾಮಾನುಗಳು

೩. ಕಟಗರಾತ ಹೇಳುತ್ತಾನೆ 'ಬರ್ರಿ ಮಾಲ್ ತೋಲ್ ಚಿಕನಾ ಅದಾ' ಇವನು ಮೌಂಸ-ಖಂಡಗಳಿಗೆ, ಕೊಬ್ಬಿಗೆ ಮಾಲ್ ಎಂದು ಹೇಳುತ್ತಾನೆ.

೪. ಬಟ್ಟೆ ಅಂಗಡಿಯವನು 'ದಸ್ರಿಗ್ ಮಾಲ್ ಭಂದ್ ಹೊಂಟುದ್' ಇವನು ಸೀರೆ, ರವಿಕೆ, ಅಂಗಿ, ಪ್ಯಾಂಟ್, ಪಂಚೆ ಇತ್ಯಾದಿ)ಗಳಿಗೆ ಮಾಲು

೫. ಸಾಯಕಲ್-ಮೋಟಾರ್ ಸಾಯಕಲನ ಏಜಂಟುಗಳು ಹೇಳುತ್ತಾರೆ. 'ಮಾಲ್ ತೋಲ್ ಪಿರ್‍ಯಾ ಆಗ್ಯಾದ, ಮಾಲಿನ್ ಕಿಮ್ಮತೆ ಮಾಡಾಲು ಮಂದಿ ಇವನ ದೃಷ್ಟಿಯಲ್ಲಿ ಟ್ಯೂಬ್-ಟಾಯರ್, ರೀಮ್, ನಟ್ ಸ್ಕ್ರೂ ಇತ್ಯಾದಿಗಳು ಮಾಲ್

೬. ಹಣ್ಣಿನ ಅಂಗಡಿಯವನು ಹೇಲುತ್ತಾನೆ 'ಇಗೊತೆ ಮಾಲ್ ಬಂದದ' ಇವನು ಹಣ್ಣು ಹಂಪಲಿಗೆ ಮಾಲ್ ಎನ್ನುತ್ತಾನೆ.

೭. ಬಡಿಗನು ಕಟ್ಟಿಗೆಗಳಿಗೆಲ್ಲ ಮಾಲು ಎನ್ನುತ್ತಾನೆ.

೮. ಫೂಟ್‌ವೇಲರ್ ಅಂಗಡಿಯವ 'ಮನ್ನೆ ಬಂದದರಿ ಮಾಲು, ತಾಳ್ಕಿ ಮಾಲ್ ಅದಾ' ಇವನು ಚಪ್ಪಲಿ, ಬೂಟುಗಳಿಗೆ ಹೇಳುವನು ಮಾಲ್

೯. ಶರಾಯಿ ಅಂಗಡಿಯವನು ಸಿಂದಿ ಶರಾಯಿಗೆ ಮಾಲ್ ಅನ್ನುತ್ತಾನೆ.(ಪ್ಯಾಕೆಟ್ ಮಾಲ್ ಕಡಕ್ ಇರ್ತದ)

೧೦. ಗೋಡೆ ಕಟ್ಟುತಾ ಮೇಸ್ತ್ರಿ ಅನ್ನುತ್ತಾನೆ 'ಉಸುಕು, ಸಿಮೆಂಟು ಕಲಸಿದಕ್ಕೆ 'ಮಾಲ್ ಛಂದ್ ಮಾಡ್‌ಕೊಂಡು ತೆಕೊಂಡ್ ಬಾ'

೧೧. ಆದರೆ ಕಾಲೇಜು ವಿದ್ಯಾರ್ಥಿಗಳು 'ನಮ್ ಕ್ಲಾಸ್ನಾಗ ಛಂದಾನ್ ಛಂದಾನ ಮಾಲ್‌ಗುಳ್ ಬಂದಾವೊ; ಒಂದರ್‌ಖಿಂತ ಒಂದ್ ಮಾಲ್ ಗಳವಾ' ಇವರ ದೃಷ್ಟಿಯಲ್ಲಿ ಕಾಲೇಜು ಹುಡುಗೀಯರೇ ಮಾಲ್

ಹೀಗೆ ಈ ಮಾಲಿನ ಬಾಲ ಬೆಳೆಯುತ್ತಾ ಹೋಗುತ್ತದೆ.

**ಗಾಡಿ :** ಬೀದರ ಕನ್ನಡದಲ್ಲಿ ಬೈಯ್ಕು, ಬಸ್ಸು, ಲಾರಿ, ರೈಲು, ಚಕ್ಕಡಿ, ಇತ್ಯಾದಿ ಭೂ ಸಂಚಾರಿ ಸಾಧನಗಳೆಲ್ಲ ಗಾಡಿಗಳೇ.

**ಕಾಯಿ :** ಮಾಯಿನ್‌ಕಾಯಿ, ಜಾಪಳಕಾಯಿ, ನಿಂಬೆಕಾಯಿ, ಬಾಳೆಕಾಯಿ, ಬಾರೆಕಾಯಿ ಇತ್ಯಾದಿಯಾಗಿ ಎಲ್ಲ ಕಾಯಿಗಳಾಗುತ್ತವೆ. ಹಣ್ಣುಗಳಾಗವುದಿಲ್ಲ.

**ಪಾಳಿ :** ಒಕ್ಕಲಿಗರು ಮಾಡಿದ ಕಣದ ಸುತ್ತು ಭಾಗಕ್ಕೆ ಪಾಳಿ, ಸರತಿ ಈಗ್ನಿ ನ್‌ದ್ಪಾಳಿಬಂತೋ, ಪಾಳಿ, ಕೆರಿಪಾಳಿ, ಭಾಯಿಪಾಳಿ ಒಕ್ಕಲಿಗರು ಬೇಸಿಗೆಯ ಕುಂಟಿ ಹೊಡೆಯುವದಕ್ಕೂ ಪಾಳಿ ಎನ್ನುತ್ತಾರೆ.

**ಡಬ್ಬಿ :** ಎಲೆಅಡ್ಕಿ ಡಬ್ಬಿ, ಎಣ್ಣೆ ಡಬ್ಬಿ, ಫಾಸ್ಲೇಟ್ ಡಬ್ಬಿ, ಹಿಟ್ಟಿನ್ ಡಬ್ಬಿ, ಬಿಸ್ಕಿಟ್‌ಡಬ್ಬಿ ಫುಟ್ಟುದು ಡಬ್ಬಿ, ಕಬ್ಬಿಣ ಡಬ್ಬಿ, ಖಡ್ಡಿ ಡಬ್ಬಿ, ಖಟಿಕಿ ಡಬ್ಬಿ.

**ಗಿನ :** ಇದು ಎಚ್ಚರಿಕೆಯ ಧ್ವನಿಮಾ; ಉದ್ಗಾರವಾಚಿಯಾಗಿ ಬೀದರ ಕನ್ನಡದಲ್ಲಿ ಬಳಕೆಯಾಗುತ್ತದೆ. ಉದಾ. "ನಾ ಹೋಗಾಕಿ ಇದ್, ನೀ ಬಭ್ಯಾಡ್ ಆಂ! ಬಂದಿ ಗಿನ;", ನೀ ಬರ್ಬೆಕಾಯ್ತದ; ಬರಾಲ್ದೆ ಕುಂತಿ ಗಿನ! ನೋಡು

**ಭೊಗ್ಸಿ :** ಭೊಗ್ಸಿ ಅಂದರೆ ಕೆಲಸ; ಆದರೆ ಬರೀ ಭೊಗ್ಸಿ ಧ್ವನಿಮಾಕೆ ಬೀದರ ಕನ್ನಡದಲ್ಲಿ ಅರ್ಥವಿಲ್ಲ. ಈ ಶಬ್ದಕ್ಕೆ ಅರ್ಥವಿದೆ. ಆದರೆ ಅದು ಅಲ್ಲಿ ಗಮನಕ್ಕೆ ಬರುವುದಿಲ್ಲ. ಅದರ ಜೊತೆಗೆ ಧಂದ್ಯಾ ಸೇರಿ 'ಧಂದ್ಯಾನ ಭೊಗ್ಸಿ' ಈ ರೀತಿ ಸೇರಿರುತ್ತದೆ.

**ತಾಗಂತಿ :** ತಾಗಂತಿ ಅಂದರೆ ಗಟ್ಟಲೆ ಎಂಬ ಪಾರಿಭಾಷಿಕ ಅರ್ಥ ಬರುತ್ತದೆ. 'ವರ್ಸಾನ್ತಾಗಂತಿ ಖಿಂತು ಓದಿಲ್ಲ ಬರ್ದಿಲ್ಲ ಪಾಸ್ಯಾಂಗಾಯ್ತಾನ? ಈ ತಾಗಂತಿ ಬಂದ ಸ್ಥಳದಲ್ಲಿ ಚ್ಯಾರಿ ಕೂಡ ಬರುತ್ತದೆ. ಉದಾ. ವರ್ಸಾನಾಚ್ಯಾರಿ ಎಂದು ಈ ಚ್ಯಾರಿ ಎಂದರೆ ಮರಾಠಿ ಭಾಷೆಯಲ್ಲಿ ವರ್ಸಾನ್‌ಚಾರಿ ಚಾರ್ ಅಂದರೆ ನಾಲ್ಕು ಮಾಸಗಳ ಒಂದು ವರ್ಷ. ಈ ಪ್ರಭಾವದಿಂದ ಚ್ಯಾರಿ ಪದ ಬೀದರ ಕನ್ನಡದಲ್ಲಿ ಬಂದು ಸೇರಿದೆ.

**ಓಡ್‌ಹೋಗ್ :** ಓಡ್‌ಹೋಗ್ ಅಂದರೆ ಸಾಮಾನ್ಯವಾಗಿ ಓಡಿ ಹೋಗು ಎಂಬರ್ಥ. ಆದರೆ ಬೀದರ ಕನ್ನಡದಲ್ಲಿ ಓಡ್‌ಹೋಗ್ ಅಂದರೆ ಗಂಡಿನೊಡನೆ ಹೆಣ್ಣೋ, ಹೆಣ್ಣಿನೋಡನೆ ಗಂಡೋ ಒಬ್ಬರನ್ನೊಬ್ಬರು ಆಕರ್ಷಿಸಿ ಊರು ಬಿಟ್ಟು ಸಹಬಾಳ್ವೆಗಾಗಿ ಯಾರಿಗೂ ಹೇಳದೆ ಕೇಳದೆ ಯಾವದೋ ಪಟ್ಟಣ ಸೇರಿಕೊಂಡರೆ 'ಓಡ್ ಹೋಗ್ಯಾರ್', 'ಓಡ್ಹೋಗ್ಯಾವ್' ಎನ್ನುತ್ತಾರೆ.

**ಘುಂಬ್ :** ಘುಂಬ್ ಅಂದರೆ ಸರ್ವನಾಶವಾಗು, ಹಾಳಾಗು, ಮುಕ್ತಾಯವಾಗು, ವಂಶಮುಳುಗಿ ಹೋಗು, ಮಾಯವಾಗು. ಹೀಗೆ ಮುಂತಾದ ಅರ್ಥ ಬೀದರ ಕನ್ನಡದಲ್ಲಿ ಬರುತ್ತವೆ. ಹೆಚ್ಚಾಗಿ ವಂಶೋದ್ಧಾರ ಇಲ್ಲಿದಿದ್ದಾಗ ಈ ಶಬ್ದ ಬಳಸುತ್ತಾರೆ. ಉದಾ.'ಧೀಪಾ ಘುಂಬ್‌ಆಗ್ಯಾದ' ಎಂದು

**ಬಾತಲ್ :** ಬಾತಲ್ ಅಂದರೆ ಯಾವದೇ ವಸ್ತು ಚಲನೆಯಲಿಲ್ಲ ಕೆಲಸ ಮಾಡುತ್ತಿಲ್ಲ ಎನ್ನುವುದಕ್ಕೆ ಬೀದರ ಕನ್ನಡದಲ್ಲಿ ಬಾತಲ್ ಎಂದು ಹೇಳುತ್ತಾರೆ. ಉದಾ. 'ರೋಕ್ಕಾ ಬಾತಲ್ ಆಗಿಂದದ', 'ಬ್ಯಾಟ್ರಿ ಬಾತಲ್ ಅದ' ಇತ್ಯಾದಿ.

**ಐತಾರ :** ಐತಾರ ಅಂದರೆ ಭಾನುವಾರ, ಬೀದರ ಕನ್ನಡದಲ್ಲಿ ಉರ್ದು ಭಾಷಾಪ್ರಭಾವಕ್ಕೆ ಒಳಗಾಗಿ ಅವರ ಇತ್ವಾರ್ ಐತ್ವಾರ್ ಆಗಿ ಐತಾರಾಯಿತು.

**ಜಡಾ :** ಜಡಾ ಅಂದರೆ ಮೈಗೆ ಹುಶಾರಿಲ್ಲ ಎಂಬರ್ಥ. ಜ್ವರಾ ಇದ್ದುದೆ 'ಜ ರಾ' ಆಗಿ 'ರಾ' ಮಾಯವಾಗಿ 'ಡಾ' ಬಂದು ಜಡಾ ಆಗಿರಬಹುದು.

**ನಾಬತ್ :** ನಾಬತ್ ಎಂದರೆ ಬೀದರ ಜಿಲ್ಲೆಯ ಹುಮನಾಬಾದ ಕನ್ನಡದಲ್ಲಿ ಕಲ್ಲುಸಕ್ಕರೆ ಎಂಬರ್ಥ. ಆದರೆ ಔರಾದ ತಾಲೂಕಿನಲ್ಲಿ ಇದು ಸ್ತ್ರೀಯ ಮೂತ್ರಪಿಂಡವಾಗುತ್ತದೆ.

**ಠಳಕ :** ಠಳಕ್ ಎಂದರೆ ಸ್ಫುಟ ಎಂಬರ್ಥ. ಬೀದರ ಕನ್ನಡದಲ್ಲಿ ಸ್ಫುಟ ಎಂದು ಹೇಳದೆ ಠಳಕ ಎಂದು ಹೇಳುತ್ತಾರೆ. ಉದಾ. 'ಬರ್ಗಿ ಏಟ್ ಠಳಕ್ ಬರ್ದಿದಿ', 'ಫೋಟು ಠಳಕ ಬಂದುದ್'.

| ಬೀದರ ಕನ್ನಡ | ಅಂತಾರಾಷ್ಟ್ರೀಯ ಲಿಪಿ | ಶಿಷ್ಟ ಕನ್ನಡ |
|---|---|---|
| ಹಾನ | ha:na | ಇದ್ದಾನೆ |
| ಹಾಳ | ha:la | ಇದ್ದಾಳೆ |

| | | |
|---|---|---|
| ಹಾರ | ha:ra | ಇದ್ದಾರೆ |
| ಆದ | a:da | ಇದೆ |
| ಆವ | a:va | ಇವೆ |

ಇವುಗಳು ಕ್ರಮವಾಗಿ ಇಹನು, ಇಹಳು, ಇಹರು ಈ ಪದಗಳಲ್ಲಿ ಶಬ್ದಾರಂಭದ 'ಇ' ಸ್ವರ ಹಾರಿ ಹ ಕಾರ ದೀರ್ಘವಾಗಿದೆ. ಹ್ +ಅ > ಹ್ +ಆ ಆಗಿದೆ. ಹಳಗನ್ನಡದಲ್ಲಿ ವ್ಯಂಜನಾಂತ್ಯವಿತ್ತು ಇಲ್ಲಿ ಸ್ವರಾಂತ್ಯವಾಗಿದೆ. ಈ ಲಿಂಗದ್ವಯ ಮತ್ತು ವಚನದ್ವಯಗಳು ಬಸವಕಲ್ಯಾಣ ಭಾಲ್ಕಿ ಹಾಗೂ ಹುಮನಾಬಾದ ತಾಲೂಕುಗಳಲ್ಲಿ ಕ್ರಮವಾಗಿ

| | | |
|---|---|---|
| ಹನ | hana | ಇದ್ದಾನೆ |
| ಹಳ | haḷa | ಇದ್ದಾಳೆ |
| ಹರ | hara | ಇದ್ದಾರೆ |

ಈ ರೀತಿಯಲ್ಲಿ ಬಳಕೆಯಲ್ಲಿದೆ. ಔರಾದ ತಾಲೂಕು ಮಾಂಜ್ರಾ ನದಿ ಉತ್ತರಕ್ಕೆ

| | | | |
|---|---|---|---|
| ಹಳಾ | hala: | ಹನಾ | hatana: |
| ಹರಾ | hara: | ಅದಾ | ada: |
| | | ಅವಾ | ava: |

ಎಂದೆ ಇವೆ. ಆದರೆ ಬೀದರ ತಾಲುಕು ಔರಾದ ತಾಲುಕು ಗಡಿಯಾದ ಮಾಂಜ್ರಾ ನದಿ ದಡದಿಂದೀಚೆ ದಡದಿಂದಾಚೆ ಇಂಥ ಕೆಲವು ರೂಪ ವ್ಯತ್ಯಾಸ ಕಾಣುವುದು. ನಪುಂಸಕ ಲಿಂಗ ಹಾಗ ಅಮಹತ್ತಾಗಿ ತೃತೀಯ ಪುರುಷ ಏಕವಚನದಲ್ಲಿ 'ಆದ', ಬಹುವಚನದಲ್ಲಿ 'ಆವ' ರೂಪಗಳು ಕಾಣುತ್ತೇವೆ. ಈ ಬದಲಾವಣೆ ಬೀದರ ತಾಲೂಕಿನಲ್ಲಿಯೇ ಪ್ರಚಲಿತದಲ್ಲಿವೆ. ಉಳಿದೆಡೆಗಳಲ್ಲಿ 'ಅದ' 'ಅವ' ಎಂದು ಬಳಕೆಯಲ್ಲಿವೆ. ಔರಾದ ತಾಲೂಕಿನೆಡೆ ಮಾಂಜ್ರಾನದಿದಾಟಿ ಉತ್ತರಕ್ಕೆ 'ಅದಾ', 'ಅವಾ', ಎಂಬ ರೂಪ ವ್ಯತ್ಯಾಸ ಗಮನಿಸಬಹುದು.

| | | |
|---|---|---|
| ಇದ್ದ | Idda | ಇದ್ದೇನೆ |
| ಇದ್ದೇವ್ | Idde:v | ಇದ್ದೇವು |

ಇದ್ದ ಈ ಪದ ಪ್ರಥಮ ಪುರು ಲಿಂಗದ್ವಯಗಳಲ್ಲಿ ಬಳಕೆಯಲ್ಲಿದೆ. ಏಕವಚನವಾಗಿ ಇದ್ದ, ಇದ್ದೇವ್ ಎಂಬ ರೂಪ ಲಿಂಗದ್ವಯದ ಬಹುವಚನದ ರೂಪವಾಗಿದೆ.

| | | |
|---|---|---|
| ಬಂದೇ ಇಲ್ಲ | bande:illa | ಬರಲಿಲ್ಲ |
| ನೋಡೇ ಇಲ್ಲ | no:de:illa | ನೋಡಲಿಲ್ಲ |

ಕೇಳೇ ಇಲ್ಲ ke:ḷe:illa ಕೇಳಲಿಲ್ಲ

ಹಾಡೇ ಇಲ್ಲ ha:de:illa ಹಾಡಲಿಲ್ಲ

ಇಂಥ ರೂಪಗಳು ಬೀದರ ತಾಲೂಕಿನಲ್ಲಿ ಪುಟಿಯುತ್ತವೆ. ಆದರೆ ಈ ರೂಪಗಳೆ ಭಾಲ್ಕಿ ತಾಲೂಕಿನಲ್ಲಿ

ಬಂದಿಲೆ bandile

ನೋಡಿಲೆ no:ḍile

ಕೇಳಿಲೆ ke:lile

ಹಾಡಿಲೆ ha:ḍile

ಬಸವ ಕಲ್ಯಾಣ ಹಾಗೂ ಹುಮನಾಬಾದ ತಾಲೂಕಿನೆಡೆಗೆ

ಬಂದಿಲ್ಲ bandilla

ನೋಡಿಲ್ಲ no:ḍilla

ಕೇಳೀಲ್ಲ ke:ḷilla

ಹಾಡಿಲ್ಲ ha:ḍilla ಎಂದಾಗುತ್ತದೆ.

ಇದುವೆ ಔರಾದ ತಾಲುಕು ಮಾಂಜ್ರಾನದಿಯ ಉತ್ತರ ಭಾಗಕ್ಕೆ

ಬಂದಿಲಾ bandila:

ನೋಡಿಲಾ no:ḍila:

ಕೇಳಿಲಾ ke:ḷila:

ಹಾಡಿಲಾ ha:ḍila:

ಕಾರಂಜಾ ಹಾಗೂ ಮಾಂಜ್ರಾ ನದಿ ನಡುವಿನ ಭಾಗದಲ್ಲಿ ಬಳಕೆಯಲ್ಲಿದ್ದರೆ,

ಹೇಳಾಕ್ he:ḷa:k ಹೇಳಲು

ಖುಡ್ಲಾಕ್ khuḍla:k ಕುಳಿತುಕೊಳ್ಳಲು

ಹಾಡ್ಲಾಕ್ haḍla:k ಹಾಡಲು

ಮಾಡ್ಲಾಕ್ ma:ḍla:k ಮಾಡಲು

ಬೀದರ ತಾಲೂಕಿನೆಡೆಗೆ

ಹೇಳಾಕ್ he:ḷa:k

ಖೂಳಾಕ khu:ḷak

ಹಾಳಾಕ್ ha:ḷa:k

ಮಾಳಾಕ್ maḷa:k ಎಂದಾದರೆ

ಇದೆ ಬಸವಕಲ್ಯಾಣ ತಾಲೂಕಿನ ಆಳಂದ ತಾಲೂಕು(ಗುಲಬರ್ಗಾ ಜಿಲ್ಲೆ) ಭಾಗದಲ್ಲಿ

| | |
|---|---|
| ಹೇಳುಕ್ | heḷuk |
| ಖೂಡುಕ್ | khu:ḍuk |
| ಹಾಡುಕ್ | ha:ḍuk |
| ಮಾಡುಕ್ | ma:ḍuk |

ಈ ವ್ಯತ್ಯಾಸಗಳು ನಮ್ಮ ಗಮನಕ್ಕೆ ಬರುತ್ತವೆ. ವ್ಯತ್ಯಾಸವಾಗುವ ಧ್ವನಿಮಾಗಳು ಪದಮಧ್ಯ ಬರುವ 'ಳ್' ಮತ್ತು 'ಡ್ 'ಗಳು ಇವಕ್ಕೂ ಭಾಲ್ಕಿ, ಔರಾದ ಮತ್ತು ಹುಮನಾಬಾದ ತಾಲೂಕು ಕಡೆ ಹ್ರಸ್ವ ದೀರ್ಘಸ್ವರವಾಗಿ ಮಾರ್ಪಾಟಾಗಿದೆ. ಆದರೆ ಬಸವಕಲ್ಯಾಣ ತಾಲೂಕಿನ ಕಡೆಗೆ ಳ್ ಮತ್ತು ಡ್ ಗಳಿಗೆ 'ಉ' ಸ್ವರ ಸೇರುತ್ತದೆ.

ನಡ್ಪತಿ : naḍpatI ಎಂದರೆ ನಡಾವಳಿಕೆ ಇದು ಹುಮನಾಬಾದ ತಾಲೂಕಿನಲ್ಲಿ ಬಳಕೆಯಲ್ಲಿದೆ ಇದೆ ನಡ್ಪತಿ ಭಾಲ್ಕಿ ತಾಲೂಕಿನಲ್ಲಿ 'ನಡ್ತಿ' ಎಂಬ ರೂಪದಲ್ಲಿ ಕಂಡುಬರುತ್ತದೆ. ಔರಾದ್ ತಾಲೂಕಿನ ಗಡಿ ಭಾಗದಲ್ಲಿ ಭಾಲ್ಕಿ ತಾಲೂಕಿನ ಪಶ್ಚಿಮ ಭಾಗಕ್ಕೆ 'ಚ್ಯಾಲ' ಬೀದರ ಹಾಗೂ ಭಾಲ್ಕಿ ತಾಲೂಕಿನ ಪೂರ್ವಕಡೆ 'ಗುಣ' ಎಂಬ ರೂಪ ತಾಳಿದೆ ಈ ನಡ್ಪತಿ.

| | | |
|---|---|---|
| ಭೀಟ್ | bhi:ṭ | ಬೀಸಾಕು |

ಭಾಲ್ಕಿ ಕಡೆ ಭೀಟ್ ಎಂದೆ ಬಳಕೆಯಲ್ಲಿದೆ. ಈ ಪದವೆ ಮಾಂಜ್ರಾ ನದಿ ದಂಡೆಯ ದಕ್ಷಿಣಕಡೆ ಭಿಡ್ಸ್ಯಾಕ್ (ಭಿಡ್ಸ್ ) ಹುಮನಾಬಾದ್ ಕಡೆ ಹಾರ್ರುಡಿ ಎಂದಾಗುತ್ತವೆ. 'ಆದ-ಅದ' ಎಂಬ ಪದಳು ಹೇಗೆ ವ್ಯತ್ಯಾಸ ಕಾಣುತ್ತವೆ ಎಂಬುದು ನೋಡೋಣ ಆದ ಎಂದರೆ ಇದೆ, ಇವೆ ಎಂಬರ್ಥ ಸೂಚಿಸುತ್ತದೆ.

| | | |
|---|---|---|
| ಹಾಲು ಅವಾ | ha:lU ava: | ಹಾಲು ಇವೆ |
| ಮಜ್ಗಿ ಅದಾ | maJgi ada: | ಮಜ್ಜಿಗೆ ಇದೆ |
| ಮಸುರ್ ಅದಾ | masur ada: | ಮೊಸರು ಇದೆ |
| ಜ್ವಾಳ ಅವಾ | Jva:ḷa ava: | ಜೋಳ ಇವೆ |
| ಹಿಟ್ಟ ಅದಾ | hiṭ ada | ಹಿಟ್ಟು ಇದೆ |
| ಬ್ಯಾಳಿ ಅವಾ | bElt ava: | ಬೇಳೆ ಇವೆ(ಒಣ ಬೇಳೆಗೆ ಮಾತ್ರ) |
| ಪಲ್ಯ ಅದಾ | palE ada: | ಪಲ್ಯೆ ಇದೆ |

ಇಲ್ಲಿ ಇವೆ>ಅವಾ ಇದೆ>ಅವಾ ಶಬ್ದಾದಿಯ 'ಇ' ಲೋಪವಾಗಿ ಆ ಸ್ವರ ಬರುತ್ತದೆ. ಈ ಪ್ರಭಾವ ಬೀದರ ಕನ್ನಡದಲ್ಲಿ ಲಿಂಗಭೇದ, ಸಾಮಾಜಿಕಭೇದ, ಪ್ರಾದೇಶಿಕ ಭೇದವಿಲ್ಲದೆ ಬಳಕೆಯಲ್ಲಿವೆ.

ಒಣಟಾಂಗ್ರಿ

ಒಣಪೋರಿಗುಳ್

ಗೇಡಿ : ಕಿಡುಗೇಡಿ

ತಿಳಗೇಡಿ

ಅನಗೇಡಿ

ಕುಡು : ಮನುಸುಕುಡ

ಶ್ರಾಪ್ ಕುಡು

ಸಜಾಕುಡು

ಪೋರಿ ಕುಡು

ಹಾಕು : ಹರ್ದುಹಾಕು

ಮುದ್ರಾ್ಕು

ಹುಡ್ಡಹಾಕು

ಬಗುಲ್ಹಾಕು

ಭಜನಿಹಾಕು

ಹಿಡಿ : ಕೈಹಿಡಿ

ಧಾರಹಿಡಿ

ದುಸ್ಮನಿ ಹಿಡಿ

ಹೀಗೆ ಒಂದಲ್ಲ ಎರಡಲ್ಲ ಉಂಡೆ ಉಂಡೆಯಾಗಿ ನುಡಿಗಟ್ಟುಗಳು ಸಾಮಾಜಿಕವಾಗಿ ಹಾಗೂ ಪ್ರಾದೇಶಿಕವಾಗಿ ಕೊಡಬಹುದು.

ಮಾತಿನ ಭಾವನೆಯನ್ನು ಸ್ಪಷ್ಟಗೊಳಿಸಲು ಉಪಮಾವಾಚಕ ಪದ ಪುಂಜಗಳನ್ನು ಬಳಸಿದ ಉದಾಹರಣೆ ಉಂಟು. ಯಾವ ಛಂದಸ್ಸಾಲಂಕಾರಗಳ ಒಡನಾಟಗಳಿಲ್ಲದೆಯೋ ನಮ್ಮ ಸಾಮಾಜಿಕರು ನುಡಿಗಟ್ಟುಗಳು ಬಳಸುವರು. ಇವರಿಗೆ ಛಂದ್ ಅನ್ನಿಸಿದರೆ ಸಾಕು. ಆದರೂ ಕೂಡ ಸ್ವಾರಸ್ಯಕರ ಅರ್ಥ ಗರ್ಭೀತವಾಗಿರುತ್ತವೆ. ಇಂಥದಕ್ಕೆ ವಿಶಿಷ್ಟಾರ್ಥ ನುಡಿಗಟ್ಟುಗಳೆಂದು ಕರೆಯುವರು. ಅಂತಹ ನುಡಿಗಟ್ಟುಗಳನ್ನು ಆರು ರೀತಿಯಾಗಿ ವಿಂಗಡಿಸಬಹುದು.

೧. ಪ್ರಾಣಿ ಪಕ್ಷಿಗಳಿಗೆ ಸಂಬಂಧಿಸಿದವುಗಳು

| | |
|---|---|
| ನಾಯಿ ಜನ್ಮ | ದುರಾವಸ್ಥೆ |
| ಕತ್ತಿಹೊಳ್ಳ್ಯಾದ | ದುರ್ಲಾಭ |

| | |
|---|---|
| ಗೂಗಿ ಖಿಂತಾದ | ಕಳಂಕಹಚ್ಚು |
| ಹಾಡಿಂದೆ ಹಾಡೊ ಕಿಸ್ ಬಾಯಿದಾಸ | ಕಂಠಪಾಠ |

೨. ರಾಮಾಯಣಕ್ಕೆ ಸಂಬಂಧಿಸಿದವುಗಳು

| | |
|---|---|
| ರಾಮರಾಜ್ಯ | ಉತ್ತಮರಾಜ್ಯ |
| ಸೀತಾರಾಮ | ಆದರ್ಶ ದಂಪತಿಗಳು |
| ಸಂಜೀವಿನಿ | ಜೀವದಾನ ಮಾಡುವವಸ್ತು |

೩. ಪುರಾಣಕ್ಕೆ ಸಂಬಂಧಿಸಿದು

| | |
|---|---|
| ಬರಮಗಂಟು | ಶಾಸ್ವತ ಸಂಬಂಧ |
| ಆಯಿವಾರ | ತುಜಾಪುರತಾಯಿಯವಾರ(ಮಂಗಳವಾರ) |
| ಪವಿತ್ರಭಾನುವಾರ | ಯೇಸುವಿಗೆ ಸಂಬಂಧಿಸಿದ ವಾರ |

೪. ಸಾಮಾನ್ಯ ವಸ್ತುಗಳಿಗೆ ಸಂಬಂಧಿಸಿದವು

| | |
|---|---|
| ಘಾಳಿಮಾತು | ವ್ಯರ್ಥವಾದ ಮಾತು |
| ಕರಿಕಾಗಿ | ನೀಚ ತಾತ್ಸಾರ |
| ಕಾಲುಬಿಟ್ಟಕತ್ತಿ | ನೀಚತಾತ್ಸಾರ/ಹಿಡಿತ ಇಲ್ಲ |

೨. ಇತರ

| | |
|---|---|
| ಕಲ್ಲಿನ ಮೈ | ಗಟ್ಟಿಶರೀರ |
| ಚಕ್ಕರ | ತೊಡಕಾಟದ ಸನ್ನಿವೇಶ |
| ಬರೀವಟಕಿ | ಬರೀದಾದ\ಪ್ರಯೋಜನೆಯಿಲ್ಲದ್ದು |
| ಕಣ್ಣುಹುಡಿ | ಸನ್ನೆಮಾಡು |
| ಭಾರಿ | ಭಯಂಕರ |
| ಕೈಹಾಕು | ಕೆಲಸ ಕೈಗೆತ್ತುಕೊಳ್ಳು |
| ನಮಸ್ತೆ | ಗೌರವ ತೋರಿಸು |
| ಕಣ್ಹಾಕು | ದೃಷ್ಟಿಹಾಯಿಸು |
| ಕಲ್ಹಾಕು | ಕೆಡಿಸು |

ಇಂಥ ವಿಶಿಷ್ಟಾರ್ಥದ ನುಡಿಗಟ್ಟುಗಳು ಬೀದರ ಕನ್ನಡದಲ್ಲಿ ಸಿಗುತ್ತವೆ. ಇವು ಗ್ರಾಮೀಣ ಪರಿಸರದ ಜನರ ರೀತಿ ನೀತಿಗಳು ಅವರು ಬದುಕಿನಲ್ಲಿ ಅನುಭವಿಸುವ ಭಾವನೆಗಳ ಅಭಿವ್ಯಕ್ತವಾಗುತ್ತವೆ. ಇದರಿಂದ ಅವರ ಜೀವನದ ಮೌಲ್ಯವನ್ನು ಪ್ರತಿಬಿಂಬಿತವಾಗುತ್ತದೆ.

## ೩.೪. ಬೀದರ ಕನ್ನಡದ ಅನುಕರಣವಾಚಕಗಳು

'ಕಾಗದ ಟರ್ರನೆ ಹರಿಯಿತು' 'ಸೀರಿ ಥಳಥಳ' 'ಹೊಳಿತು' 'ಹಾವು' ಸಡಡಡ 'ಹೊಯ್ತು' ಇಂಥ ವಾಕ್ಯಗಳು ನಮ್ಮ ದೈನಂದಿನ ಜೀವನದಲ್ಲಿ ಸದಾ ಬಳಸುತ್ತೇವೆ. ಇಲ್ಲಿ ಬಳಕೆಯಾದ 'ಟರ್ರನೆ', 'ಥಳಥಳ', 'ಸಡಡಡ' ಇಂಥ ಪದಗಳು ಸೃಷ್ಟಿಯಲ್ಲಿ ಉಂಟಾದ ಸದ್ದನ್ನು ಉಚ್ಚಾರಣೆಯ ಮೂಲಕ ತಿಳಿಪಡಿಸುತ್ತದೆ. ಬರೀ ಸದ್ದು ಮಾತ್ರವಲ್ಲದೆ ಅದರ ಆಕಾರ, ಚಲನೆ ಕ್ರಿಯೆಕಾರ್ಯಗಳನ್ನು ಸಹ ಅನುಸರಿಸುವ ಧ್ವನ್ಯುಚ್ಚಾರಣೆಗಳಿವು. ಹೊರಡುವ ಸದ್ದಿಗೂ ನಮ್ಮ ಉಚ್ಚಾರಣೆಗೂ ಸಾಮ್ಯತೆ ಇಲ್ಲಿರುತ್ತದೆ. ಬೀದರ ಕನ್ನಡಿಗರು ಅನೇಕ ಅನುಕರಣವಾಚಕಗಳಿಗೆ ಅರ್ಥಕೊಟ್ಟಿದ್ದಾರೆ. ಅವುಗಳನ್ನು ಕೇಂದ್ರವಾಗಿಟ್ಟುಕೊಂಡು ಅನುಕರಣ ಪದಗಳ ಬಳಕೆಯ ಸಾಮಾಜಿಕ ಸಂದರ್ಭವನ್ನು ಅನುಲಕ್ಷಿಸಿಕ ಕೆಲವು ಅಂಶಗಳನ್ನು ಈ ಭಾಗದಲ್ಲಿ ಚರ್ಚಿಸಲಾಗಿದೆ. ಅನುಕರಣ ವಾಚಕಗಳು ವ್ಯಾಕರಣದಲ್ಲಿ ಅವ್ಯಯಗಳ ವರ್ಗಕ್ಕೆ ಸೇರುತ್ತವೆ. ಇವು ಭಾಷೆಯಲ್ಲಿಯ ಧ್ವನಿ ರೂಪಗಳು ಶುದ್ಧಾಕ್ಷರಗಳಲ್ಲ ಎಂದು ಕೇಶಿರಾಜ ಆಗಲೇ ಹೇಳಿದ್ದಾನೆ. ಅವುಗಳು ಶ್ರವಣದ ಮೂಲಕ ಕೇಳಬಹುದಲ್ಲದೆ ವರ್ಣಾವಲ್ಯತ್ತಿಗೆ ತರುವುದು ಸಾಧ್ಯವಾಗಲಾರದು. ಅವುಗಳಿಗೆ ಅರ್ಥ ಇರದಿದ್ದರೂ ಅವುಗಳನ್ನು ಬಳಸಿ ಹೇಳಿದರೆ ಕೇಳುವ ವ್ಯಕ್ತಿಗೆ ವಿಷಯ ಮನದಟ್ಟಾಗುತ್ತದೆ. ಇಷ್ಟು ನಿಖರತೆಯನ್ನು ಯಾವ ಶಬ್ದಗಳಿಂದ ಹೇಳಲು ಸಾಧ್ಯವಿಲ್ಲ.

ಅನುಕರಣವಾಚಕಗಳು ೧. ಧ್ವನ್ಯುಚ್ಚಾರಣೆ ಪುನರಾವೃತ್ತಿಯಾಗುವ ಅನುಕರಣಗಳು ಹಾಗೂ ೨. ಪುನರಾವರ್ತನೆ ಯಾಗದ ಧ್ವನ್ಯುಚ್ಚಾರಣೆಗಳು ಎಂದು ಎರಡು ವಿಧವಾಗಿ ವಿಭಾಗಿಸಬಹುದು.

೧. **ಧ್ವನ್ಯುಚ್ಚಾರಣೆ ಪುನರಾವರ್ತನೆಯಾಗುವ ಅನುಕರಣಗಳು :** ಟರಟರ, ಥಳಥಳ ಮುಂತಾದವು. ಇಂಥ ಅನುಕರಣವಾಚಕಗಳು ವಾಕ್ಯದಲ್ಲಿ ಒಂದೇ ಸಲ ಬಂದರೆ ಅದಕ್ಕೆ ಅರ್ಥ ಇರುವುದಿಲ್ಲ. 'ಪಾರ ಟರ ಟರ ಕಾಗದ ಹರಿತು' ಎಂಬಲ್ಲಿ ಟರಟರ ಎಂಬುದು ಕಾಗದ ಹರಿಯುವ ಕ್ರಿಯೆಯನ್ನು ಸೂಚಿಸುತ್ತದೆ. ಅಂತಹ ಅನುಕರಣೆಗಳು ಸ್ವತಂತ್ರವಾಗಿ ಬಳಕೆಯಾಗುವುದಿಲ್ಲ; ಬಳಕೆಯಾದರೂ ಅವುಗಳಿಗೆ ಅರ್ಥ ಇರುವುದಿಲ್ಲ.

೨. **ಪುನರಾವರ್ತನೆಯಾಗದ ಅನುಕರಣೆಗಳು :** 'ಕೂಸು ಕಾದುಗು ಟರ್ರಂತ್ಹರಿತು' 'ಹಾವು ಸರಕ್ಂತ ಹೊಯ್ತು' ಎನ್ನುವಲ್ಲಿ 'ಟರ್ರ', ಸರಕ್ ಸ್ವತಂತ್ರವಾಗಿ ಬಳಕೆಯಾಗುವುದರಿಂದ ಅಂಥವು ಸ್ವಾತಂತ್ರ ರೂಪಗಳೆಂದು ಕರೆಯಬಹುದು.

ಅನುಕರಣವಾಚಕ ಪದಗಳಿಗೆ ಅರ್ಥವೇ ಇಲ್ಲ ಎಂದು ಹೇಳಲಿಕ್ಕೆ ಆಗುವುದಿಲ್ಲ. ಅವುಗಳಿಗೂ ಸೂಕ್ಷ್ಮವಾಗಿ ಗಮನಸಿದಲ್ಲಿ ಅರ್ಥ ತಾನಾಗಿಯೆ ಹೊರ ಹೊಮ್ಮುತ್ತದೆ. 'ಕಂಬ್ಯಾಗಾ ತೋಲ್ ನೀಡ್ಕಿ

ಆಗಿವ್ಯ ಬಂದಾಳರಾ ನೀರು ಗಟಗಟ ಕೊಂಡುಳ್' ಎನ್ನುವಲ್ಲಿ ನೀರನ್ನು ಕುಡಿದಳು ಯಾವ ರೀತಿ? ಎಂಬುದನ್ನು ಸ್ಪಷ್ಟಪಡಿಸುವ ಕಾರ್ಯವನ್ನು ಅನುಕರಣವಾಚಕ ಪದಗಳು ಮಾಡುವುದರಿಂದ ಅವುಗಳನ್ನು ಭಾಷೆಯ ಅರ್ಥಪೂರ್ಣ ಘಟಕಗಳೆಂದೇ ತಿಳಿಯಬೇಕು. ಆದರೆ ಅವುಗಳ ಅರ್ಥ ಇಂಥದ್ದೆ ಎಂದು ಸ್ಪಷ್ಟವಾಗಿ ಹೇಳಲು ಬರುವುದಿಲ್ಲ. ಅವು ಸಂದರ್ಭಕ್ಕನುಸಾರವಾಗಿ ಅರ್ಥವನ್ನು ಹೊರ ಸೂಸುತ್ತವೆ. ಅವುಗಳ ಬಗ್ಗೆ ಈ ಕೆಳಗೆ ಚರ್ಚಿಸಲಾಗಿದೆ.

೧. ಒಂದು ಘಟನೆಯ ವಿಷಯವನ್ನು ಸ್ಪಷ್ಟಪಡಿಸುವಾಗ ಅನುಕರಣ ಪದಗಳು ಬಳಸಿಯೇ ಹೇಳುವುದು ಉತ್ತಮ ಎನಿಸುತ್ತದೆ. 'ದನಕಾಯ್ ಪಾರ ಕಾಲ್ಜಾರಿ ಧಪ್ಪಂತ ಬಿದ್ದ' 'ದನಗುಳ್ ಕೊಳ್ಳಾಗಿನ್ ಘಂಟಿ ಘುಳ್‌ಘುಳ್ ಅಂತ ಅವಾಜ್ ಮಾಡ್ತು' ಎನ್ನುವಂಥ ವಾಕ್ಯಗಳನ್ನು ಗಮನಿಸಿದಾಗ ಹುಡುಗ ಬಿದ್ದ/ ಬೀಳುವ ಕ್ರಿಯೆಯನ್ನು ತೋರಿಸುತ್ತದೆ. ಎರಡನೆಯ ವಾಕ್ಯ ಗಂಟೆಯ ಸದ್ದನ್ನು ತಿಳಿಸುತ್ತದೆ. ಇಂಥ ಕಡೆಗಳಲ್ಲಿ ನಿರ್ದಿಷ್ಟತೆಯನ್ನು ಸೂಚಿಸಲು ಅನುಕರಣ ಪದಗಳು ಬಳಕೆಯಾಗುತ್ತವೆ. ಮಾತಿನ ಭಾವನೆಯನ್ನು ಸ್ಪಷ್ಟವಾಗಲು ಇವು ನೆರವಾಗುತ್ತವೆ.

೨. ಭಾವನೆಗಳು ಅಥವಾ ಕ್ರಿಯೆಗಳು ವ್ಯಕ್ತಪಡಿಸುವ ಸಾಧನವಾದರೆ ಅನುಕರಣ ಪದಗಳು ವಾಚಕಗಳಾಗುತ್ತವೆ. ಅನುಕರಣವಾಚಕ ಪದಗಳಲ್ಲಿ ಸ್ವಾರಸ್ಯ ಹಾಗೂ ಪರಿಣಾಮಗಳೆರಡು ಉಂಟು. ಹೆಂಡತಿಯಾದವಳು ಪರಪುರುಷನೊಡನೆ 'ಕಿಲಕಿಲನೆ ಗುಲ್ಲುಸೊದು' ಎಷ್ಟು ಪರಿಣಾಮಕಾರಿ! ಈ ಕಿಲಕಿಲನೆ ನಗು ಎಂಥ ಪರಿಣಾಮವನುಂಟು ಮಾಡುತ್ತದೆ. ಅನುಕರಣೆ ವಿಧೆಯತೆಯಿಂದ ಬಾಳುವುದನ್ನು ಕಲಿಸುತ್ತದೆ.

೩. ಅನುಕರಣ ಪದಗಳು ಹಳ್ಳಿಗರ ಆಡುನಡಿಗಳಲ್ಲಿ ಹೆಚ್ಚು. ಒಂದು ಜಾನಪದ ಹಾಡಿನಲ್ಲಿ

"ಗುಲ್ ಗುಲ್ ಗುಲಕ್
ಹೋಗಾನಡಿ ಹೊಲಕ್
ಸೀತನಿ ತಿಲ್ಲಕ್"

ಇಂಥ ಪ್ರಯೋಗಗಳು ಬರುತ್ತವೆ. ಸಣ್ಣಾಟ, ದೊಡ್ಡಾಟ ಡಪ್ಪಿನಾಟಗಳಲ್ಲಿ; ಅವುಗಳ ಹಾಡುಗಳಲ್ಲಿ ಈ ರೂಪಗಳು ಬಹಳಷ್ಟು ಸಿಗುತ್ತವೆ.

'ಹಲಲಲಲಲ ಸಾರತಿ'
'ದಂತನನನ, ದಂತನನನ'
'ಭರರರರರರ ಬಂದಿ'
'ಸರರರರರರ ಹೋಗ'
'ಜರ್ರಂತ ಇಳ್ದಿ'
'ಮರ್ರಂತ ಮಣ್ದಿ'
'ಕಚಕಚ ಕಡ್ದು ಗಪಗಪ ಬುಟ್ಟೆಥುಂಬು'

'ಖನ್ ಖನ್ ಖನ್ ಖನ್ ಹಲ್ಗಿ ಭಾರ್ಸುರ್'
'ತುನ್ ತುನ್ ತುನ್ ತುನ್ ತುಂತುನಿಭಾರ್ಸುರ್'
'ಟಪಟಪಟಪಟಪ ಕುಳ್ ಬಡಿ'
'ಭರಭರಭರ ಮಜ್ಗಿಮಾಡು'

ಬೀದರ ಜಿಲ್ಲೆಯಲ್ಲಿ ದನಕಾಯಿ ಹುಡುಗರು ದೀಪಾವಳಿ ಹಬ್ಬದ ಐದಾರು ದಿನಗಳು ರಾತ್ರಿ ಸಮಯದಲ್ಲಿ ದೀಪ ಹೊತ್ತಿಸಿಕೊಂಡು ತಮ್ಮ ತಮ್ಮ ಮಾಲಿಕರ ಮನೆಗೆ ಹೋಗಿ ದನಗಳಿಗೆ ಆರತಿ ಮಾಡುವುದು ಸಂಪ್ರದಾಯವಿದೆ. ಇದು ನಾಲ್ಕಾರ ಹುಡುಗರು ಕೂಡಿ ಹತ್ತಾರು ಮನೆಗಳಿಗೆ ಹೋಗಿ ಆರತಿ ಮಾಡಿ ಕಡೆಯ ದಿವಸ ಮಾಲಿಕನಿಂದ ಹಣ ದೀಪಕ್ಕೆ ಎಣ್ಣೆ ಪಡೆಯುತ್ತಾರೆ. ಈ ಸಂದರ್ಭದಲ್ಲಿ ಹಾಡುವ ಕೆಲವು ಹಾಡುಗಳಲ್ಲಿ ಹೆಚ್ಚಾನು ಹೆಚ್ಚು ಅನುಕರಣೆಯ ಪದಗಳೇ ಬರುತ್ತವೆ.

೧ ಮಾರ್‌ಮರಳ್ಯಾನ ಹುಲ್ಲ್ ನೋಡು।
ಯಮ್ಮಿ ಮುಂದ ಹಾಕ್ನೋಡು।
ಭರ್‌ಭರ್ ಹಾಲ್ನೋಡ।
ಕೆಸ್ರಿನಂತ ಮಸುರ್ ನೋಡು।
ಕಲ್ಲಿನಂತ ಬೆಣ್ಣಿ ನೋಡು।
ಜನ್‌ಜನ್ ರುಪಾಯ್ ನೋಡು।

೨ ಹತ್ನಿನ್ನವ್ವನ್ ಕ್ವಾಣೆನವ್ವನ।
ಹೊರಿ ಹುಲ್ ತಂತಿ।
ಕೊಡ ನೀರು ಕುಡಿಲೆ।
ಆರಿಕ್ಕಟದರ ಒಂಯ್‌ಒಂಯ್ ಮಾಡ್ತಿ।

ಅನುಕರಣೆ ಮಾತುಗಳು ಸಹಜವಾಗಿ ಹೊರಸೂಸುತ್ತವೆ. ಆದರೆ ಗಂಭೀರವಾಗಿರುವ ಚರ್ಚೆಗಳಲ್ಲಿ ಇವುಗಳ ಬಳಕೆ ಬಹಳ ಕಡಿಮೆ. ಕೆಲವೊಮ್ಮೆ ಅಂಥ ಪ್ರಯತ್ನ ವಿಫಲತೆಗೆ ಕಾರಣವಾಗುತ್ತವೆ.

೪. ಜಡವಸ್ತುಗಳನ್ನು ಸೂಚಿಸುವಾಗ ಧ್ವನ್ಯಾನುಕರಣೆ ಆ ವಸ್ತುವಿನ ಗುಣವನ್ನು ಸೂಚಿಸಿದರೆ ಉಳಿದವುಗಳು ಧ್ವನ್ಯುಚ್ಚಾರಣೆಯ ಕ್ರಿಯೆಯನ್ನು ಸೂಚಿಸುತ್ತವೆ.

೪.೧. ಜಡವಸ್ತುಗಳ ಅನುಕರಣಾವ್ಯಯಗಳು

'ಬಾಕುಲ್ ಖಟ್ ಖಟ್ ಸಪ್ಪಳಾಯಿತು'
'ಬಳಿಗುಳ ಘಳ್‌ಘಳ್ ಸಪ್ಪಳ ಕೇಳಿ ಬಂತು'
'ಗಡಗಿ ಟೊಂಗ್‌ಟೊಂಗ್ ಭಾರುಸ್ತಾ ಕುಂಬಾರ'
'ಛನ್‌ಛನ್ ಚೈನ್ ಆವಾಜಾಯಿತು'

೪.೨. ಸಚೇತನ ಜೀವಿಗಳ ಅನುಕರಣಾವ್ಯಯಗಳು

ಬೆಕ್ಕು 'ಮ್ಯಾಂವ್ ಮ್ಯಾಂವ್' ಮಾಡ್ತು
ನಾಯಿ 'ಭೌಭೌ' ಮಾಡ್ತು
ಗುಬ್ಬಿ 'ಚಿಂವ್ ಚಿಂವ್' ಮಾಡ್ತು

ಕಾಗಿ 'ಕಾವ್ ಕಾವ್' ಅಂತು
ಕೋಳಿ 'ಕೊಕ್ ಕೊಕ್' ಅಂತು
ಆಕುಳ್ ಅಂಭ್ಯಾ(ಭ್ಯಾಂಭ್ಯಾಂ) ಮಾಡ್ತುದ.

ಈ ವಾಕ್ಯಗಳು ಆಯಾ ಅವ್ಯಯಗಳ ಭಾವವನ್ನು ಸೂಚಿಸುತ್ತದೆ. ಭಾಷೆ ಸೌಂದರ್ಯಕ್ಕೆ ಅನುಕರಣ ಪದಗಳು ತುಂಬ ನೆರವಾಗುತ್ತವೆ. ವ್ಯಂಗ್ಯ, ನಿಂದೆ, ಕಟಕಿ, ತಿರಸ್ಕಾರ ಅಣಕ ಹಾಗೂ ಕೋಪ ಇತ್ಯಾದಿ ಭಾವನೆಗಳನ್ನು ವ್ಯಕ್ತಪಡಿಸಲು ಅನುಕರಣವಾಚಕಗಳು ಒಳ್ಳೆಯ ಮಾಧ್ಯಮ. ಅರ್ಥದ ದೃಷ್ಟಿಯಿಂದ ಅವು ಭಾಷೆಯಲ್ಲಿ ಮುಖ್ಯವಲ್ಲದಿದ್ದರೂ ಗಣನೀಯವಾದ ಪಾತ್ರವನ್ನು ಧ್ವನಿಸುತ್ತವೆ ಎಂಬುದನ್ನು ಗಮನಿಸಬೇಕು.

### ೩.೪.೧. ಬೀದರ ಜನಪದರು ಪ್ರಾಣಿಗಳನ್ನುದ್ದೇಶಿಸಿ ಮಾಡುವ ಅನುಕರಣವಾಚಕಗಳು

ಮಾನವನಿಗೆ ಕೇವಲ ಮನುಷ್ಯ ಸಹವಾಸವೇ ಸಾಲದು. ತನ್ನ ನಿತ್ಯ ಉಪಜೀವನಕ್ಕೆ ಸಹಕಾರಿಯಾಗಲು ಕೆಲವು ಪ್ರಾಮಿಗಳನ್ನು ಇವನು ಸಾಕುತ್ತಾನೆ.ಕೃಷಿ ಪ್ರಧಾನವಾದ ಈ ಜಿಲ್ಲೆಗೆ ಎತ್ತು, ಆಕಳು, ಕತ್ತೆ, ಎಮ್ಮೆ ಸಲುಹುವುದು ಅನಿವಾರ್ಯವಾಗಿದೆ. ಎತ್ತುಗಳಿಗೆ ಹೊಲ ಉತ್ತುಬಿತ್ತಲು ಬಳಸಿದರೆ, ಆಕಳು ಎಮ್ಮೆಗಳು ಹೈನುಗಾರಿಕೆಗೆ ಸಾಕುತ್ತಾನೆ. ಆದರೆ ಮತ್ತೆ ಕೆಲವು ಪ್ರಾಣಿಗಳಾದ ನಾಯಿ, ಬೆಕ್ಕು ಕೂಡ ಸಾಕುತ್ತಾನೆ. ನಾಯಿ ರಾತ್ರಿ ಸಮಯದಲ್ಲಿ ಮನೆಕಾಯಲು ಸಾಕಿದರೆ, ಮನೆಯೊಳಗಿನ ಇಲಿಗಳ ಕಾಟದಿಂದ ಪಾರಾಗಲು ಬೆಕ್ಕು ಸಾಕುತ್ತಾನೆ. ಈ ನಾಯಿ ಬಿಕ್ಕು ಕರಕುಶಲಕರ್ಮಿಗಳು ಕೂಡ ಸಾಕುತ್ತಾರೆ. ಕೆಳವರ್ಗದವರಲ್ಲಿ ನಾಯಿಗಳು ಹೆಚ್ಚಿರುವುದು ಗಮನಕ್ಕೆ ಬರುತ್ತದೆ.

ಹೆಳುವ, ಕೊರವ ಮತ್ತು ಒಡ್ಡರು ಹಂದಿಯನ್ನು ಮೌಂಸಕ್ಕಾಗಿ ಸಲಹುತ್ತಾರೆ. ಇದರ ಕೊಬ್ಬು ದಗಳಿಗೆ ಪೆಟ್ಟಾದಕಡೆ ಸವರಿದರೆ ಗುಣವಾಗುತ್ತದೆ. ಅದರಿಂದ ಇದು ಒಕ್ಕಲಿಗರಿಗೂ ಉಪಯುಕ್ತ ಪ್ರಾಣಿಯಾಗಿದೆ. ಕತ್ತೆಗಳು ಕುಂಬಾರರು, ಕಲ್ಲು ಕುಟಿಕರು, ಅಗಸರು ಮುಂತಾದವರು ಸಾಕುತ್ತಾರೆ.

ಕುರಿ ಮುಖ್ಯವಾಗಿ ಕುರುಬರು ಸಾಕುತ್ತಾರೆ. ಆಡುಗಳು ಹಾಗೂ ಕೋಳಿಗಳು ಯಾವ ಜಾತಿಯವರೂ ಸಾಕಬಹುದು. ಇವೆಲ್ಲ ಕೆಳವರ್ಗದವವರಲ್ಲಿ ಹೆಚ್ಚಾಗಿ ಕಾಣಬಹುದು. ಈ ಮುಂತಾದ ಪ್ರಾಣಿಗಳಿದ್ದ ಮೇಲೆ ಇವುಗಳಿಗೆಲ್ಲಕ್ಕೂ ಕರೆಯುವುದೊ, ಮುಂದೆ ಸಾಗಲು ಸನ್ನೆ ಮಾಡುವುದೊ, ನೀರು ಕುಡಿಯಲು ಹೇಳುವದೋ ಮುಂತಾದುದಕ್ಕೆಲ್ಲ ಒಂದೊಂದು ಧ್ವನಿಮಾ, ಅನುಕರಣೆ ಮಾಡಿ ಸೂಚಿಸುವ ಧ್ವನಿಗಳು ಬೀದರ ಜಾನಪದರಲ್ಲಿ ವಿಶಿಷ್ಟವಾಗಿದೆ.

೧. ಎತ್ತು ಮತ್ತು ಆಕಳಿಗೆ

| ಅನುಕರಣವಾಚಕ | ಅಂತಾರಾಷ್ಟ್ರೀಯ ಲಿಪಿ | ಅರ್ಥ |
|---|---|---|
| ದಾದಾದಾ | da:da:da: | ಮುಂದೆ ಸಾಗು |
| ಹಾ...ರೆ ಹಾ.. | ha:...re...ha... | ತಡೆ |
| ಹುಸ್ಸಾ | hussa: | ಎಚ್ಚರಿಕೆ |
| ಹರ್ರ | harrra | ತಿರುಗು |
| ಛೆವ್‌ಛೆವ್ ಛೇ....ವ್ | chavchavche:v | ನೀರುಕುಡಿ |
| ಅಂಬ್ಯಾ | ambE | ಬಾ |

೨. ಎಮ್ಮೆ ಕೋಣಗಳಿಗೆ

| | | |
|---|---|---|
| ಹಲ್ಯಾಹಲ್ಯಾ | halEhalE | ಮುಂದೆ ಸಾಗು |
| ಅಂಯ್ | a:y | ಬಾ |
| ಛೆವ್‌ಛೆವ್ | chevcheu | ನೀರು ಕುಡಿ |

೩. ಕತ್ತೆಗೆ

| | | |
|---|---|---|
| ಹದಾ | hada | ಮುಂದೆ ಸಾಗು/ಎಚ್ಚರಿಕೆ |
| ಛೆವ್‌ಛೆವ್ | chavechav | ನೀರುಕುಡಿ |

೪. ಕುರಿ/ಆಡುಗಳಿಗೆ

| | | |
|---|---|---|
| ಹರ್ರಿ | harrI | ಎಚ್ಚರಿಕೆ/ಮುಂದೆಸಾಗ |
| ಛೆವ್‌ಛೆವ್ | chavchav | ನೀರುಕುಡಿ |

೫. ಹಂದಿಗೆ

| | | |
|---|---|---|
| ಡುರ್‍ರ್ ಡುರ್ | durdur | ಮುಂದೆನಡೆ/ಎಚ್ಚರಿಕೆ |

೬. ಕೋಳಿಗೆ

| | | |
|---|---|---|
| ಛೆವ್‌ಛೆವ್ | chavchav | ಮುಂದೆಸಾಗು/ಎಚ್ಚರಿಕೆ |

೭. ಕುದುರಿಗೆ

ಹಟ್‌ಹಟ್ ಎಂದರೆ ಎಚ್ಚರಿಕೆ ಮುಂದೆಸಾಗು ಎಂದಾಗುತ್ತದೆ.

ಬೆದಿಗೆ ಬಂದ ಆಕಳಿಗೆ ಪೋಲ್(ಹೋರಿ) ಹತ್ತಿರ ತಂದು ಆಕಳಿಗೆ ಅಲ್ಲಾಡದಂತೆ ಕಟ್ಟಿ ಪೋಳನ್ನು ಉದ್ದೇಶಿಸಿ ವಟ್‌ವಟ್‌ವಟ್ ವಟ್, ಹುಲಿಲಿಲಿಲಿ ಹುಹುಲಿಲಿಲಿ ಅಂದರೆ ಆಕಳ ಮೇಲೆ ಹಾರು, ಹಬ್ಬು ಎಂಬರ್ಥ, ಎಮ್ಮೆಕೋಣ, ಕುರಿ, ಹೋತಗಳಿಗೂ ಅನ್ವಯವಾಗುತದೆ

ಈ ಮೇಲೆ ಹೇಳಲಾದ ಅನುಕರಣನಗಳು ಈ ಪ್ರಾಣಿಗಳಿಗೆಲ್ಲ ಅರ್ಥವಾಗುತ್ತದೆ. ಅದರಂತೆ ಪ್ರಾಣಿಗಳು ವರ್ತಿಸುವದು ಆಶ್ಚರ್ಯ. ಅಂದರೆ ಇವುಗಳಿಗೆ ಭಾಷೆ ತಿಳಿಯುತ್ತದೆ ಎಂಬಂತೆ ವರ್ತಿಸುತ್ತವೆ.

೮. ಬೆಕ್ಕುಗಳಿಗೆ

| | | |
|---|---|---|
| ಹಡಿ | hadI | ಮುಂದೆಸಾಗು/ಎಚ್ಚರಿಕೆ |
| ಕೂಕ್ | ku:k | ಬಾ |
| ಛೆವ್ | chev | ಹಿಂಬಾಲಿಸು/ಹಿಡಿ/ಕಟ್ಟು |

೯. ನಾಯಿಗಳಿಗೆ ಆಡಳ ದನಿಯಂತೆ ಮ್ಯಾವ್, ಮ್ಯಾವ್

ಎಲ್ಲ ಪ್ರಾಣಿಗಳು ಛೆವ್ ಛೆವ್ ಎಂದಾಗ ನೀರಿಗಿ ಓಡಿದರೆ ನಾಯಿ ಯಾರಿಗಾದರೂ ಕಡಿಯಲು ಓಡುತ್ತದೆ.

೧೦. ವಾನರಕ್ಕೆ

| | | |
|---|---|---|
| ಚಲಿಕ್ | ca lI | ಮುಂದೆಸಾಗು/ಎಚ್ಚರಿಕೆ |
| ಊಂ | u:m | ಎಚ್ಚರಿಕೆ ಅಣಕಿಸುವದು |
| ಸ್ | s.. | ಹಲ್ಲು ಕಿರಿಯುವದು |

ಚಲ್ ಎಂದರೆ ಉರ್ದು ಭಾಷೆಯಲ್ಲಿ ನಡೆ ಎಂಬ ಅರ್ಥ ಹಟ್ ಎಂದರೆ ಭಾಷೆಯಲ್ಲಿ ಸರಿ, ನಡೆ ಎಂಬರ್ಥ ಬರುವದು. ಇದು ಕೇವಲ ಕುದುರೆಗೆ ಮಾತ್ರ ಅನ್ವಯವಾಗುತ್ತದೆ. ನಾಯಿಗೆ ಅನ್ವಯವಾಗುವ ಹಡಿ ಧ್ವನಿಮಾ ಉರ್ದುವಿನ 'ಹಟ್' ಎಂಬ ಪದದಿಂದ ಬಂದಿದೆ 'ಟ' ಕಾರ ಡಕಾರಾಗಿ ಪರಿವರ್ತನಗೊಂಡಿದೆ.

## ೩.೫. ಬೀದರ ಜಿಲ್ಲೆಯ ಸ್ಥಳನಾಮಗಳ ಸ್ವರೂಪ

ಸ್ಥಳ ನಾಮಗಳು ನಾಡಿನ ಚರಿತ್ರೆಯನ್ನು ಸಂಸ್ಕೃತಿಯನ್ನು, ಪರಿಸರವನ್ನು ಜೀವಾನುಬೋಗಗಳನ್ನು ಪ್ರತಿಬಿಂಬಿಸುತ್ತವೆ. ಕಾವ್ಯ ಹಾಗೂ ಶಾಸನಗಳಂತೆ ನಾಮಗಳೂ ಸಹಾಯಕ ಸಾಮಗ್ರಿಗಳಾಗುತ್ತವೆಂದು ವಿದ್ವಾಂಸರು ಕಂಡುಕೊಂಡಿದ್ದಾರೆ. ಇವುಗಳ ಮೂಲಕ ಒಂದು ಪ್ರದೇಶದ ಸಾಮಾಜಿಕ, ಧಾರ್ಮಿಕ, ಭೌಗೋಳಿಕ ಜೀವನದ ಸ್ವರೂಪವನ್ನು ಅರ್ಥಮಾಡಿಕೊಳ್ಳುವ ಪ್ರಯತ್ನ ಒಂದು ಶೈಕ್ಷಣಿಕ ಶಿಸ್ತಾಗಿ

ಬೆಳೆಯುತ್ತಲಿದೆ. ನಾಮಪದಗಳನ್ನು ಸ್ಥಳನಾಮ ವ್ಯಕ್ತಿನಾಮಗಳೆಂದು; ವ್ಯಕ್ತಿನಾಮಗಳು ವ್ಯಕ್ತಿ ನಾಮ ಮತ್ತು ಕುಲನಾಮಗಳೆಂದು ವರ್ಗೀಕರಿಸಲಾಗಿದೆ. ಇವು ಸಾಮಾಜಿಕ ವಿಶಿಷ್ಟ ಮುದ್ರೆಯನ್ನು ಒತ್ತಿರುವದರಿಂದ ಇವುಗಳ ಅಧ್ಯಯನ ಇಂದು ಸಂಸ್ಕೃತಿ ಅಧ್ಯಯನದ ಮೌಲಿಕ ಸಂಧನವಾಗಿ ಪರಿಣಮಿಸಿದೆ.

ಸ್ಥಳನಾಮಗಳೆಂದರೆ ಆಯಾ ಸ್ಥಳಗಳ ಹೆಸರುಗಳೇ ಸ್ಥಳನಾಮಗಳು. ಅವುಗಳ ಅಧ್ಯಯನವೇ ಸ್ಥಳನಾಮ ವಿಜ್ಞಾನ. ಸ್ಥಳನಾಮಗಳಲ್ಲಿ ಸಾಮಾನ್ಯವಾಗಿ ಎರಡು ಘಟಕಗಳಿರುತ್ತವೆ. ಪೂರ್ವ ಭಾಗವನ್ನು ನಿರ್ದಿಷ್ಟ(specific) ಉತ್ತರ ಭಾಗವನ್ನು 'ವಾರ್ಗಿಕ'(Generic) ಎಂದು ಕರೆಯಬಹುದು.

'ಇಂಚೂರು' ಎಂಬಲ್ಲಿ ಇಂಚರ ಎಂಬುದು ನಿರ್ದಿಷ್ಟ ಆಕೃತಿಮಾ; ಏಕೆಂದರೆ ಅದು ಆ ಊರಿನ ವೈಶಿಷ್ಟ್ಯವನ್ನು ಹೇಳುವಂಥದ್ದು. ಊರು ಎಂಬುದು ವಾರ್ಗಿಕ ಅಕೃತಿಮಾ; ಏಕೆಂದರೆ ಅದು ಸಾಮಾನ್ಯವಾಚಕ. ವಾರ್ಗಿಕಗಳು ಆ ಗ್ರಾಮದ ಸ್ವರೂಪವನ್ನು ತಿಳಿಸುವಲ್ಲಿ ಮಹತ್ವದ ಪಾತ್ರವಹಿಸುತ್ತವೆ. ಅವಗಳನ್ನು ಪ್ರಕೃತಿವಾಚಿ ವಸತಿವಾಚಿ ಮತ್ತು ನಿರ್ಮಾಣವಾಚಿ ಇತ್ಯಾದಿಯಾಗಿ ವರ್ಗಿಕರಿಸಬಹುದು.

ಪ್ರಕೃತಿವಾಚಿ - ಭೌಗೋಳಿಕ ಪರಿಸರ

ವಸತಿವಾಚಿ - ವಾಸಿಸುವ ಜನಾಂಗ ಇತಿಹಾಸ

ನಿರ್ಮಾಣವಾಚಿ - ಮನುಷ್ಯ ನಿರ್ಮಿತಗ್ರಾಮಗಳನ್ನು ತಿಳಿಸುತ್ತದೆ.

ನಿಸರ್ಗವಾಚಿ - ಕಲ್ಲೂರು, ಜಲಸಂಗಿ, ರಾಯಪಳ್ಳಿ ವಿಶಿಷ್ಟ ನಿಸರ್ಗದ ಹೆಸರುಗಳು ತಿಳುಸುತ್ತದೆ.

ಜನಾಂಗವಾಚಿ - ಖಟಕ ಚಿಂಚೋಳಿ, ಜಾಡರವಾಡಿ(ಏಕಲಾಸಪುರವಾಡಿ) ಕುರುಬಖೇಳ್ಗಿ

ವ್ಯಕ್ತಿವಾಚಿ - ಲಕ್ಷ್ಮಿನಗರ, ಕಲ್ಯಾಣರಾವ ಗೌಡರವಾಡಿ, ಬಸವಕಲ್ಯಾಣ

ನಿರ್ಮಾಣವಾಚಿ - ನವಬಾದ್, ಹೊಸಳ್ಳಿ

ಆದರ್ಶವಾಚಿ - ಭಾಗ್ಯನಗರ, ಆದರ್ಶನಗರ

ಈ ರೀತಿಯಾಗಿ ವರ್ಗೀಕರಿಸಬಹುದು

ಸ್ಥಳನಾಮಗಳು ಒಂದು ಪ್ರದೇಶದ ಭೌಗೋಲಿಕತೆಯನ್ನು ಅಲ್ಲಿಯ ಜನತೆಯ ಇತಿಹಾಸ, ಸಂಸ್ಕೃತಿಗಳ ಸ್ವರೂಪವನ್ನು ತಿಳಿಸಿಕೊಡುವ ಉತ್ತಮ ಸಾಧನವೆನಿಸಿದೆ. ಭಾಷಾಶಾಸ್ತ್ರದ ದೃಷ್ಟಿಯಿಂದ ಸ್ಥಳನಾಮ ಶೋಧನೆಗೆ ಆಗ್ರಮಾನ್ಯತೆ ಇದೆ. ಯಾವ ಗ್ರಂಥಗಳಲ್ಲೂ, ಕೋಶಗಳಲ್ಲೂ, ಆಡುಮಾತಿನಲ್ಲಿಯೂ ಉಪಲಬ್ದವಿರದ ಪ್ರಾಚೀನ ರೂಪಗಳು ಸ್ಥಳನಾಮಗಳಲ್ಲಿರುತ್ತವೆಂಬುದು ಗಮನಿಸಬೇಕಾದ ಸಂಗತಿಯಾಗಿದೆ.

(೧) ಖರ್ವಡ(ಕಾರ್ವಡಕ) ಹತ್ತರಿಂದ ಎರಡನೂರು ಮನೆಗಳಿಂದ ಕೂಡಿದಗ್ರಾಮ, ದೋಣಮುಖವು ನಾಲ್ಕುನೂರು ಮನೆಗಳ ಗ್ರಾಮ, ಠಾಣ(ಸ್ಥಾನಕವು) ೮೦೦ ಮನೆಗಳ ಗ್ರಾಮ, ನಗರ ಅಥವಾ ಪುರವು

ಲಂಂಕ್ಕಿಂತ ಹೆಚ್ಚು ಮನೆಗಳಿವ ಗ್ರಾಮವೆಂದು ಸೂಚನೆಗಳು ಸಿಗುತ್ತವೆ. ಆದುದರಿಂದ ಗ್ರಾಮ, ಬಾಡ, ಖೇಡ, ಖರ್ವಡ, ವಡಬ, ಪತ್ತನ, ನಗರ, ದ್ರೋಣಾ ಮುಖಗಳು ಅಂದಿನ ಸುರಕ್ಷಿತ ಬಗೆಯಲ್ಲಿ ಕಟ್ಟುತ್ತಿದ್ದ ಪುರ ನಿರ್ಮಾಣ ಪದ್ಧತಿಯನ್ನು ಕೂಡ ಸೂಚಿಸುತ್ತವೆ.

ಪ್ರಾಚೀನ ಕನ್ನಡ ಗದ್ಯಗ್ರಂಥವಾದ ವಡ್ಡಾರಾಧನೆಯಲ್ಲಿ ಜಂಬೂದ್ವೀಪವನ್ನು ವಿವರಿಸಿ ಅಲ್ಲಿಯ ನಾಡು, ಅಲ್ಲಿಯಪುರ ಅದನ್ನಾಳುವ ಎನ್ನುತ ಕಥೆ ಪ್ರಾರಂಭವಾಗುತ್ತದೆ. ಇದೇ ರೀತಿ ನಂಜುಂಡ ಕವಿಯು ಹೇಳುತ್ತಾನೆ. ಆಧುನಿಕರು ಸ್ಥಳನಾಮ ಅಧ್ಯಯನದ ಸಂಸ್ಥೆಗಳೇ ಸ್ಥಾಪಿಸುತ್ತಾರೆ.

ಸ್ಥಳ ನಾಮ ಅಧ್ಯಯನಕ್ಕಾಗಿ ಮುಂದೆ ಬಂದ ಭಾರತೀಯ ವಿಶ್ವವಿದ್ಯಾಲಯಗಳಲ್ಲಿ ತಿರುಪತಿಯ ಶ್ರೀ ವೆಂಕಟೇಶ್ವರ ವಿಶ್ವವಿದ್ಯಾಲಯ ಶ್ಲಾಘನೀಯ ಸೇವೆಸಲ್ಲಿಸುತ್ತಿದೆ. ಮದರಾಸು ಹಾಗೂ ಕೇರಳ ವಿಶ್ವವಿದ್ಯಾಲಯಗಳು ಈ ಅಧ್ಯನದ ಕಡೆ ಗಮನ ಹರಿಸಿವೆ. ಮುಂಬೈ, ಪೂಣೆ, ಪಶ್ಚಿಮಬಂಗಾಳ ಉತ್ತರ ಪ್ರದೇಶ, ಗುಜರಾತ ಮತ್ತು ಜಮ್ಮುಕಾಶ್ಮಿರ ವಿಶ್ವವಿದ್ಯಾಲಯಗಳ ಇಂಥ ಅಧ್ಯನಕ್ಕೆ ಗಣನೀಯ ಸೇವೆ ಸಲ್ಲಿಸುತ್ತಿವೆ.

ಕೆಲವರು ವೈಯಕ್ತಿಕವಾಗಿಯೂ ಅಧ್ಯಯನ ಮಾಡಿದವರಿದ್ದಾರೆ, ಇಂಡಿಯಾದ ಪ್ರಥಮ ಸರ್ವೇಯರ್ ಜನರಲ್ ಆಗಿದ್ದ ಕರ್ನಲ್ ಮೆಕೆಂಜಿಯು(೧೭೫೪-೧೮೨೧)ರಲ್ಲಿ ಮಾಡಿದ ಅಧ್ಯಯನ ಗಮನಸೆಳೆಯುತ್ತದೆ.

**ಸ್ಥಳನಾಮಗಳ ಉದ್ದೇಶ**

ಮಾನವನು ತನ್ನ ಅಲೆಮಾರಿ ಜೀವನವನ್ನು ಬಿಟ್ಟು ಸಾಮುದಾಯಿಕವಾಗಿ ಒಂದೆಡೆ ನೆಲೆ ನಿಲ್ಲುತ್ತ ಬಂದಂದಿನಿಂದ ಆಯಾ ಸ್ಥಳಗಳಿಗೆ ಅಂಕಿತನಾಮಗಳನ್ನು ಕೊಡುತ್ತ ಬಂದ್ದಾನೆ. ಕೆಲವು ಇತಿಹಾಸ ಅಥವಾ ಭಾಷಾಶಾಸ್ತ್ರಗಳ ಸಹಾಯದಿಂದ ನಾವು ಸೀಮಿತ ಅವಧಿಯವರೆಗಿನ ಚರಿತ್ರೆಯನ್ನು ತಿಳಿದುಕೊಳ್ಳಬಹುದು. ಆದರೆ ಈ ಸ್ಥಳನಾಮಗಳ ಅಧ್ಯಯನದಿಂದ ಆದರಾಚೆಯ ಅಜ್ಞಾತ ಯುಗದ ಚರಿತ್ರೆಯನ್ನು ಕೂಡ ತಿಳಿದುಕೊಳ್ಳಲು ಸಾಧ್ಯವಾಗುತ್ತದೆ. ಸ್ಥಳನಾಮಗಳ ಅಧ್ಯಯನದಿಂದ ಅವರ ನಾಗರಿಕತೆ, ಸಂಸ್ಕೃತಿ, ಭಾಷೆ, ನಂಬಿಕೆ ಮುಂತಾದ ಇತರ ವಿಷಯಗಳ ಮೇಲೆ ಹೆಚ್ಚಿನ ಬೆಳಕು ಚೆಲ್ಲಲು ಸಾಧ್ಯವಿದೆಯೆನ್ನುವುದನ್ನರಿತು ಕೊಂಡರೆ ಇಂದು ಸ್ಥಳನಾಮ ಅಧ್ಯಯನದ ಅಗತ್ಯ ಮತ್ತು ಮಹತ್ವ ಎಷ್ಟೆಂಬುದನ್ನು ಊಹಿಸಬಹುದಾಗಿದೆ. ಈ ಹಿನ್ನೆಲೆಯಲ್ಲಿ ಬೀದರ ಜಿಲ್ಲೆಯ ಸ್ಥಳನಾಮಗಳ ಅಧ್ಯಯನವನ್ನು ಇಲ್ಲಿ ಸ್ವಲ್ಪ ಮಟ್ಟಿಗೆ ತಿಳಿದುಕೊಳ್ಳುವುದಾವಶ್ಯವೆಂದು ಈ ವಿಷಯ ಹೇಳಬೇಕಾಯಿತು.

## ೩.೬. ಬೀದರ ಜಿಲ್ಲೆಯಲ್ಲಿಯ ಅಡ್ಡಹೆಸರುಗಳ ಸ್ವರೂಪ

ಅಡ್ಡಹೆಸರು ಎಂದರೆ ಗೋತ್ರದ ಹೆಸರು, ಒಂದು ಊರಲ್ಲಿ ಒಂದೇ ಹಳೆಯ ತಲೆಮಾರಿನ ಕುಟುಂಬಕ್ಕೆ ಸೇರಿದ ಹಲವಾರು ಸಣ್ಣ ಸಣ್ಣ ಕುಟುಂಬಗಳಿಗೆ ಯಾರದೊ ಒಬ್ಬ ಹಿರಿಯರ ಹೆಸರನ್ನು ಜನರು ರೂಢಿಗತವಾಗಿ ಕರೆಯುತ್ತಾರೆ. ಅದು ಅವರ ಅಡ್ಡಹೆಸರಾಗಿರುತ್ತದೆ. ಈ ಅಡ್ಡ ಹೆಸರು ವ್ಯಕ್ತಿಯೊಬ್ಬ ಬೇರಾವುದೋ ಊರಿನಿಂದ ಬಂದು ನೆಲಸಿದಾಗ ಊರ ಜನರು ಅವನು ಬಿಟ್ಟು ಬಂದ ಊರಿನ ಹೆಸರು ಅವನ ಕುಟುಂಬಕ್ಕೆ ಇಡುತ್ತಾರೆ. ಅದು ಅವರ ಅಡ್ಡ ಹೆಸರಾಗಿರುತ್ತದೆ.

ಉದಾ : ಹೊನ್ನಾಳ್ಳಿ ಊರಿನಿಂದ ಬಂದರೆ ಹೊನ್ನಾಳೆ,
ಭಾಲ್ಕಿ ಊರಿನಿಂದ ಬಂದರೆ ಭಾಲ್ಕೆ
ಸಿರ್ಸಿ ಊರಿನಿಂದ ಬಂದರೆ ಸಿರ್ಸೆ

ಕೆಲವೊಮ್ಮೆ ಈ ಅಡ್ಡ ಹೆಸರುಗಳು ಅವನು ಮಾಡುವ ವೃತ್ತಿಯೋ, ಕೆಲಸವೋ, ಗುಣವೊ, ಬಣ್ಣವೊ ಅವಲಂಬಿಸಿ ಅಡ್ಡ ಹೆಸರುಗಳು ಹುಟ್ಟಿಕೊಳ್ಳುತ್ತವೆ.

ದನಗಳ ಕೊಂಬು ತಿರುವವನಿದ್ದರೆ\ಕೆತ್ತುವವನಿದ್ದರೆ
ವೃತ್ತಿ + ಅವನ ಹೆಸರು
ಖೋಡ್‌ಕೆತ್ತಾ + ಆವ್ಯಕ್ತಿಯ ಹೆಸರು (ರಾಮಾ) ಖೋಡ್‌ಕೆತ್ತಾರಾಮಾ
ತಮಟೆಯನ್ನು ಬಾರಿಸುವವನಿದ್ದರೆ - ಹಲಗ್ಯಾ, ರಾಮಾ ಎಂದಾಗುತ್ತದೆ.

ಗುಣವನ್ನಾಧರಿಸಿ, ಗುಣ + ಹೆಸರು, ದಲಾಲಿ+ಹೆಸರು, ಬಡ್ಡಿ ವ್ಯವಹಾರದವನಿದ್ದರೆ ದಸ್‌ಪರ್‌ಸೆಂಟ್ + ಹೆಸರು; ಬಣ್ಣವನ್ನಾವಲಂಬಿಸಿ ಕರಿ+ಹೆಸರು, ಬಿಳಿ+ಹೆಸರು; ಆಕಾರವನ್ನಾವಲಂಬಿಸಿ ಟೊಣ್ಯಾ+ ಹೆಸರು, ಢಬಾಲೆ+ಹೆಸರು, ಒಣ್ಕೆ+ಹೆಸರು, ಜಿಳ್ಳ್ಯಾ+ಹೆಸರು, ಈ ರೀತಿ ಅಡ್ಡ ಹೆಸರುಗಳು ಹುಟ್ಟಿಕೊಳ್ಳುತ್ತವೆ.

ಒಂದೆ ಊರಲ್ಲಿ ಎರಡೊ, ಮೂರೊ ಒಂದೇ ಹೆಸರಿನ ವ್ಯಕ್ತಿಗಳಿದ್ದರೆ, ಆ ವ್ಯಕ್ತಿಯ ಹೆಸರು ಗಣೇಶ ಎಂದಿದ್ದರೆ ಮುಕ್ಕ್ಯಾ ಗಣೇಶ, ಕರಿಗಣೇಶ, ಖಟ್ಕೆ ಗಣೇಶ, ಈ ರೀತಿ ಆಕಾರ, ಬಣ್ಣಗಳಿಗನುಗುಣವಾಗಿ ಅಡ್ಡ ಹೆಸರುಗಳು ಹುಟ್ಟಿಕೊಳ್ಳುತ್ತವೆ. ಮನೆಯ ಹಿರಿಯ ಕಿವುಡನಿದ್ದರೆ ಕಿವ್ಡ್ಯಾ, ಈರುಳ್ಳಿ ಬೆಳೆಯುವವನಿದ್ದರೆ ಉಳಗಡ್ಡ್ಯಾ, ಬೆಳಗಡ್ಡಾ, ಗುಂಗಡಿಯನ್ನು ಟೊಂಪಿ ಮಾಡಿ ಹಚ್ಚಿಕೊಂಡರೆ ಟೊಂಪೆ, ಊರಿಗೆ ಮೂಲಿಗರಿದ್ದರೆ ಮೂಲ್ಗೆ, ಬೊಗಸೆ ತುಂಬಿ ಏನಾದರೂ ವಿಶೇಷ ಪಡೆದರೆ ಕುಡ್ತೆ, ಬೊಚ್ಚಬಾಯಿ ಇದ್ದರೆ ಬೊಕ್ಕ್ಯಾ, ಹಲ್ಲು ಮುಂದಿದ್ದರೆ ಹಲ್‌ಖುಡಕ್ಯಾ, ಬಂಗಾರಹಾರ ಹಾಕಿಕೊಂಡರೆ, ಸೊನ್ ಮಾಳೆ(ಮರಾಠಿಯಿಂದ) ಮನೆ ಎತ್ತರಕ್ಕೆ ಇದ್ದರೆ ಮಡ್ಡೆ, ಗಡ್ಡ ಇಟ್ಟರೆ ದಾಡಿ.

ಭಾಲ್ಕಿ ತಾಲೂಕಿನ ನಿಡೇಬಾನ ಗ್ರಾಮದಲ್ಲಿ ಮೂಲ್ಗೆ ಎಂಬ ಅಡ್ಡ ಹೆಸರಿನ ಮನೆತನವಿದೆ. ಮುವತ್ತು ಪ್ರತಿಶತ ಜನಸಂಖ್ಯೆ ಮೂಲ್ಗೆ ಅಡ್ಡ ಹೆಸರಿನವರೆ ಈ ಮೂಲ್ಗೆಯಲ್ಲಿ ಹಣಮಂತರಾವ್ ಎನ್ನುವವರೊಬ್ಬ ವ್ಯಕ್ತಿ ಇದ್ದಾರೆ ಇವರಿಗೆ ಊರೆಲ್ಲ ಮೂಲ್ಗೆಯ ಬದಲು ರಡ್ಡಿಹಣಮಂತರಾಯ ಎಂದೆ ಕರೆಯುತ್ತಾರೆ. ಮೂಲ್ಗೆ ಕಾಶಪ್ಪಾ ಇವರು ಯಾವಾಗಲೂ ಭಾಲ್ಕಿಗೆ ಬರುವುದು ಯಾಕೆಂದರೆ ಇವರು ದನಗಳ ದಲ್ಲಾಳಿ. ಭಾಲ್ಕಿಯಲ್ಲಿ ಖಂಡ್ರೆ ಎಂಬ ಮನೆತನ ಬಹು ಜಾಹಿರ. ಈ ಖಂಡ್ರೆ ಮನೆತನದಲ್ಲಿ ಶ್ರೀ ಭೀಮಣ್ಣ ಖಂಡ್ರೆ ಮಾಜಿಸಾರಿಗೆ ಸಚಿವರು, ಶಾಸಕರು ಅಖಿಲಭಾರತ ವೀರಶೈವ ಮಹಾಸಭಾಧ್ಯಕ್ಷರು, ಡಾ.ವಿಜಯಕುಮಾರ ಖಂಡ್ರೆ ಎರಡು ಅವಧಿಯ ಕಾಲ ಶಾಸಕರು, ಪ್ರಕಾಶ ಖಂಡ್ರೆ ಇವರು ಪ್ರಸ್ತುತ ಶಾಸಕರು. ಖಂಡ್ರೆ ಮನೆತದ ಕಾರಬಾರು ಹಿರಿಯದು. ಹೀಗಾಗಿ ನಿಡೇಬಾನ ಗ್ರಾಮದ ಶ್ರೀ ಕಾಶಪ್ಪಾ ಖಂಡ್ರೆ ಕಾಶಪ್ಪಾರಾದರು. ಮತ್ತೊಬ್ಬರು ಗಡ್ಡ ಬೆಳಸಿದ ಕಾಶಪ್ಪ ಅವರಿಗೆ ದಾಡಿ ಕಾಶಪ್ಪಾ ಎಂದು, ಖಂಡಾಳೆ ಮನೆತದಲ್ಲಿ ಪ್ರಬಣ್ಣ ಅನ್ನುವವರು ತೆಳ್ಳಗೆ ದೇಹ ಉಳ್ಳವರು ಅವರಿಗೆ ಝಿಳ್ಳಿಪರ್ ಬಣ್ಣನೆಂದು, ಒಬ್ಬ ಶಿವರಾಜ ಯಾವಾಗಲೂ ಅಡಗಿ ಜಗಿಯುವರು, ಅವರಿಗೆ ಅಡಕಿ ಶಿವರಾಜ ಎಂದು ಅಡ್ಡ ಹೆಸರುಗಳು ಹುಟ್ಟಿ ಕೊಂಡಿವೆ.

ಈ ಮೇಲೆ ವಿವರಿಸಿದ ಅಡ್ಡಹೆಸರುಗಳು ಪರಂಪರಾಗತವಾಗಿ ಬಂದ ಹೆಸರು ಬಿಟ್ಟು ಹೊಸ ಅಡ್ಡ ಹೆಸರಿನಿಂದ ಗುರುತಿಸುತ್ತಾರೆ. ಹಳೆಯ ಅಡ್ಡಹೆಸರು ಹೇಳಿದರೆ ಇವರನ್ನು ಗುರುತಿಸಲು ಕಷ್ಟ. ಇನ್ನೊಬ್ಬರು ಮಾತಿಗೊಮ್ಮ ಅವ್ವಣಪ್ಪ ಎಂದು ಪ್ರಮಾಣಮಾಡುತ್ತಾರೆ. ಇವರಿಗೆ ಅವ್ವಣಪ ನಾಗಣ್ಣ, ಮತ್ತೊಬ್ಬರು ಕೆಲವು ವರ್ಷಗಳು ದೆಹಲ್ಲಿಯಲ್ಲಿ ಉಳಿದು ಬಂದಿದುದಕ್ಕೆ ದಿಲ್ಲಿ ನಾಗಣ್ಣ ಎಂದು ಅಡ್ಡ ಹೆಸರಾಗಿದೆ. ಈ ಒಂದೇ ಊರಲ್ಲಿ ಇಷ್ಟು ಅಡ್ಡ ಹೆಸರಿನ ಏರು ಪೇರಾದರೆ, ಈ ಏರು ಪೇರು ಪ್ರತಿಯೊಂದು ಊರಲ್ಲಿದ್ದಿರಬೇಕು ಹೀಗೆ ಅಡ್ಡ ಹೆಸರುಗಳು ಸೃಷ್ಟಿಯಾಗಿರಬೇಕು ಎಂದು ಹೇಳಬಹುದು.

ಸಾಮಾಜಿಕವಾಗಿ ಅಡ್ಡ ಹೆಸರುಗಳು ಈ ರೀತಿಯಾಗಿ ಬೀದರ ಜಿಲ್ಲೆಯಲ್ಲಿ ವಿಭಾಗಿಸಬಹುದು.

೧. ಬ್ರಾಹ್ಮಣರ ಅಡ್ಡ ಹೆಸರುಗಳು
೨. ಲಿಂಗಾಯತರ ಅಡ್ಡ ಹೆಸರುಗಳು
೩. ಮರಾಠರ ಅಡ್ಡ ಹೆಸರುಗಳು
೪. ಹೊಲೆಮಾದಿಗರ ಅಡ್ಡ ಹೆಸರುಗಳು
೫. ಮುಸಲ್ಮಾನರ ಅಡ್ಡ ಹೆಸರುಗಳು

**೧. ಬ್ರಾಹ್ಮಣರ ಅಡ್ಡ ಹೆಸರುಗಳು**

ಕುಲಕರ್ಣಿ - ಕಾರಕೂನ್, ಪಟವಾರಿ, ಗ್ರಾಮಲೆಕ್ಕಾಧಿಕಾರಿ, ದಿವಾಣ - ಕಾರಕೂನ, ನಾಯಿಕ್ - ಬಂಗಾರ ವ್ಯಾಪಾರಿ ಇವು ಸಾಮಾನ್ಯವಾಗಿ ಬೀದರ ಬ್ರಾಹ್ಮಣರ ಅಡ್ಡ ಹೆಸರುಗಳು

೨. ಲಿಂಗಾಯತರ ಅಡ್ಡ ಹೆಸರುಗಳು

| ಅಡ್ಡ ಹೆಸರು | | ಮೂಲ |
|---|---|---|
| ಮೂಲ್ಗೆ, | mu:lge | ಮೂಲ |
| ಖಂಡಾಳೆ | khaṇḍaḷe | ಊರು |
| ಖಂಡ್ರೆ | khanḍre | ಊರು |
| ಹೊನ್ನಾಳೆ | honna:ḷe | ಊರು |
| ಗಡ್ಡೆ | gaḍḍe | ಗಡ್ಡೆ |
| ಮಡ್ಡೆ | maḍḍe | ಎತ್ತರದ ಪ್ರದೇಶ |
| ವಾಲಿ | va:lI | ಸುಗ್ರಿವಾಲಿ |
| ದೇವಪ್ಪ | de:vappa: | ದೇವ |
| ಹರ್ಸೂರೆ, | harsu:re | ಊರು |
| ಭೂರೆ | bhu:re | ಬೆಳ್ಳಗೆ |
| ಗಾಮಾ | ga:ma: | |
| ಭುರಾಳೆ | bhura:ḷe | ಪಕ್ಷಿ(ಭುರುಳಿ) |
| ಮಾನಕಾರೆ | ma:nakare | ಮಾನ ಉಳ್ಳವರು |
| ಕುಡ್ತೆ | kuḍte | ಬೊಗಸೆ |
| ಲದ್ದೆ | ladde | ಊರು\ಕತ್ತೆ ಕುದರೆಯ ಸೆಗಣಿ |
| ಭುಸ್ಗುಂಡೆ | bhusgunde | ಹೂಸುವುದು |
| ಸಿರ್ಸೆ | sırse | ಊರು |
| ಭಂಡೆ | bhaṇḍe | ಕಲ್ಲು\ಬಂಡಿ |
| ನುಚ್ಚಾ | nucca: | ಪುಡಿ |
| ವಿಸಾಜಿ | visa:JI | ನಾಮ |
| ಮುದಾಳೆ | mudale | ಊರು |
| ಎಡ್ವೆ | eḍve | ಅಡವಿ\ಉಡವಿ ಇಡು |
| ರಾಮಪುರೆ | ra:mapure | ಊರು |
| ಅಣ್ದುರೆ | aṇdure | ಊರು |

೩. ಮರಾಠರ ಅಡ್ಡ ಹೆಸರುಗಳು ಸ್ವರೂಪ

| | | |
|---|---|---|
| ಜಗತಾಪ್ | Jagatap | ಬಿಸಿ |
| ಮಾನೆ | ma:ne | ಬೇಕಾದವ |
| ಜಾಧವ್ | Ja:dhav | ಕೃಷ್ಣ |
| ಯಾದವ್ | ya:dv | ಕೃಷ್ಣ |
| ಕನ್ಸೆ | kanse | ತೆನೆ |
| ಢೋಲೆ | ḍho:le | ಡೋಲು |
| ಭುಜಂಗೆ | bhuJaŋge | ಆದಿಶೇಷ |
| ಕಡಾಜಿ | kaḍa:JI | |
| ಕಾಳೆ | kaḷe | ಕಪ್ಪಗೆ |
| ಸುರಿಯಂಶಿ | suriyan̆sI | ಸರ್ಯೋದಯ |
| ಭೋಸ್ಲೆ | bho:sle | |
| ಸಾಳೊಂಕೆ | sa:ḷonke | ಶಂಖ |
| ವಾಗ್‌ಮಾರೆ | ra:gma:re | ಹುಲಿಯನ್ನು ಹೊಡೆದವ |

೪. ಹೊಲೆಮಾದಿಗರ ಅಡ್ಡ ಹೆಸರುಗಳು

| | | |
|---|---|---|
| ಹಲ್ಗೆ | halge | ತಮಟೆ ಬಾರಿಸುವವ |
| ಬಾಜೆ | ba:Je | ಬ್ಯಾಂಡ್ ಬಾರಿಸುವವ |
| ಮ್ಹೇತ್ರೆ | mhe:tre | ಸೆಗಣಿ ಬಳಿಯುವವ |
| ಕರಕರೆ | karkare | ಮಾಡುವವರು |
| ಸುರಿಯಂಸಿ | suriyans | ಸೂರ್ಯೋದಯದ ನಂತರ ಏಳುವವರು |
| ಗೋಡ್ಬೋಲೆ | go:ḍbole | ಸಿಹ ಮಾತನಾಡುವವರು(ಮರಾಠಿ) |
| ಫುಲಾರೆ | phula:re | ಹೂಮಾಲೆ ಮಾಡುವವ |
| ಕಾಂಬ್ಳೆ | kamble | ಕಮಲ |
| ಸೋನ್‌ಕಾಂಬ್ಳೆ | so:nkamble | ಬಂಗಾರದ ಕಮಲ |

| | | |
|---|---|---|
| ಖೋಡ್‌ಕೆತ್ತಾ | kho:ḍ kette | ಕೊಂಬು ಕೆತ್ತುವವ |
| ಕಾಲ್ಬಿಳ್ತಾ | ka:lbiḷta | ಮಾತಿಗೊಮ್ಮೆ ಕಾಲ್ಬಿಳ್ತಾ ಅನುವವ |
| ಚೆಲುವಾ | celuva: | ಸುಂದರಾ |
| ಘೋಡ್ಕೆ | gho:nḍke | ಕುದರೆಯಾವ |

ಹೊಲೆಮಾದಿಗರಲ್ಲಿ ಅಡ್ಡ ಹೆಸರಿಗಿಂತ ಹೊಲೇರ್, ಮಾದುರ್ ಎಂಬ ಜಾತಿ ಸಾಂಕೇತಿಕ ಹೆಸರಿನಿಂದಲೇ ಕರೆಯುವುದು ಹೆಚ್ಚು. ಹೊಲೆಮಾದಿಗರ ಅಡ್ಡ ಹೆಸರುಗಳು ಸಹಜವಾಗಿ ಇರುವುದಿಲ್ಲ. ಊರಿಂದ ಊರಿಗೆ ಬಂದರೆ ಅವರ ಅಡ್ಡ ಹೆಸರು ಹಿಂದಿನ ಊರಿನ ಹೆಸರು ಆಗಬಹುದು. ಸರಕಾರಿ ದಾಖಲೆಯಲ್ಲಿ ದಾಖಲಿಸಲು ಕೇಳುತಿದ್ದಾರೆಂದು ಯಾವಾವುದೊ ನೆನಪುಬಂದ ಅಡ್ಡ ಹೆಸರುಗಳು ಹೇಳಿ, ಹೇಳಿದ ಅಡ್ಡ ಹೆಸರು ರೂಢಿಯಲ್ಲಿ ಬರಲಿ ಎಂದು ಪದೆ ಪದೆ ಹೇಳಿಕೊಳ್ಳುವವರೂ ಇದ್ದಾರೆ. ಹೀಗಾಗಿ ಅವರ ಅಡ್ಡ ಹೆಸರುಗಳೆಲ್ಲ ಇತ್ತೀಚಿನವು ಎಂದು ಹೇಳಬಹುದು. ಇವರು ಹೆಚ್ಚಾಗಿ ಮಹಾರಾಷ್ಟ್ರ ಮೂಲದ ಅಡ್ಡ ಹೆಸರುಗಳು ಸ್ವೀಕರಿಸಿದರು.

೫. ಮುಸಲ್ಮಾನರ ಅಡ್ಡ ಹೆಸರುಗಳು

| | | |
|---|---|---|
| ಖಾದ್ರಿ | kha:drI | ಮುಸ್ಲಿಂ ಸಂತರ ಹೆಸರು |
| ಲದಾಫ್ | lada:f | ಹತ್ತಿಕೆಲಸ ಮಾಡುವವ |
| ಇನಾಮ್‌ದಾರ್ | Ina:mda:r | ಬಹುಮಾನ ಪಡೆದವ |
| ಕೊತ್ವಾಲ್ | kotva:l | ಕಾವಾಲುಗಾರ |
| ಮನ್ನಾ | manna: | ಹಿರಿಯರ ಹೆಸರು |
| ಘೋಡ್‌ವಾಡೆ | gho:ḍva:ḍe | ಊರು |
| ಸಯದ್ | sayad | ಮುಸಲ್ಮಾನ್ ಪಂಗಡ |
| ಮೊಹಮ್ಮದ್ | mohammad | ಮುಸಲ್ಮಾನ ಪಂಗಡ |
| ಜಾಗಿರ್ ದಾರ್ | Ja:girda:r | ಅಧಿಕಾರ, ಸಿರಿವಂತಿಕೆಯ ಮುಸಲ್ಮಾನ |
| ಶೇಕ್ | se:k | ಮುಸ್ಲಿಂ ಪಂಗಡ |
| ಪಠಾಣ್ | patha:n | ಮುಸ್ಲಿಂ ಪಂಗಡ |
| ತೋಪ್‌ವಾಲೆ | to:pva:le | ಗನ್ |
| ಮುಲ್ಲಾ | mulla: | ಮುಸಲ್ಮಾನ ಮುಂದಾಳು |
| ಪೇಸಮಾಮ್ | pe:sma:m | ಮಸಿದಿಯಲ್ಲಿ ನಮಾಜ್ ಕಲಿಸುವವ |

ಕಾರಬಾರಿ, ಬಿರಾದಾರ್, ಪಾಟೀಲ್, ಗೌಡರು ಪ್ರತಿಯೊಂದು ಊರಿಲ್ಲಿ ಈ ಅಡ್ಡ ಹೆಸರಿನವರಿದ್ದಾರೆ. ಅಡ್ಡ ಹೆಸರಿನಿಂದ ಸಾಮಾಜಿಕವಾಗಿ ವಿಂಗಡಿಸಲುಬಾರದು. ಯಾಕೆಂದರೆ ಗೋರ ಚಿಂಚೋಳಿ (ಭಾಲ್ಕಿತಾಲೂಕಿ)ನಲ್ಲಿ ಲಿಂಗಾಯತರು ಕಾರಬಾರಿ, ನಿಡೇಬಾನ (ಭಾಲ್ಕಿತಾಲೂಕಿ) ನಲ್ಲಿ ಮರಾಠರು ಕಾರಬಾರಿಗಳು, ಲಿಂಗಾಯತರು ಮರಾಠರು ಹಾಗೂ ಮುಸಲ್ಮಾನರಲ್ಲಿ ಬಿರಾದಾರ ಎಂಬ ಅಡ್ಡ ಹೆಸರಿನವರಿದ್ದಾರೆ. ಬಿರಾದಾರ ಎಂದರೆ ಪೋಲಿಸ ಪಟೇಲನ ಬಹಳ ಹಿಂದಿನ ಅಣ್‌ತಮ್ಮಿ. ಅಣ್‌ಮ್ಮಿ ಎಂದರೆ ಹಳೆಯ ತಲೆಮಾರಿನಲ್ಲಿ ಒಂದೆ ಕುಟುಂಬದವರು ಎಂದರ್ಥ. ಪಾಟೀಲ್ ಕೆಲವು ಹಳ್ಳಿಗಳಲ್ಲಿ ಲಿಂಗಾಯತರು ಪಾಟೀಲರಾದರೆ ಕೆಲವು ಊರುಗಳಲ್ಲಿ ಮರಾಠಾ ಜಾತಿಯವರು ಪಾಟೀಲರಾಗಿದ್ದಾರೆ. ನಿಡೆಬಾನದಲ್ಲಿ ಲಿಂಗಾಯತ ಪಾಟೀಲರು, ಗೋರ ಚಿಂಚೋಳಿಯಲ್ಲಿ ಮರಾಠರು ಪಾಟೀಲರು. ಈ ಪಾಟೀಲರು ಮುಸಲ್ಮಾನರಲ್ಲಿಯೂ ಇದೆ. ಕೆಳಜಾತಿಯವರೆಲ್ಲ ಅವರಿಗೆ ಪಾಟೇಲೆಂದೆ ಕರೆಯುವ ರೂಢಿಯಿದೆ. ಕೆಲವೊಮ್ಮೆ ಮೇಲ್ವರ್ಗದವರು ಹಾಗೂ ಕೆಳವರ್ಗದವರೂ ಅವರಿಗೆ ಪಟೇಲ್ ಎಂದು ಕರೆಯುವುದುಂಟು. ಆದರೆ ಮುಸಲ್ಮಾನರು ಲಿಂಗಾಯತ ಪಾಟೀಲರಿಗೆ ಕರೆಯುವಾಗ, ಮಾತನಾಡಿಸುವಾಗ ಪಟೇಲ್ ಎಂದೆ ಸಂಬೋಧಿಸುತ್ತಾರೆ.

ಗೌಡರು, ಊರ ಮುಖಂಡ ಊರ ಆಗೂ ಹೋಗುಗಳನ್ನು ನೋಡಿಕೊಳ್ಳುವವ, ಕಾರಬಾರು ನಡೆಸುವವ, ಹೊಣೆಹೊತ್ತಿದವ ಈ ಅರ್ಥ ಕೊಡುತ್ತದೆ. ಕೆಲವು ಊರುಗಳಲ್ಲಿ ಲಿಂಗಾಯತ ಗೌಡರಿದ್ದಾರೆ. ಕೆಲವು ಊರುಗಳಲ್ಲಿ ಮಧ್ಯಮ ವರ್ಗದವರು ಗೌಡರಿದ್ದಾರೆ, ಭಾಲ್ಕಿ ತಾಲೂಕಿನ ಕುರಬ ಖೇಳ್ಗಿ ಗ್ರಾಮದಲ್ಲಿ ಕುರುಬರೆಲ್ಲ ಗೌಡರೆ. ಬಹಳ ಕಡೆ ಕುರುಬರ ಅಡ್ಡ ಹೆಸರು ಮೈಂತ್ರೆ, ಕೋಣೆ ಮುಂತಾದ ಅಡ್ಡ ಹೆಸರುಗಳಿವೆ. ಈ ಮೈಂತ್ರೆ ಮಾದಿಗರಲ್ಲಿಯೂ ಬಳಕೆಯಿದೆ. ಕೊಣೆ ಅಡ್ಡ ಹೆಸರಿನ ಕುರಬರು ಸಾಯಗಾವ್ (ಭಾಲ್ಕಿ ತಾಲೂಕು)ನಲ್ಲಿದ್ದಾರೆ. ಒಂದೊಂದು ಕಡೆ ಲಿಂಗಾಯತರದೂ ಕೋಣೆ ಎಂದು ಅಡ್ಡ ಹೆಸರು ಆಗಿರಲು ಸಾಧ್ಯವಿದೆ.

ಎಷ್ಟು ಅಡ್ಡ ಹೆಸರುಗಳಿವೆಯೋ ಅಷ್ಟು ಹೆಚ್ಚಾನು ಹೆಚ್ಚು ಊರ ಹೆಸರುಗಳೇ ಎಂದು ಡಾ.ವೈಜಿನಾಥ ಭಂಡೆಯವರ ಅಭಿಪ್ರಾಯ ವಲಸೆ ಬಂದ ಊರ ಹೆಸರು ಅಡ್ಡ ಹೆಸರಾಗಿ ಪರಿವರ್ತನೆಗೊಂಡ ಹೆಸರುಗಳು ಇಂತಿವೆ.

| ಊರ ಹೆಸರು | ಅಡ್ಡಹೆಸರು | ಅಂತಾರಾಷ್ಟ್ರೀಯಲಿಪಿ |
|---|---|---|
| ಮಂಗಲಗಿ | ಮಂಗಲ್ಗೆ | mangalge |
| ತೋರ್ಣಾ | ತೋರ್ಣೆ | to:rṇe |

| ಊರ ಹೆಸರು | ಅಡ್ಡಹೆಸರು | ಅಂತಾರಾಷ್ಟ್ರೀಯಲಿಪಿ |
|---|---|---|
| ಮಾಸಿಮಾಡ್ | ಮಾಸಿಮಾಡೆ | ma:sima:de |
| ಹೊನ್ನಾಳಿ | ಹೊನ್ನಾಳೆ | honna:ḷe |
| ಭಾಲ್ಕಿ | ಭಾಲ್ಕೆ | bha:lke |
| ಬೀದರ್ | ಬಿದ್ರೆ | bIdre |
| ಬಳತ್ | ಬಳ್ತೆ | baḷte |
| ಕಡಗಂಚಿ | ಕಡಗಂಚೆ | kaḍgañce |
| ಮುಚಳಂಬಿ | ಮುಚಳಂಬೆ | mucaḷambe |
| ದಾಡಾಗಿ | ದಾಡ್ಗೆ | da:ḍge |
| ಗೋರ್ಟಾ | ಗೋರ್ಟೆ | go:rṭe |
| ಕೋಹಿನೂರ | ಕೊಯ್ನೂರೆ | koynu:re |
| ಭಾಂತಂಬ್ರಾ | ಭಾತಮ್ರೆ | bha:tamre |
| ಮೇಳಕುಂದಾ | ಮೆಳಕುಂದೆ | meḷkuñde |
| ಕಾಡೋದಿ | ಕಾಡೋದೆ | ka:ḍo:de |
| ನೇಳಗಿ | ನೇಳ್ಗೆ | ne:ḷge |
| ಗೊರನಾಳ | ಗೊರ್ನಾಳೆ | gorna:ḷe |

ಹೀಗಾಗಿ ಎಷ್ಟು ಊರುಗಳಿವೆ ಅಷ್ಟು ಅಡ್ಡಹೆಸರುಗಳು ಸಿಗಬಹುದು. ಮತ್ತು ಈ ಊರ ಹಿನ್ನೆಲೆಯ ಅಡ್ಡ ಹೆಸರುಗಳು ಬೀದರ ಭಾಗದಲ್ಲಿ ಊರ ಹೆಸರಿಗೆ ಕರ್ ಎಂಬ ಪ್ರತ್ಯಯ ಹತ್ತಿ ಅಡ್ಡ ಹೆಸರುಗಳು ಹುಟ್ಟಿಕೊಂಡಿವೆ. ಉದಾ. ಇಂಚೂರ್‌ಕರ್, ಭಾಲ್ಕಿಕರ್, ನಿಟ್ಟೂರ್‌ಕರ್, ಹೊನ್ನಾಳಿಕರ್, ದಾಡ್ಗಿಕರ್, ನೇಳ್ಗಿಕರ್, ಗೊರನಾಳಕ್‌ರ್, ಬಳತ್ಕರ್ ಇತ್ಯಾದಿ

**ದವಸ ಧಾನ್ಯಗಳ ಮೂಲದಿಂದ ಬಂದ ಅಡ್ಡಹೆಸರುಗಳು**

| | | |
|---|---|---|
| ತೊಗ್ರೆ | togre | ತೊಗರೆ |
| ಘೋದೆ | gho:de | ಗೋಧಿ |
| ಜೀರ್ಗೆ | Ji:rge | ಜೀರಿಗೆ |
| ಅಗ್ಸೆ | agse | ಅಗಸಿ |
| ತಾಂದ್ಲೆ | tañdle | ಅಕ್ಕಿ(ಮರಾಠಿ) |

ಅಡಿಗೆ ಪದಾರ್ಥ ಮೂಲದಿಂದ ಬಂದ ಅಡ್ಡ ಹೆಸರುಗಳು

| | | |
|---|---|---|
| ಘುಗ್ರೆ | ghugre | ಗುಗ್ಗರಿ |
| ರೊಟ್ಟೆ | roṭṭe | ರೊಟ್ಟಿ |
| ಹುಳ್ಪಲ್ಲೆ | huḷpale | ಹುಳಿ ಮಿಶ್ರಿತ ಪಲ್ಯ |
| ಚಪಾತೆ | capa:te | ಚಪಾತಿ |

ತರಕಾರಿ ಮೂಲದಿಂದ ಬಂದ ಅಡ್ಡ ಹೆಸರುಗಳು

| | | |
|---|---|---|
| ಗಾಜ್ರೆ | ga:Jre | ಗಜ್ಜರಿ(ಮರಾಠಿ) |
| ಮಿರ್ಚೆ | mirce | ಮೆಣಸಿನ ಕಾಯಿ(ಮರಾಠಿ) |
| ಉಳಾಗಡ್ಡೆ | uḷagaḍḍe | ಈರುಳ್ಳಿ |
| ಬೆಳಗಡ್ಡೆ | beḷagaḍḍe | ಬಳ್ಳುಳ್ಳಿ |

ಶಾರೀರಿಕ ಮೂಲದಿಂದ ಬಂದ ಅಡ್ಡಹೆಸರುಗಳು

| | | |
|---|---|---|
| ಟೊಣ್ಣೆ | ṭoṇṇe | ದಪ್ಪಗೆ ಇದ್ದವರು |
| ಢೊಳ್ಳೆ | ḍhoḷḷe | ಹೊಟ್ಟೆ ದಪ್ಪಗೆ |
| ಕಿವ್ಡೆ | kivḍe | ಕಿವಿ ಕೇಳಿಸದೆ ಇರುವುದು |
| ಭುಸ್ಗುಂಡೆ | bhusgun̄ḍ | ಹೂಂಸುವವರು |
| ಮೀಸೆ | mi:se | ಮೀಸೆ ಉಳ್ಳವನು |
| ಢೊಂಪ್ರೆ | ḍhompre | ಗೂನುಬೆನ್ನು |
| ಮುಕ್ಡೆ | mukḍe | ಮೊಂಡಮೂಗ |
| ಬಾಂಗೆ | ba:ŋge | ಯಾಸ್ ಗಣ್ಣು |

ವೃತ್ತಿಯನಾಧರಿಸಿ ಜಾತಿಯಾಯಿತು ಜಾತಿಯನಾಧಾರಿಸಿ ಅಡ್ಡ ಹೆಸರಾಯಿತು.

| | | |
|---|---|---|
| ಕುಂಬಾರ್ | kumba:r | ಕುಂಭ ತಯಾರಿಸುವವ |
| ಬಡಿಗೇರ್ | baḍiga:r | ಬಡಿಗೆ ಕೆಲಸ ಮಾಡುವವ |
| ಬಳ್ಗಾರ್ | baḷga:r | ಬಳೆಯನ್ನು ಮಾರುವವ |
| ಅಗ್ಸಾಲ್ | agsa:l | ಆಭರಣಗಳನ್ನು ಮಾಡುವವ |
| ಕಂಬಾರ | kamba:r | ಕಬ್ಬಿಣ ಕೆಲಸ ಮಾಡುವವ |
| ಹಟ್ಕಾರ್ | haṭka:r | ಬಟ್ಟೆ ಹೆಣೆಯುವವ |

| | | |
|---|---|---|
| ಚೆಟ್ಟೇರ್ | cetter | ಬಟ್ಟೆ ಮಾರುವವ |
| ಜ್ಯಾದುಗಾರ್ | JEdugar | ಮಾಟ ಮಂತ್ರ ಮಾಡುವವ |
| ಘಿಸಡ್ಯಾ | ghi:sdE | ಕಬ್ಬಿಣ ಕೆಲಸ ಮಾಡುವವ |
| ಮೀಣ್ಗಾರ್ | mi:nga:r | ಮೀಣು ಹಿಡಿಯುವವ |
| ಪೂಜ್ಯಾರಿ | pu:JErI | ಪೂಜೆ ಮಾಡುವವ ಅರ್ಚಕ |

ಪ್ರಾಣಿಗಳ ಮೂಲದ ಹೆಸರಿನಿಂದ ಬಂದ ಅಡ್ಡ ಹೆಸರುಗಳು

| | | |
|---|---|---|
| ಕುದ್ರೆ | kudre | ಕುದರೆ |
| ಎಮ್ಮೆ | emme | ಎಮ್ಮೆ |
| ಕ್ವಾಣೆ | k̃va:ne | ಕೋಣ |
| ಒಂಟೆ | onte | ಒಂಟೆ |
| ಡುಕ್ರೆ | dukre | ಹಂದಿ(ಮರಾಠಿ) |
| ಹಂದೆ | hañde | ಹಂದಿ |

ಪಕ್ಷಿ ಮೂಲ ಹೆಸರಿನಿಂದ ಬಂದ ಅಡ್ಡಹೆಸರುಗಳು

| | | |
|---|---|---|
| ಗುಬ್ಬೆ | ghbbe | ಗುಬ್ಬಚ್ಚಿಕಾಗೆ ka:ge ಕಾಗೆ |
| ಗೂಗೆ | gu:ge | ಗೂಬೆ |
| ನವಿಲೆ | navile | ನವಿಲು |
| ಕೋಳೆ | ko:le | ಕೋಳಿ |

ಹೈನುಗಾರಿಕೆಯ ಮೂಲದಿಂದ ಅಡ್ಡಹೆಸರುಗಳು

| | | |
|---|---|---|
| ಬೆಣ್ಣೆ | benne | ಬೆಣ್ಣೆ(ಮರಾಠಿ) |
| ಮಜಿಗೆ | maJige | ಮಜ್ಜಿಗೆ |
| ಲೋಣೆ | lone | ಬೆಣೆ |
| ತುಪ್ಪೆ | tuppe | ತುಪ್ಪಾ |

ಗುಲಬರ್ಗಾ ಹಾಗೂ ರಾಯಚೂರು ಜಿಲ್ಲೆಯಗಳ ಪ್ರಭಾವದಿಂದ ಬಂದ ಅಡ್ಡ ಹೆಸರುಗಳು, ಹೊಲೆ ಮಾದಿಗರಿಗೆ ಮಾತ್ರ ಸೀಮಿತವಾದವು.

| | | |
|---|---|---|
| ಹೊಸಮನಿ | hosamanI | ಮನೆ |
| ಭಾವಿಕಟ್ಟೆ | bha:vikattI | ಬಾವಿ |

ಭಾವಿದೊಡಿ bha:vidoḍḍI ಬಾವಿ + ದೊಡ್ಡಿ

ಬೇವಿನ ಕಟ್ಟೆ be:vinakaṭṭI ಬೇವು + ಕಟ್ಟೆ

ಹೀಗೆ ಅನೇಕ ಮೂಲಗಳಿಂದ ಬಂದ ಅಡ್ಡ ಹೆಸರುಗಳು ಬೀದರ ಜಿಲ್ಲೆಯಲ್ಲಿ ಸಿಗುತ್ತವೆ. ಬೀದರ ಜಿಲ್ಲೆಯಲ್ಲಿ ಹೊಲೆಯ ಜಾತಿಯವರು ಬೌದ್ಧರಾದರೆ ಹಾಗೂ ಮಾದಿಗರು ಕ್ರೈಸ್ತ ಧರ್ಮಾವಲಂಬಿಸಿದರೆ ಅಡ್ಡ ಹೆಸರುಗಳಲ್ಲಾವ ಬದಲಾವಣೆಗಳಿಲ್ಲ. ವ್ಯಕ್ತಿ ನಾಮಗಳು ಮಾತ್ರ ಬದಲಾಗುವುದು ಕಾಣಬಹುದು. ಹೀಗಾಗಿ ಬೀದರ ಜಿಲ್ಲೆಯ ಅಡ್ಡ ಹೆಸರುಗಳು ಬಹುವಿಶಿಷ್ಟ. ಇದರ ಬಗ್ಗೆ ಅಧ್ಯಯನವೇ ಮಾಡಬಹುದು.

## ೩.೭. ಬೀದರ ಕನ್ನಡದ ಬೈಗಳು ಹಾಗೂ ಅವುಗಳು ಹುಟ್ಟುವ ಸನ್ನಿವೇಶಗಳು

ಮಾನವನು ಸೃಷ್ಟಿಯಿಂದಲೆ ಯಾವುದು ಬೇಕು ಯಾವುದು ಬೇಡ ಎಂಬುದನ್ನು ವಿಚಾರಮಾಡುತ ಬಂದು, ಬೇಕಾದುದನ್ನು ಸ್ವೀಕರಿಸಿ ಬೇಡವಾದುದನ್ನು ಮುಖ ಗಂಟಿಕ್ಕಿ, ದಬ್ಬಿಹಾಕುವುದು ರೂಢಿಸಿಕೊಂಡು ಬಂದಿದ್ದಾದಾನೆ. ಹಾಗೆಯೇ ಮನುಷ್ಯನು ತಪ್ಪು ಮಾಡಿದಾಗ ತಿದ್ದುವುದು, ಬೇಸರದಿಂದ ಜರೆಯುವುದು ರೂಢಿಗೆ ಬಂತು. ಜೆರೆಯುವುದು ಯಾವಾವದೋ ರೂಪ ತಾಳಿತ್ತು. ಜೆರೆಯುವುದರ ಅತ್ಯಂತ ತುಟ್ಟ ತುದಿಯ ಒಂದು ಹಂತಕ್ಕೆ ನಾವು ಬೈಗಳೆಂದು ಕರೆಯಬಹುದು.

ವ್ಯಕ್ತಿಯು ರೌದ್ರಾವತಾರತಾಳಿ ಕೋಪದ ಕಿಡಿಯನ್ನು ತನ್ನ ಬಾಯಿಯ ಮುಖಾಂತರ ಕಾರುವ ಅವಾಚ್ಯ ಶಬ್ದಗಳೆ ಬೈಗಳಾದವು ಎನ್ನಬೇಕು. ಬೈಗಳು ಈ ರೀತಿಯಾಗಿ ವಿಭಾಗಿಸಬಹುದು.

೧. ಗಂಡಸರ ಬೈಗಳು ೨. ಹೆಂಗಸರ ಬೈಗಳು

೧. ನಾಮ ಪದಗಳಿಂದ ಕೂಡಿದ ಬೈಗಳು

೨. ಹೋಲಿಕೆ ಮಾಡಿ ಬೈಯುವ ಬೈಗಳು

೩. ಲೈಂಗಿಕ ಬೈಗಳು

ಬೈಗಳು ಇಂದಿನದಲ್ಲ ಪುರಾಣ ಇತಿಹಾಸಗಳ ಕಾಲದಿಂದ ಬಂದಿದೆ. ಪುರಾಣಗಳಲ್ಲಿ ಋಷಿ ಮಹಾ ಋಷಿಗಳು ತಮಗೆ ಕೆಡುಕೆನಿಸಿದ್ದಾಗ, ದೇವರಿಗೆ ವಿರೋಧ ಎನಿಸಿದ್ದಾಗ ಜರೆಯುವದೊ ಶಾಪ ಹಾಕುವುದೊ ಮಾಡುತ್ತಿದ್ದರು. ಶಾಪಗಳೂ ಒಂದು ರೀತಿಯ ಬೈಗಳೆ. ಆ ಶಾಪಗಳು, ಯಾರಿಗೆ ಹಾಕುತ್ತಾರೆಯೊ ಆ ವ್ಯಕ್ತಿಗೆ ಬಂದು ಅವನ ಜೀವನವೆಲ್ಲ ಶಾಪದಂತೆ ಆಗುತ್ತಿತ್ತು. ಉದಾಹರಣೆ ಸುಕ್ರಾಚಾರ್ಯರು ಯಯಾತಿ ಮಹಾರಾಜನಿಗೆ ವಾರ್ದಕ್ಯ ಶಾಪ ಹಾಕಿದ; ಜೊತೆಗೆ ಉಹ:ಶಾಪವು ಕೊಟ್ಟಿದ ಅದೇನೆಂದರೆ ಯಾರಾದರೊಬ್ಬ ತರುಣ ವಾರ್ದಕ್ಯವನ್ನು ಸ್ವೀಕರಿಸಲು ಮುಂದಾದರೆ ಯಯಾತಿಯ

ವಾರ್ದಕ್ಯೆ ಹೋಗುತ್ತದೆ ಎಂದು ಆ ವಾರ್ದಕ್ಯವನ್ನು ಯಯಾತಿಯ ಮಗನೆ ಸ್ವೀಕರಿಸುತ್ತಾನೆ; ಇಪ್ಪತ್ತರ ಯುವಕ ತೊಂಬತ್ತರ ಮುದುಕನಾಗುತ್ತಾನೆ.

ರಾಮಾಯಣದಲ್ಲಿ ಗೌತಮನು ತನ್ನ ಹೆಂಡತಿಯಾದ ಅಹಲ್ಯೆಗೆ 'ನಿನ್ನ ಸೌಂದರ್ಯ ಕಲ್ಲಾಗಿ ಬೀಳಲಿ' ಎಂದು ಶಾಪಕೊಟ್ಟಾಗ ಆ ತ್ರಿಲೋಕ ಸುಂದರಿ ಕಲ್ಲಾದಳು. (ಬೈದಾಗ)

ಶಾಪ ತಗುಲಿದರಿಂದಲೆ ದುಷ್ಯಂತ ರಾಜನು ಶಕುಂತಲೆ ಎಂದು ಗುರುತಿಸಲಿಲ್ಲ.

ಬೈಬಲ್‌ನಲ್ಲಿ ೧. 'ಎಲೆ ಸರ್ಪದ ಜಾತಿಯವರೆ',

೨. ಆದಮನ ಸಂತತಿ ನಿನ್ನ ತಲೆ ಜಜ್ಜುವುದು

ನೀನು ಅವನ ಹಿಮ್ಮಡಿಯನ್ನು ಕಡಿಯುವಿ

ಎಂದು ಸರ್ಪಕ್ಕೆ ದೇವರು ಶಾಪ ಹಾಕಿದನು. ಅದರಂತೆಯೆ ಆಗುತ್ತಲಿದೆ.

ರನ್ನ : ಈ ಬೂತುಯೆನ್ನ ಸರಂಗೇಳ್ದಲ್ಲದೆ ಪೊರಮಡದು....

"ನೀರೊಳ್‌ಮೀನಿರ್ಕು ಎಸಡಿರ್ಕು ಇರ್ಪರೇ ಗಂಡರ್ ?

ದುರ್ಯೋಧನನನ್ನು ಕುರಿತು 'ನಿಸರ್ಗ ದ್ರೋಹಿ'

**ನಾಗಚಂದ್ರ :** ರಾವಣನಿಗೆ, 'ಅವಿವೇಕಿ', 'ದುರಾಚಾರಿ' 'ಪಾತಕ' ಎಂದು ಬೈದಿದ್ದಾನೆ

**ಕುಮಾರವ್ಯಾಸ :** ಕುಮಾರವ್ಯಾಸ ಭಾರತ ಸಭಾಪರ್ವದಲ್ಲಿ "ಗಂಡಂದಿರೈವರು..... ಒಬ್ಬಾಕೆಯನ್ನಾಳ

ಲಾರಿರಿ ನೀವು ಗಂಡರು ಷಂಡರೊ

**ಲಕ್ಷ್ಮೀಶ :** ಜೈಮಿನಿ ಭಾರತ 'ವೈಶೆ ಸಂಭವ' ಎಂದು ಅರ್ಜುನ ಬಬ್ರುವಹನನಿಗೆ ಬೈಯುತ್ತಾನೆ)

**ಶಾಸನ ಫಲಶ್ರುತಿ :** (ಶಾಸನದಲ್ಲಿಯ ಬೈಗಳು) '

"ಕಾಲೇ ಕಾಲೇ ಪಾಲನಿಯೋ ಭವದ್ಭಿಃ"

"ಸ್ವದತಾಂ ಪರದಾಂ, ವಾಯೋಹರತೀ

ವಸುಂಧರಾಂ ಷಷ್ಠಿರ್ವರ್ಷ ಸಹಸ್ರಾಣಿ

ವಿಷ್ಠಾಯಂ ಜಾಯತೆ ಕ್ರಿಮಿಃ"

"ಇದಾನಳಿವೊಮಂ ವಾರಣಾಸಿಯೋಳ್

ಸಾಸಿರ್ವರ್ ಬ್ರಾಹ್ಮಣರುಂ ಕವಿಲೆಯಂ ಕೊಂದ ಪಾತಕನಕ್ಕುಂ"

"ಇದಾನಳಿವೊಂ ಏಳನಯ ನರಕದ ಪುಟುವಕ್ಕುಂ"(ಶಾಸನದ ಪ್ರಥಮಕ್ಕೆ ಬರುತ್ತವೆ)

ಶಾಸನದ ಕೊನೆ ಸಾಲುಗಳಲ್ಲಿ ಬೈಗಳು ಬರುತ್ತವೆ. ಇವು ಎಚ್ಚರಿಕೆ ಮಾತುಗಳು. ಅವು ಉಲ್ಲಂಘಿಸಿದವರಿಗೆ ಶಿಕ್ಷೆಯಾಗುತ್ತಿತ್ತು. ಹಿಂದಿನ ಕಾಲದಲ್ಲಿ ಬೈಗಳಿಗೆ ಬಹಳ ಹೆದರುತ್ತಿದ್ದರೆಂದು ಬೈಗಳಿಂದ ತಿಳಿಯುತ್ತದೆ. ಲೈಂಗಿಕ ಬೈಗಳೆ ಹೆಚ್ಚಾಗಿರುವುದು ನಾವು ಕಾಣುತ್ತೇವೆ. ಶಾಸನಗಳಲ್ಲಿ ಬರುವ ಬೈಗಳು ಗಂಡಸರ ಬೈಗಳಾಗಿವೆ. ಶಾಸನ ಕವಿಗಳೆಲ್ಲ ಗಂಡಸರೆಯಾಗಿರುವುದು ಇದಕ್ಕೆ ಒಂದು ಕಾರಣವಾದರೆ ಇನ್ನೊಂದು ಕಾರಣ ಶಾಸನಗಳೆಲ್ಲವೂ ರಾಜಾಜ್ಞೆಗಳಾಗಿದ್ದವು. ರಾಜನು ಪುರುಷನಾಗಿರುವುದರಿಂದ ಇಂಥ ರೀತಿಯ ಬೈಗಳು ಇಲ್ಲಿ ಕಾಣುತ್ತೇವೆ. ಸಾಹಿತ್ಯದಲ್ಲಿ ಗಂಡಸರ, ಬೈಗಳು ಹೆಂಗಸರ ಬೈಗಳು ನಾವು ಕಾಣತ್ತೇವೆ. ದ್ರೌಪದಿ ತನ್ನ ಗಂಡಂದಿರನ್ನ ಕುರಿತು ಬೈದದ್ದು ಹೆಂಗಸರ ಬೈಗಳಿಗೆ ಒಳ್ಳೆ ಉದಾಹರಣೆಯಾಗಿದೆ.

ಶಾಸನಗಳು ಹಾಗೂ ಸಾಹಿತ್ಯವಷ್ಟೆ ಬೈಗಳಿಗೆ ಉದಾಹರಣೆಗಳಲ್ಲ. ಅದಕ್ಕೂ ಎಷ್ಟೋ ಪಟ್ಟು ಬೈಗಳು ಜನಸಾಮಾನ್ಯರಲ್ಲಿ ನಾವು ದಿನನಿತ್ಯ ಕಾಣುತ್ತೇವೆ. ಬಸ್ಸಲೊ, ರೈಲ್ವೆಯಲ್ಲೊ ಸೀಟಿಗಾಗಿ ಜಗಳ, ಅದರಲ್ಲಿ ಬೈಗಳು. ಗಂಡ ಹೆಂಡರ ನಡುವಿನ ಜಗಳದಲ್ಲಿ ಬೈಗಳು ಓಣಿಯವರೊಂದಿಗೆ ಜಗಳ ಬೈಗಳು ಇವುಗಳು ಒಂದಕೊಂದು ಭಿನ್ನ ರೀತಿಯಲ್ಲಿವೆ. ಬೀದರ ಕನ್ನಡದಲ್ಲಿ ಗಂಡ ಹೆಂಡತಿಗೆ ಬೈಯುವುದು ಸಾಮಾನ್ಯ, ಎಷ್ಟು ಹೊಲಸು ಅವಚ್ಛ್ಯವಾಗಿಯೂ ಬೈಯಬಹುದು. ಆದರೆ ಹೆಂಡತಿಯೊಡನೆ ಜಗಳಾಡುವಾಗ ಆಕೆಯ ತಂಗಿಗೊ, ಅಕ್ಕಳಿಗೊ, ತಾಯಿಗೊ ಬೈಯುವುದರಿಂದ ಆಕೆಗೆ ಹೆಚ್ಚು ಕೋಪ ಬರುತ್ತದೆ. ಅದಕ್ಕೆ ಆಕೆಯ ಪ್ರತಿಕ್ರಿಯೆ ಗಂಡನ ತಂಗಿ ತಾಯಿಗೂ ಬಯುವುದು ಸಹಜ. ಸ್ವತಃ ಆಕೆಯನ್ನುದ್ದೇಶಿಸಿ ಬೈಗಳು ಬೈದರೆ ಯಾವ ತೊಂದರೆಯಾಗುವುದಿಲ್ಲ.

ಓಣಿಯವರು ಯಾವದೋಕಾರಣಕ್ಕೆ ಜಗಳ ಮಾಡುವಾಗ ಒಬ್ಬರನ್ನೊಬ್ಬರು ತಾಯಿಯನ್ನು ಅವಚ್ಛವಾಗಿ ಬೈದುಕೊಳ್ಳುವುದು ಸಹಜ. ಸಹೋದರಿಯರನ್ನು ಉದ್ದೇಶಿಸಿ ಬೈದರೆ ಜಗಳ ಬಹಳವಾಗುತ್ತದೆ. ಹೆಂಡತಿಯರನ್ನುದ್ದೇಶಿಸಿ ಬೈದರೆ ಕಾದಾಟ ಹೊಡೆಪೆಟ್ಟು·ಆಗೇ ಆಗುತ್ತವೆ. ಕೆಲವೊಮ್ಮೆ ಜೀವ ಹೊರಟು ಹೋಗುವುದು ಸಹಜ. ಅದಕ್ಕಾಗಿ ಎಷ್ಟೊ ಜಗಳವಾಡಿದರೂ ಎದುರಾಳಿಯ ಹೆಂಡತಿಯನ್ನುದ್ದೇಶಿಸಿ ಬೈಯುವುದು ಬಹಳ ಬಹಳ ಕಡಿಮೆ. ಹಿಂದೆ ಬೈದುಕೊಳ್ಳಬಹುದು. ಹೆಂಗಸರು ಬೈದುಕೊಳ್ಳುವಾಗ ಕೆಲವು ಗಂಟೆಗಳು ಬೈದುಕೊಳ್ಳಬವುದು. ಕೆಲವೊಮ್ಮೆ ಕಂಡಾಗಲೆಲ್ಲ ಒಬ್ಬರನ್ನೊಬ್ಬರು ಬೈದುಕೊಳ್ಳುವುದು; ನಾಯಿಯೋ, ದನವೊ ಎದುರುಬಂದಾಗ ಜಗಳ ಮಾಡುವ ಹೆಂಗಸಿಗೆ ಉದ್ದೇಶಿಸಿ ನಾಯಿ, ದನಗಳಿಗೆ ಬೈಯುವುದು; ಆಕೆ ನನ್ನನ್ನೆ ಬೈದಳೆಂದು ಜಗಳಕ್ಕೆ ಅಣಿಯಾಗುವುದು, ಸಂದರ್ಭಗಳಲ್ಲಿ ಬೈದಾಟ ಸಹಜವಾಗಿಯೇ ನಡೆಯುತ್ತಿರುತ್ತದೆ.

ಮೇಲ್ವರ್ಗದವರಿಗೆ ಏಕವಚನದಲ್ಲಿ ಬಯಲು ಕೆಳವರ್ಗದವರಿಗೆ ಆಗುವುದೆ ಇಲ್ಲ. ಮೇಲ್ವರ್ಗದವರು ಏನಾದರೂ ತಪ್ಪು ಮಾಡಿದರೆ, ಹೀಗೆ ಮಾಡಬೇಡಿರಿ ಗೌಡರೆ, ದೊರೆ ಎಂದು ಮನವಿ ಮಾಡಿಕೊಳ್ಳುವುದು ಬೀದರ ಜಿಲ್ಲೆಯಲ್ಲಿದೆ. ಕೆಲವೊಮ್ಮೆ ಮೇಲ್ವರ್ಗದವರ ಮೇಲೆ ಎಗರಿ ಬೈಯುವುದು ಹೊಡೆಯುವುದು ನಡೆಯುತ್ತದೆ. ಇದು ಬಹಳ ಕಡಿಮೆ. ಆದರೆ, ಮೇಲ್ವರ್ಗದವರು ಕೆಳವರ್ಗದವರಿಗೆ ಬಾಯಿಗೆ ಬಂದಂತೆ ಬೈಯುವುದು ಸಹಜವಾಗಿದೆ. ಆದರೆ ಹೆಂಡತಿಯನ್ನುದ್ದೇಶಿಸಿ ಬೈಯುವುದು ಇಲ್ಲಿಯೂ ಕಷ್ಟಸಾಧ್ಯ. ಜಾತಿಯನ್ನುದ್ದೇಶಿಸಿ ಬೈದರೆ ಅವರಿಗೂ ಕಷ್ಟಸಾಧ್ಯ. ಯಾಕೆಂದರೆ ಆ ಜಾತಿಯವರೆಲ್ಲ ಜಗಳಕ್ಕೆ ಬರಲುಬಹುದು.

ನಾಮಪದಗಳನ್ನುಪಯೋಗಿಸಿ ಬೈದರೆ ಕೆಳಜಾತಿಗೆ ಕೋಪವೇ ಬರುವುದಿಲ್ಲ. ಯಾಕೆಂದರೆ ಅವರನ್ನು ಮಾತನಾಡಿಸುವುದೇ ಹಾಗೆಯೇ. ಆದರೆ ಹೊಲಿಕೆಯ ಬೈಗಳು ಬೈದರೆ ಇವರಿಗೂ ಸಿಟ್ಟು ಬರುವುದು ಸಹಜ, ಆದರೆ ಲೈಂಗಿಕ ಬೈಗಳು ಇಬ್ಬರಿಗೂ ಜಗಳವನ್ನು ಹುಟ್ಟಿಸುತ್ತದೆ.

ಹೆಂಗಸರು-ಹೆಂಗಸರು ಲೈಂಗಿಕವಾಗಿ ಬೈದುಕೊಳ್ಳುವುದೇ ಹೆಚ್ಚು, ಕೈಯಿಂದಾಗದ ಕೆಲಸ ಇವರು ಬಾಯಿಂದ ಆಡಿ ತೋರಿಸುತ್ತಾರೆ. ಲೈಂಗಿಕ ಬೈಗಳು ಪುರುಷರು ಹೆಂಗಸರಿಗೆ ಬಯುವಂತಿಲ್ಲ. ಮೇಲ್ವರ್ಗದವರಿಗೂ ಕಷ್ಟವೆ. ಹೀಗಾಗಿ ಒಬ್ಬ ಹೆಂಗಸು ಒಬ್ಬ ಗಂಡಸನನ್ನು ಬೈಯ್ಯುವಾಗ ಅಥವಾ ಗಂಡಸು ಒಬ್ಬ ಹೆಂಗಸನ್ನು ಬೈಯ್ಯುವಾಗ ಲೈಂಗಿಕ ಬೈಗಳು ಬಳಸುವುದಿಲ್ಲ. ಬಳಸಿದರೆ ಬಹಳ ಕಡಿಮೆ.

ಜಾತಿ, ಮತ, ಪಂಥ ಭೇದವಿಲ್ಲದೆ ಸುಶಿಕ್ಷಿತರಲ್ಲಿ ಬೈಗಳು ಬಹಳ ವಿರಳ, ಆದರೆ ಅವಾಚ್ಯ ಶಬ್ದಗಳು ಇನ್ನೂ ಕಡಿಮೆ. ಹೀಗಾಗಿ ವಿದ್ಯಾವಂತರ ಜಗಳ ಬಹಳ ಕಡಿಮೆ. ಕೋರ್ಟಿಗೆ ಬರುವವರು ಅವಿದ್ಯಾವಂತರೆ ಹೆಚ್ಚು. 'ಮಾತು ಬಲ್ಲಾತಂಗೆ ಮಾತೊಂದು ಮಾಣಿಕವು' ಎಂದು ಸರ್ವಜ್ಞ ಹೇಳುವಂತೆ ಲೋಕದ ಅನುಭವ ಇದ್ದವರು ಜಗಳಗಳಿಗೆ ಆಸ್ಪದ ಕೊಡುವುದಿಲ್ಲ.

ಲೈಂಗಿಕ ಬೈಗಳು ಹೆಂಗಸರು ಗಂಡಸರಿಗೆ ಬೈಯುವುದಿಲ್ಲ ಯಾಕೆಂದರೆ ಆ ರೀತಿ ಬೈಯ್ಯುವುದರಿಂದ ಬೈಗಳೆಲ್ಲ ಬೈಯ್ಯುವ ಹೆಂಗಸಿಗೆ ಹತ್ತುತ್ತವೆ. ಪರೋಕ್ಷವಾಗಿ ಕೆಲವು ಬೈಗಳು ಸಿಗುತ್ತವೆ. ಬೈಗಳ ವೈಖರಿಯನ್ನು ಅನುಬಂಧದಲ್ಲಿ ನೋಡಬಹುದು.

ನಿಮ್ಮನಾಮದಿ ನಾ ಹಡಾ ಎಂದು ಔರಾದ ತಾಲೂಕಿನಲ್ಲಿ ಹೆಚ್ಚು ಬಳಕೆಯಲ್ಲಿದೆ. ನಿನ್ನೇತಿನಾಗ ಕತ್ತಿ ಕರಿನಾಯಿ ಉಚ್ಚಿ ಹೊಯ್ಲಿ. ನಿಂಗ್ ಕುಳ್ಳಾಗ್ಹಾಕಿ ಸುಡ್ಲಿ, ನಿಂಗ್ ಪಟ್ಟಾ ಬಡಿಲಿ, ಘಾಳಿ ಬರ್ಲಿ, ಗಡ್ಡಿಬರ್ಲಿ, ಬೇಮಾರಿ ಬರ್ಲಿ, ನಕ್ಕಂದಿ ಹೆಗಲ್ ಮ್ಯಾಲ ಡೆಂಗ್ ಡೆಂಗ್ ಬಯ್ಸಿ, ಮಣ್ಣಾಗ್ ಹಾಕ್ಲಿ, ಮುದ್ಯಾ, ಮುದಿತುಲ್ಲಿಂದು, ಕುಂಡಿತನ ಮುದುಕ್, ಸೀರ್ ಮಾರ್ಯಾವ್

ಈ ಬೈಗಳಲ್ಲಿ 'ನಾ' ಧ್ವನಿಮಾ ನನ್, ನನ್ನ ಎಂಬರ್ಥ ಕೊಡುತ್ತದೆ. 'ನಾ' ಎಂದು ಭಾಲ್ಕಿಗಡೆ ಬಳಸಿದರೆ ಬಸವ ಕಲ್ಯಾಣಕಡೆ ನನ್ ಆಗುತ್ತದೆ. ನಿನ್ಮನಾಮದಿ ಎಂದು ಭಾಲ್ಕಿ ತಾಲೂಕಿನ ಉತ್ತರ ಭಾಗ ಹಾಗೂ ಔರಾದ ತಾಲೂಕಿನ ದಕ್ಷಿಣ ಭಾಗದಲ್ಲಿ ಬಳಕೆಯಲ್ಲಿದೆ.

### ೩.೮. ದ್ವಿಭಾಷಿಕರ ಬೈಗಳು

ಉರ್ದು ಭಾಷೆಯ ಪ್ರಭಾವಿತ ಬೈಗಳು ಬೀದರ ತಾಲೂಕು ಹಾಗೂ ಭಾಲ್ಕಿ ತಾಲೂಕಿನಲ್ಲಿ ಅಲ್ಲಲ್ಲಿ ಸಿಗುತ್ತವೆ. ಉದಾ. ಛಿನಾಲ್ ಕೆ, ಚೋದಿಕೆ, ಭೋಸುಡಿಕೆ, ಕತ್ತಿಕೆ, ರಂಡಿಕೆ, ಬೋಳಿಕೆ ಎಂದು ಇಲ್ಲಿ ಬರುವ 'ಕೆ' ಧ್ವನಿ ಅವ್ ಎಂದಾಗುತ್ತದೆ ಛಿನಾಲ್‌ಕೆ- ಛಿನಾಲಿಯಾಮ ಎಂಬಂತಾಗುತ್ತದೆ.

ಮರಾಠಿ ಪ್ರಭಾವದಿಂದ ಬೈಯುವ ಬೈಗಳು 'ನಿನ್ ಪುಚ್ಚ್ಯಾಗನ ಬುಲ್ಲಿ' ಛಿನಾಲಿಚ್ಯಾ, ಚೋದಿಚ್ಯಾ, ಬೋಸುಡಿಚ್ಯಾ, ರಂಡಿಚ್ಯಾ ಎಂದು. ಇಲ್ಲಿ 'ಚ್ಯಾ' ಮರಾಠಿಯ ಆವ ಎಂಬರ್ಥ. 'ಝುಪಾಟಭಾದ್ರಸ್ತಾ' 'ನಿಂಗ್ಯಾನ ಝ್ಯಾಟ್‌ಖುನಾಅದಾ' ಯಾರ್‌ಬಿ ನನ ಝ್ಯಾಟ್ ಕಿತ್ಕೊಮಾಲ್ ಇತ್ಯಾದಿ ಬರುತ್ತವೆ. ಬೀದರ್ ಕನ್ನಡದ ವಿಶೇಷ ಬೈಗಳ ಪಟ್ಟಿಯನ್ನು  ಅನಬಂಧದಲ್ಲಿ ಕೊಡಲಾಗಿದೆ. ಪುರುಷರ ಬೈಗಳು ಹಾಗೂ ಸ್ತ್ರೀಯರ ಬೈಗಳು ಮತ್ತು ಪ್ರಾಣಿ ಪಕ್ಷಿಗಳಿಗೂ ಬೈಯುವ ಬೈಗಳು ಬೇರೆ ಬೇರೆ ರೀತಿಯಲ್ಲಿವೆ.

**ಗಂಡಸರು ಗಂಡಸರಿಗೆ ಬೈಯುವುದು :** ಮುಂಡೆ ಮಗ, ಸೂಳಿ ಮಗ, ಖಜಾಳಿಮಗ, ಕತ್ತಿಮಗ, ದನಕಾಯ್ಯಾ, ಹಣಸ್ಯಾ, ಬೇಕೂಫ್ ಮತ್ತು ಮಗ ಇದ್ದ ಕಡೆಯಲ್ಲ 'ನ'ಕಾರದ ಒತ್ತಾಕ್ಷರ ಬರುತ್ತದೆ. ಮುಂಡೆಮಗ್ನಾ, ಸೂಳ್ಯಿಮಗ್ನಾ ಹೀಗೆ...

**ಹೆಂಗಸರಿಗೆ ಬೈಯುವ ಪದಗಳು :** ಛಿನಾಲಿ, ರಂಡಿ, ಚಿಪಡಿ, ಸೂಳಿ, ಬೋಳಿ, ಖಜಾಳಿ, ಹಿಜಡಿ, ಹೊಯ್ಮಲ್ಲಿ, ಉಟಪಳಿ, ಭೋಸುಡಿ, ಕಂಡಾಳಿ, ಕುತ್ರಿ, ಜ್ಯೋದಿ, ಜಾಣಿ, ಜೋಗ್ತಿ

**ಹೆಂಗಸರು ಗಂಡಸರಿಗೆ ಬೈಯುವ ಪದಗಳು :** ಹಾಟ್ಯ, ಚಿಪಡ್ಯಾ, ಕುಲಗೇಡಿ, ಪಿಸ್ರ್ಯಾ, ಲ್ಯಾಳ್ಯಾ, ಭಾಡ್ಯಾ, ಫಾಣ್ಯ, ಬೇಮಾರಿ ಬರ್ಲಿ, ಹುಡ್ಕೊಂಡು ಹೋಗ್ನಿ, ಹೆಣ ಎಲ್ಲೆ, ಧೀಪಾ ಅಡಗ್ಲಿ, ಕುಳ್ಳಾನಾದಾಗ ಹಾಕಿ ಸುಲ್ಡಿ, ಕೈಗಿ ಕರಿನಾಗುರ್ ಕಡಿಲಿ, ಗಾರಿ ತೋಲ್ಡಿ, ಗಡ್ಡಿ ಬರ್ಲಿ, ಫಾಳಿ ಬಲ್ಲಿ, ಮರ್ಗಿಬರ್ಲಿ, ನನ್ನಂಥ ಹೆಣ್ಣಾವನೋಡು ಹಾಕೊಂಡು ಖುಂತಿ

**ಪ್ರಾಣಿ ಪಕ್ಷಿಗಳಿಗೆ ಬೈಯುವ ಪದಗಳು :** ನಿನ್ ಬಾಯಾಗ ಮಣ್ಣಹಾಕ್ಲಿ, ನಿಂಗ್ ಮಡಸ್ಲಿ, ನಿಂಕಡಿಲಿ, ನಿಂಗ್ ಖಟಕರಿಗಿ ಕುಲ್ಡಿ(ಕುಡ್ಲಿ), ನಿಂಗ್ ಕೊಯ್ ನಿನ ಧೊರ್ತಿನ ಹಡಾ, ನಿನ್ನಧೊರ್ತಿಗಿ ಏಸ್

ಅವಾನೋಡುಹುಳಾ ಇತ್ಯಾದಿ ಇನ್ನೂ ಅಶ್ಲೀಲ ಶಬ್ದಗಳಿಂದ ಬೈಯುತ್ತಾರೆ. ದೈಹಿಕವಾಗಿ ಅಂಗವಿಕಲರಿಗೆ ಆ ಅಂಗ ಮುಂದು ಮಾಡಿ ಬೈಯುವದೂ ಉಂಟು.

ಕುಡ್ನಾ-ಕುಡ್ಯಾ, ಕುಂಟ-ಕುಂಟ್ಯಾ, ಕಿವುಡ-ಕಿವಡ್ಯಾ, ಢೊಳ್ಯಾ, ಸೊಟ್ಯಾ, ಹೆಣ, ಗಡಗಿ ನೆತ್ಯಾ, ಕಾಳ್ಯಾ, ಮೆಳ್ಳ್ಯಾ, ಹಿಂಬುರಗುಂಡ್ಯಾ, ಬುಡ್ನ್ಯಾ, ಗಿಡ್ಡ್ಯಾ, ಧಬಲ್ಯಾ, ಒಣಗ್ಯಾ, ಟಿವ್ ಟಿವಿ ಕಾಲಿಂದ್, ಆನಿಕಾಲಿಂದು, ಆರ್ ಬೊಳ್ಯಾ, ಮುದಿ, ಇತ್ಯಾದಿ

**ಸ್ತ್ರೀಯರಿಗೆ :** ಕುಂಟಿ, ಕಿವುಡಿ, ಢೊಳ್ಳಿ, ಕಾಳಿ, ಮೆಳ್ಳಿ, ಹಿಂಬುರಗುಂಡಿ, ಬುಡ್ನಿ, ಗಿಡ್ಡಿ, ಧಬಾಲಿ, ಒಣಗಿ ಇತ್ಯಾದಿ.

## ಧ್ವನಿಮಾ ಹಂತ

ಭಾಷೆಯಲ್ಲಿರುವ ಮಹತ್ವದ ಧ್ವನಿ ಧ್ವನಿಮಾ. ಪ್ರತ್ಯೇಕ ಶಬ್ದ ನಿರ್ಮಾಣದ ಸಾಮರ್ಥ್ಯವನ್ನು ಇದು ಪಡೆದಿರುತ್ತದೆ. ಒಂದು ಭಾಷೆಯಲ್ಲಿರುವ ಇಂಥ ಧ್ವನಿಮಾಗಳನ್ನು ಗುರುತಿಸುವುದು ಅದರ ರಚನೆಯನ್ನರಿಯುವಲ್ಲಿ ಮಹತ್ವದ ಹಂತವಾಗಿರುತ್ತದೆ.

ಧ್ವನಿಗಳನ್ನು ಗುರುತಿಸಲು ಖಚಿತ ಆಧಾರವೆಂದರೆ ಕನಿಷ್ಠ ಯುಗ್ಮ(Minimal pair). ಕನಿಷ್ಠ ವ್ಯತ್ಯಾಸ ಹೊಂದಿದ ಎರಡು ಶಬ್ದಗಳ ಗುಂಪೇ ಕನಿಷ್ಠ ಯುಗ್ಮ ಎನಿಸಿಕೊಳ್ಳುತ್ತದೆ. ಈ ಕನಿಷ್ಠ ಯುಗ್ಮದಲ್ಲಿರುವ ವ್ಯತ್ಯಾಸ ಹೊಂದಿರುವ ಧ್ವನಿಗಳೇ ಧ್ವನಿಮಾಗಳು. ಶಬ್ದಾರಂಭದಲ್ಲಿರಬಹುದು. ಶಬ್ದಮಧ್ಯವಿರಬಹುದು. ಅಥವಾ ಶಬ್ದದ ಕೊನೆಯಲ್ಲಿರಬಹುದು ಏನೆಯಾದರೂ ಈ ವ್ಯತ್ಯಾಸ ಕನಿಷ್ಠವಾಗಿರಬೇಕೆಂಬುದು ಮುಖ್ಯ. ಯಾಕೆಂದರೆ ಇದರಿಂದಾಗಿ ಪ್ರತ್ಯೇಕ ಶಬ್ದ ನಿರ್ಮಾಣ ಆಗುತ್ತಿರುತ್ತದೆ. ಹೀಗಾಗಿಯೇ ಇವು ಭಾಷೆಯ ಮಹತ್ವದ ಧ್ವನಿಗಳು. ಧ್ವನಿಮಾಗಳಗಳನ್ನು ಸ್ವರ ಧ್ವನಿಮಾ ಹಾಗೂ ವ್ಯಂಜನ ಧ್ವನಿಮಾ ಎಂದು ಎರಡು ರೀತಿಯಲ್ಲಿ ಅಭ್ಯಾಸಿಸಬಹುದು.

### ೪.೧. ಬೀದರ ಕನ್ನಡದ ಸ್ವರ ಧ್ವನಿಮಾಗಳು

ಶಬ್ದಾರಂಭದಲ್ಲಿ 'ಅ' ಧ್ವನಿಮಾ (ಅ-)

| | | |
|---|---|---|
| ಅಗಟ್ಕಿ | agaṭki | ಹಸಿರುತೆನೆ ಬೆಯಿಸಲು ಮಾಡಿದ ಅಗ್ನಿ ಕುಂಡ |
| ಅಗ್ಗಿ | aggI | ಜ಼ಾತ್ರೆಗಳಲ್ಲಿಯ ಅಗ್ನಿಕುಂಡ |
| ಅಗಳು | agaḷʊ | ಅನ್ನದ ಚೂರು |
| ಅಗಿ | agI | ಗಿಡಮರಗಳ ಮೊಳಕೆ |
| ಅಚನಾಕ | acanak | ಆಕಸ್ಮಿಕ |
| ಅಟ್ಕಿ | aṭki | ಸಾಮಾನುಗಳಿಡಲು ಮಾಡಿದ ಸಜ್ಜ |
| ಅಟವಾಡಾ | aṭ. va:ḍa | ವಾರ |
| ಅಟೋಳಿ | aṭoḷI- | ಹೊಲಗದ್ದೆಗಳಲ್ಲಿಯ ಮಂಚಿಗೆ |
| ಅಡ್ತುಂಬಾ | aḍtumba: | ಹುಂಬ |

| | | |
|---|---|---|
| ಅಡ್ಗಿ | aḍgI | ಅಡಿಗೆ |
| ಅಡ್ಯಾಗ | aḍEga | ಅಡವಿಯಲ್ಲಿ |
| ಅದುಕ್ | aduk | ಅದಕ್ಕೆ |
| ಅನ್ಲತಿದಾ | anlatda | ಅನ್ನುತ್ತಿದ್ದ |
| ಅನ್ತಾರ್ | an̄ta;r | ಅನ್ನುತ್ತಾರೆ |
| ಅನ್ಪಡ್ | anphaḍ | ಅಶಿಕ್ಷಿತ |
| ಅಪರಂಪಾರ | aparampa:r | ಅತೀ ಹೆಚ್ಚು |
| ಅಪ್ಪುಟ್ | apputḍ | ಪೂರ್ಣ |
| ಅನ್ಗಡ್ | angaḍ | ಅತಿ |
| ಅಪ್ಪೆಸಿ | appesI | ಅಪಶಕುನ |
| ಅಪ್ಸೂರ್ | apsu:r | ಅಪಸ್ವರ |
| ಅಬರು | abaru | ಮರ್ಯಾದೆ |
| ಅಲ್ಮಾರಿ | almarI | ಅಲ್ಮಾರಿ |
| ಅಲ್ಲ | alla | ಇಲ್ಲ |
| ಅಲ್ಲುಕ್ತಿದ | allukh̄id | ಅನ್ನುತ್ತಿದ್ದ |
| ಅವನಿಗಾ | avanIga | ಅವನಿಗೆ |
| ಅವ್ವ | avva | ಅಮ್ಮ |
| ಅವುಕ್ | avuk | ಅವುಗಳಿಗೆ |
| ಅವುಟ್‌ಗಿ | avuṭgi | ಅಗ್ನಿಕುಂಡ |
| ಅಳ್ | aḷ | ಅರಳು(ಮಂಡಕ್ಕಿ) |
| ಅಳ್ಯಾ | a ḷE | ಅಳಿಯ |
| ಅಳ್ಳಿ | aḷnI | ಉಪ್ಪಿಲ್ಲದ |
| ಅಂಗ್ಟಾ | angṭa | ಉಂಗುಷ್ಟ |
| ಅಂಗೂರ್ | aŋgu:r | ದ್ರಾಕ್ಷಿ |
| ಅಂಡಿ | aṇḍI | ಮೊಟ್ಟೆ |
| ಅಂವಾ | an̄va: | ಅವನು |

| | | |
|---|---|---|
| ಅಗರಬತ್ತಿ | agarabattI | ಊದಿನಕಡ್ಡಿ |
| ಅಯ್ಯಾ | ayE | ಜಂಗಮ |
| ಅಜಾಫ್ | aJap | ಆಶ್ಚರ್ಯ |

ಶಬ್ದ ಮಧ್ಯೆ ಬರುವ ಸ್ವರ -ಅ-

| | | |
|---|---|---|
| ಅಗಟ್ಕಿ | agaṭkI | |
| ಅಗಳು | agaḷU | |
| ಅಬರು | abarU | |
| ಇಂಚ್ಟಿ | iṇcI | ಚಾಟಿಯ ಕಬ್ಬಿಣದ ಹಿಡಿ |
| ಇತ್ಕಡಿ | itkaḍI | ಈಕಡೆ |
| ಇರಾಕತಿ | ira:katI | ಮೂತ್ರ |
| ಆಕಡಿ | akaḍI | ಆಕಡೆ |
| ಆತದ | atada | ಆಗುತ್ತದೆ |
| ಕನಡಿ | kanaḍI | ಕನ್ನಡಿ |
| ಕುಲಗೇಡಿ | kulageḍI | ಕೆಟ್ಟ |
| ಖಂಡ್ಕಿತಿ | khanḍkitI | ಅರ್ದ |
| ಘಳಕಿ | ghaḷadi | ಆದಾಯ |
| ಗಳಗಿ | gaḷagI | ಗಂಟೆ |
| ಚೆಣಕಿ | cenkI | ತಮಟೆ ಬಾರಿಸುವ |
| ಕಿರಿದಾದ ಎಡ ಕಡ್ಡಿ | | |
| ಚಿಲಕಿ | cilakI | ಮಾಳಿಗೆಯ ಕಟ್ಟಿಗೆ ತುಂಡು |
| ಜಗತ್ಯಾ | Jagate | ಪ್ರಪಂಚ |
| ಝಿರಳಿ | JuiraḷI | ಜಿರಲೆ |
| ಢೆಲಜಿ | ḍhelaJI | ಹೆಬ್ಬಾಗಿಲ ಪಕ್ಕದ ಕೋಣೆ |
| ಢೇಕರ್ಕಿ | ḍhekarkI | ತೇಗು |
| ತೆಳಕ | teḷaka | ಕೆಳಗೆ |
| ಧೊಡವ್ವ | dhoḍavva | ದೊಡ್ಡವನು |

| | | |
|---|---|---|
| ಧೊಡಪ್ಪ | dhoḍappa | ದೊಡ್ಡಪ್ಪ(ತಂದೆಯ ಅಣ್ಣ) |
| ಪಡಸಾಲಿ | paḍa salI | ಮನೆಯ ಮುಂಭಾಗದ ಛಾವಣಿ |
| ಪಾತರಗಿತ್ತಿ | paitara gittI | ಚಿಟ್ಟೆ |
| ಬಗುಲ್ | bagul | ಬೇರೆ |
| ಬಲ್ಗಾ | bala | ಕೆಮ್ಮು |
| ಬಳ್ಳು | baḷḷU | ಬೆರಳು |
| ಮರಬ್ | marab | ಗಟ್ಟಿಯಾದ ಮಣ್ಣು |
| ಮರ್ಚುಲ್ | marcul | ಚೊಕ್ಕಿಲನಂತರ |
| ಮಳಕೈ | maḷkaI | ಮೊಣಕೈ |
| ಯಣ | yaṇa | ಅಣ್ಣ |
| ಯಮ್ಮಿ | yammI | ಎಮ್ಮೆ |
| ಯಪ್ಪ | yappa | ಅಪ್ಪ |
| ಯಕ್ಕ | yakka | ಅಕ್ಕ |
| ಯಣ್ಣೆ | yaṇṇI | ಎಣ್ಣೆ |
| ಯರ್‌ಜರಿ | yaraJarI | ಹೋಗುಬಾ |
| ರಕ್ಕಾ | rakka | ರೂಪಾಯಿ |
| ಲಗ್ಗುಣ | lagguṇa | ಮದುವೆ |
| ವರುಗು | varugu | ಮಲಗು· |
| ವವಾಳಿ | vavaḷI | ಆರತಿ |
| ವಂಕ್ | vaŋk | ಬಾಗಿದ |
| ವತಟಗಿ | vataṭigI | ಒಂದೆಕಡೆ |
| ಶಣವ್ | śṇav | ಚಿಕ್ಕಮ್ಮ |
| ಶೆಪ್ಪಿ | śeppI | ಸಿಪ್ಪೆ |
| ಸಕ್ರಿ | sakrI | ಸಕ್ಕರೆ |
| ಹಣೆಗಾ | haṇega | ಎತ್ತಿನ ಹಣೆಗೆ ಕಟ್ಟುವ ಹಗ್ಗ(ಸೂತ್ರದಾರ) |

| | | |
|---|---|---|
| ಹತಾಳಿ | hataḷI | ಹಾಲು ಕಾಯಿಸಲು ಮಾಡಿದ ವಿಶೇಷ ಒಲೆ |
| ಹಮ್ಮಿಣಿ | hammitṇI | ಹಣ ಇಡಲು ಮಾಡಿದ ಚೀಲ |
| ಹಳ್ಳಾ | haḷḷa | ಸಣ್ಣನದಿ |
| ಹಿಜಡಾ | hiJaḍa | ನಪುಂಸಕ |
| ಹಂತಿ | hantI | ರಾಶಿ ಮಾಡಲು ತೆನೆಗಳಿಗೆ ಎತ್ತುಗಳಿಂದ ತುಳಿಸುವುದು |
| ಹರಿ | harI | ಪ್ರತ್ಯೇಕಿಸು |
| ಹಲ್ಕಿ | halkI | ಹಗುರ |

ಶಬ್ದಾಂತ್ಯದಲ್ಲಿ 'ಅ' ಸ್ವರ(-ಅ)

| | | |
|---|---|---|
| ಆತದ | atada | ಆಗುತ್ತದೆ |
| ತೆಳಕ | teḷaka | ಕೆಳಗೆ |
| ಧೊಡವ್ವ | dhoḍavva | ತಾಯಿಯ ಅಕ್ಕ |
| ಯಣ | yaṇa | ಅಣ್ಣ |
| ಯಪ್ಪ | yappa | ಅಪ್ಪ |
| ಯಕ್ಕ | yakka | ಅಕ್ಕ |
| ಅಲ್ಲ | alla | ಹಸಿಶುಂಟಿ |
| ಯವ್ವ | yavva | ಅಮ್ಮ |
| ಒಣ | oṇa | ಬರೀ/ಒಣಗಿದ |
| ಒಲ್ಲ | olla | ಒಲ್ಲೆ |
| ಕರ | kara | ಕರು |
| ಖಂಬ | khamba | ಕಂಬ |
| ಗಲ್ಯಾಗ | galega | ಓಣಿಯಲ್ಲಿ |
| ಗಂಗಾಳ | gaŋgaḷ | ತಟ್ಟೆ |
| ಜಮಾನ | Jamana | ಪ್ರಪಂಚ |
| ತೇಜ | teJa | ಚಂಚಲ |

| | | |
|---|---|---|
| ಪಸಂದ | pasand | ಇಷ್ಟ |
| ಬಾಜಾರ | baJara | ಅಂಗಡಿ |
| ಭಂಗಾರ | bhaŋgara | ಚಿನ್ನ |
| ಭಂಡಾರ | bhaṇḍara | ನಾಮ |
| ಮಣ | maṇa | ೭೫ ಕೆ.ಜಿ.ಯ ಮೂಟೆ |
| ಮಾಸ್ತರ | mastara | ಶಿಕ್ಷಕ |
| ಮ್ಯಾಗ | mega | ಮೇಲೆ |
| ಮೈದಾನ | maidana | ಕಕ್ಕಸಕ್ಕೆ ಹೋಗುವರು ಆಟದ ಮೈದಾನ |
| ಯಾಗ | yaga | ಯಾವಾಗ? |

ಶಬ್ದಾರಂಭದಲ್ಲಿ ಬರುವ ಸ್ವರ (ಆ-)

| | | |
|---|---|---|
| ಆ | a: | ಆ |
| ಆಕಡ | akaḍa | ಆ ಕಡೆ |
| ಆಗ್ಯಾದ | agEd | ಆಗಿದೆ |
| ಆಚಾರ | acar | ಬರೀ ಮಾತ |
| ಆಟುಕ್ | aṭuk | ಅಷ್ಟಕ್ಕೆ |
| ಆಡ್ತುಂಬಿ | aḍtumbI | ಐದು ಕಿ.ಗ್ರಾಂ. ಒಂದು ತೂಕ |
| ಆಯ್ | ay grand | ಅಜ್ಜಿ |
| ಆರ್ | ar | ಆರು |
| ಆರನ್-ಣ | ara-n-ṇ | ೨ ೧/೨ ಕಿ.ಗ್ರಾಂ |
| ಆರಾಮ್ | aram | ಆರೋಗ್ಯ |
| ಆಲೂಭಾತ್ | alubhat | ಪಲವ |
| ಆಶ್ಯಾಲ್ಯಾಕ | aśśalEka | ಅದರ ಸಲುವಾಗಿ |
| ಆಂಕ್ಣಿ | aŋkṇI | ಧಾನ್ಯ ತೆಗೆದ ತೆನೆ |
| ಆಂಗ್ರೇಜಿ | aŋgregI | ಇಂಗ್ಲಿಷ್ |
| ಆತುಮ್ | atum | ಆತ್ಮ |
| ಆಡುಕ್ | aḍuk | ಆಡಲಿಕ್ಕೆ |

**ಪದಮಧ್ಯ : 'ಆ' ಕಾರ (-ಆ-)**

| | | |
|---|---|---|
| ಅನ್ತಾರ್ | an̄tar | ಅನ್ನುತ್ತಾರೆ |
| ಉಂಬಾರಿ | umba:rI | ಊಟ ಮಾಡೋಣ |
| ಒಂದ್ಬಾರ್ | on̄dba:r | ಒಮ್ಮೆ |
| ಆಚ್ಚ್ಯಾರ್ಯ | a:cErE | ಆಶ್ಚರ್ಯ |
| ಕಮಾನ್ | kama:n | ಶೃಂಗಾರದ ಬಾಗಿಲು |
| ಕಮಾಸು | kama:su | ಗಳಿಸು |
| ಕಾಣ್ಸಾಲ್ | ka:ṇsa:l | ಕಾಣುವುದಿಲ್ಲ |
| ಖಜಾಳ್ | khaJa:l | ಚಂಚಲೆ |
| ಖಾರಾ | khara: chilly | ಕಾರ |
| ಖುರಾಕ್ | khura:k | ಪೌಷ್ಟಿಕ ಆಹಾರ |
| ಗವಾಕಿ | gavakI | ಬೆಳಕಿಂಡಿ |
| ಘಾಣಾ | gha:ṇa: | ವೃತ್ತಾಕಾರ ತಿರುಗು |
| ಘಾತ್ | gha:t | ಅಪಾಯ |
| ಘಾಲಿ | gha:lI | ಚಕ್ರ |
| ಚೋಲಾಣಿ | cola:ṇI | ಒಳ ವಸ್ತ್ರ |
| ಝುಮಖಾನಿ | JhamakhanI | ಹಾಸಿಗೆ |
| ಟಕರಾಸ್ | ṭakara:s | ಸೆಣಸಾಡು |
| ಟಾಕಿ | ṭa:kI | ಕಲ್ಲು ಸರಿಪಡಿಸುವ ಸಾಧನ |
| ಠಾಕಾ | thaka | ದಿನಾಲು |
| ಠಾರ್ | thair | ಸಾಯಿಸು |
| ಢಿಗಾರಿ | ḍhiga:rI | ಹೆಚ್ಚು |
| ತಟಾಸು | taṭa:su | ನಿಲ್ಲಿಸು |
| ತಾಜಾ | ta:Ja: | ಬಿಸಿ/ಶುದ್ಧ |
| ತಾಂಬಾಡಿ | ta:mba:ḍI | ದೊಡ್ಡ ತಟ್ಟೆ |

| | | |
|---|---|---|
| ತರಮಾಳ್ಸ್ | tarma:ḷs | ತಳಮಳಗೊಳ್ಳು |
| ತುಪ್ರಾಣಿ | tupra:ṇI | ತಪ್ಪು ಹೋರಿಸು |
| ಧಪಾಟಿ | dhapa:ṭI | ಕಾರ ಚಟ್ನಿ ಕಲಿಸಿ ಮಾಡಿದ ರೊಟ್ಟಿ |
| ಧುರಾಳಿ | dhura:lI | ಧೂಳು |
| ಧಾಪುಸ | dha:pus | ರಭಸವಾಗಿ ಉಸಿರಾಡು |
| ಧಾರಾ | dhara: | ದಾರಾ |
| ಧಿಮಾಕ್ | dhima:k | ಸೊಕ್ಕು |
| ನಾತಿ | na:tI | ಹೊಂದಾಣಿಕೆ (ಗಂಡ ಹೆಂಡತಿ) |
| ನಾಟ್ | na:ṭ | ಕಟ್ಟಿಗೆಯ ಅಡ್ಡಕಂಬ |
| ನಾದುಣಿ | na:duṇI | ಗಂಡನ ಸಹೋದರಿ |
| ಪಾರ್ | pa:r | ಹುಡುಗ |
| ಪಾಳಿ | pa:ḷI | ಸರತಿ |
| ನಾಲಿ | na:lI | ಕಾಲುವೆ |
| ಪಾತಳಗಡ್ಡಿ | pa:talgaḍḍI | ನೀರಲ್ಲಿ ಬಿದ್ದ ವಸ್ತು ತೆಗೆಯಲು ಉಪಯೋಗಿಸುವ ಒಂದು ವಸ್ತು |
| ಪಾಷಣ | pa:saṇa | ಗಟ್ಟಿ ಕಲ್ಲು |
| ಪಾವ್ | pa:v | ೧/೪ |
| ಫಕಾತ್ | phaka:t | ಬರೀ |
| ಬರಾಬರ್ | bara:bar | ಸರಿಸಮಾನ |
| ಬಾಕಾ | ba:ka: | ಒಳ್ಳೆಯ |
| ಬಾಟುಕ್ | ba:uṭuk | ಹಸಿರು ಜೋಳದ ಕಣಿಕೆ |
| ಬಾನಾ | ba:na: | ಬೋನ |
| ಬಾನಿ | ba:nI | ಕಬ್ಬಿನ ಹಾಲು ತುಂಬಿದ ಪಾತ್ರೆ |
| ಬುನಾದಿಕ | buna:dI | ತಳ |
| ಭಾಸುಣಕಿ | bha:suṇkI | ವಧುವಿಗೆ ಲಗ್ನದ ಮೊದಲ ದಿನದ ಕಾರ್ಯಕ್ರಮ |

| | | |
|---|---|---|
| ಭಾಲ್ಯಾ | bha:lE | ಬಿದಿರ ಕೋಲು |
| ಭಾಡ್ಯಾ | bha:ḍE | ಸೂಳೆಯ ಆದಾಯ ತಿನ್ನುವವ |
| ಭ್ಯಾಳಿ | bhElI | ಬೇಳೆ |
| ಮಸಾಲಿ | masa:lI | ಮಸಾಲೆ |
| ಮಾಡಾ | ma:ḍa: | ಮೋಡ |
| ಮ್ಹಾಡಿ | mha:ḍI | ಮಹಡಿ |
| ಮ್ಹಾವರ್ | mha:var | ವರಮಾನ |
| ಮುಗರಾಣಿ | mugara:ṇI | ದನಗಳ ಮೂಗುದಾರ |
| ಮ್ಹತಾಟೆ | mhata:ṭI | ದನಗಳ ಮುಖಕೆ ಹಾಕುವ ಒಂದು ತರಹದ ಹಗ್ಗ |
| ಮಾರಿ | ma:rI | ಮುಖ |
| ಮುಕಾರ್ಯಾ | muka:rE | ಮುಗ್ಧ |
| ಯಾಕಾ | ya:ka: | ಯಾಕೆ? |
| ಯಾನು | ya:nu | ಏನು? |
| ಯಾಳಿ | ya:ḷI | ವೇಳೆ |
| ಯಾಜು | ya:Ju | ಬಡ್ಡಿ |
| ರಾಜಿ | ra:JI | ಒಪ್ಪಿಗೆ |
| ಹ್ರಾಟಿ | rhaṭI | ಅಭ್ಯಾಸ |
| ರುಮಾಲ್ | ruma:l | ಪೇಟ |
| ಲಾಟನಕಿ | laṭanakI | ಲಟ್ಟಣಿಕೆ |
| ಲಾಲುಚ್ | La:luch | ಚಟ |
| ವವಾಳ್ಸು | vava:lsu | ಆರತಿ ಎತ್ತು |
| ಶಾವ್‌ಗಿ | ś a:vgI | ಶಾವಿಗೆ |
| ಶಾವು | Śa:vu | ಒಳ್ಳೆಯ |
| ಸಾಟಿ | sa:ṭI | ಅರವತ್ತು |

| | | |
|---|---|---|
| ಸಾಮಾನ್ | sa:ma:n | ವಸ್ತು |
| ಸಾಲಿ | sa:lI | ಶಾಲೆ |
| ಸೊತೆಕಾಯಿ | sote kayI | ಸವತಿ |
| ಸುಪಾರಿ | Supa:rI | ಅಡಿಕೆ |
| ಸಾಸರವಾಡಿ | sa:sarva:ḍI | ಮಾವನ ಮನೆ |
| ಸಪಾಟ್ | sapa:ṭ | ವೇಗ |
| ಹರ್ದಾರಿ | harda:rI | ಒಂದು ಮೈಲು |
| ಹಾದರಗಿತ್ತಿ | ha:dargittI | ಸೂಳೆ |
| ಹಾಟ್ಯಾ | ha:ṭE | ಮುಠಾಳ್ |

ಶಬ್ದಾಂತ್ಯದಲ್ಲಿ ಬರುವ 'ಆ' ಧ್ವನಿಮಾ (-ಆ )

| | | |
|---|---|---|
| ಅನ್ಲತಿದಾ | onlatida: | ಅನ್ನುತ್ತಿದ್ದೇನೆ |
| ಇಕ್ಕಾ | ikka: | ತೆಗೆದುಕೊ |
| ಉಲ್ಟಾ | ulṭa: | ತಿರುಗಿ |
| ವಳಂಬಾ | valamba: | ಗೋಡೆಯ ಒಳ ಹೊರ ನೋಡುವ ಸಾಧನ |
| ಅಂವಾ | an̆va: | ಅವನು |
| ಕಂವಾ | kan̆va: | ಅವನು |
| ಕಾಕಾ | ka:ka: | ಚಿಗಪ್ಪ |
| ಕಿವಾ | kIva: | ಇವನು |
| ಕುಮ್ಮಾ | kumma: | ಭಾರ |
| ಖಟ್ಲಾ | khaṭla | ಕುಟುಂಬ |
| ಖಾಸಾ | kha:sa: | ಬೇಕಾದ |
| ಖೇಮಾ | khe:ma: | ಮೌಸದ ಸಣ್ಣ ಸಣ್ಣ ಚೂರು |
| ಗಪ್ಪಾ | gappa: | ಹರಟೆ |
| ಛಜ್ಜಾ | chaJJa: | ಬಾಗಿಲು ಕಿಟಕಿಯ ಮೇಲಿನ ಚಪ್ಪರ |

| | | |
|---|---|---|
| ಜರಾ | Jara: | ಸ್ವಲ್ಪ |
| ಜಿವಂಡಾ | Jivaṇḍa: | ನೊಗ |
| ಝುಗ್ಡಾ | Jhagda: | ಜಗಳ |
| ಝುಗಾ | Jhaga: | ಹೆಣ್ಣುಮಕ್ಕಳ ಅಂಗಿ |
| ಟೀಕಾ | ṭi:ka: | ಸೂಜಿ ಮದ್ದು |
| ಟೊಂಕಾ | ṭoŋka: | ಸೊಂಟ |
| ಡಬ್ಬಾ | ḍabba | ಪೆಟ್ಟಿಗೆ |
| ಡಾಕಾ | ḍa;ka: | ಕಳ್ಳತನ |
| ತಬಾ | taba: | ಬೇಸರ |
| ತಿಗಾ | tiga | ತಿಕ್ಕ |
| ತೋಟಾ | to:ṭa: | ತಂಬಾಕು ಪುಡಿ |
| ಥುಂಬಾ | thumba: | ತುಂಬಿದ |
| ದರವಾಜಾ | dara:Ja: | ಬಾಗಿಲು |
| ದವಾಖಾನಾ | dava:khana: | ಆಸ್ಪತ್ರೆ |
| ಧಾಬಾ | dha:ba: | ಅರವಟಿಕೆ |
| ಧಂದಾ | dañda: | ಕೆಲಸ |
| ಪೋಲಾ | po:la: | ಕಬ್ಬಿಣ |
| ಫಂಕಾ | paŋka: | ಗರಿ |
| ಪಂಡಾ | paṇḍa | ಭದ್ರವಾಗಿ |
| ಫಾಯ್ದಾ | phayda: | ಆದಾಯ |
| ಬಳಗಾ | balga: | ಎತ್ತು ನೊಗ ಹೆಗಲಿನಿಂದ ಉರುಳಿಸುವುದು |
| ಬಾಬಾ | ba:ba: | ತಂದೆ |
| ಭಂಗಾ | bhaŋga | ಬೈತಲು |
| ಮಜಾ | maJa: | ಸಂತೋಷಪಡು |

| | | |
|---|---|---|
| ಮಜಮಾ | maJama | ಸಂತೋಷದ ಕುಣಿತ |
| ಲಪಡಾ | lapaḍa: | ಸಮಸ್ಯೆ |
| ಸೇಂಗಾ | se:ŋga: | ನೆಲಗಡಲೆ |

ಶಬ್ದಾರಂಭದಲ್ಲಿ 'ಇ' ಸ್ವರ (ಇ-)

| | | |
|---|---|---|
| ಇಕಾ | ika: | ಇಗೊ |
| ಇಕಿ | ikI | ಈಕೆ |
| ಇಜ್ಜತ್ | ijjat | ಮರ್ಯಾದೆ |
| ಇಟೇಟ್ | iṭi:ṭ | ಸ್ವಲ್ಪ |
| ಇದ್ದಾ | idda: | ಇದ್ದೇನೆ |
| ಇದ್ದುನ್ | iddun | ಇದ್ದಿದ್ದ |
| ಇಮಾನ್ | ima:n | ಪ್ರಮಾಣ |
| ಇಲಾಚಿ | ila:Ji | ಏಲಕ್ಕಿ |
| ಇಶಾರಾ | iśa:ra: | ಸನ್ನೆ |
| ಇಂಗ್ಳಿ | ingḷI | ಚೇಳು |
| ಇಸ್ಸಿ | issi | ಮಕ್ಕಳ ಕಕ್ಕಸು |
| ಇರು | irü | ಇರುವೆ |
| ಇಸ್ಸು | issü | ಇಪ್ಪು |

ಶಬ್ದಮಧ್ಯದಲ್ಲಿ 'ಇ' ಕಾರ (-ಇ-)

| | | |
|---|---|---|
| ಔನಿಗಿ | aunigI | ಅವನಿಗೆ |
| ಖಿಂಡಿ | khiṇḍI | ಕಿಂಡಿ |
| ಗಿರಾಕಿ | gira:kI | ಗ್ರಾಹಕ |
| ಗಿಲಾಸ್ | gila:s | ಲೋಟ |
| ಗಿಂತಿ | gin̄tI | ಎಣಿಕೆ |
| ಚಿಕಣಿ | cikaṇI | ಜಿಗುಟು |
| ಚಿಲಕಿ | cilakI | ಮಾಳಿಗೆಗೆ ಉಪಯೋಗಿ ಸುವ ಕಟ್ಟಿಗೆಯ ತುಂಡು |
| ಝಿಪ್ರಿ | jhiprI | ಸ್ತ್ರೀಯರ ಕೂದಲು |

| | | |
|---|---|---|
| ಢಿಗ್ಗಿ | ḍhiggI | ಬಹಳ |
| ತಾಸಿಲ್ | ta:sil | ಕೆಟ್ಟದ್ದು |
| ನಿಂದೂರು | nindu:ru | ನಿಲ್ಲು |
| ನಿಂಬೆಕಾಯಿ | nimbeka:yI | ನಿಂಬೆಹಣ್ಣು |
| ನಿಗರಾಣಿ | nigara:ṇI | ದೃಷ್ಟಿ ಹಾಯಿಸು |
| ನಿಪ್ಳ್ಯಾ | nipḷE | ಕೈಲಾಗದ ಗಂಡ |
| ನಿಶಾನಿ | niśa:nI | ಗುರಿ |
| ಪಿಂಡ್ರಿ | piṇḍrI | ಮೊಳಕಾಲಿನ ಹಿಂಭಾಗ |
| ಬಾರಿಕ್ | ba:rik | ಸಣ್ಣದು |
| ಮನ್ಸಿನಾಗ | mansina:ga | ಮನದಲ್ಲಿ |
| ಮಾಯಿನ್ ಕಾಯಿ | ma:yinka:yI | ಮಾವಿನಕಾಯಿ |
| ಮಿಳಿ | miḷI | ದನದ ಚರ್ಮದ ಹಗ್ಗ |
| ಮಿರ್ಚಿ | mircI | ಮೆಣಸಿನ ಭಜಿ |
| ಶರೀಕ್ | śari:k | ನೊಂದಣಿ |
| ಹಿಕ್ಮತ್ | hikmat | ಜಾಣತನ |
| ಹಿಂಬ್ಡಿ | himbaḍI | ಪಾದದ ಹಿಂಬದಿ |

ಶಬ್ದಾಂತ್ಯದಲ್ಲಿ 'ಇ' ಕಾರ (-ಇ)

| | | |
|---|---|---|
| ಅಪ್ಪಿಶಿ | appesI | ಅಪಶಕುನ |
| ಉಕ್ರಿ | ukrI | ನೆಲಗಡಲೆ ಅಗೆಯುವ ಕೈಕಪ್ಪರ |
| ಉದ್ರಿ | udrI | ಎರವಲು |
| ಉರಿ | urI | ಜ್ವರ |
| ಉಂಬಾರಿ | umba:rI | ಊಟ ಮಾಡೋಣ |
| ಐಸಿರಿ | aisirI | ಸಿರಿವಂತಿಕೆ |
| ಔನಿಗಿ | ounigI | ಅವನಿಗೆ |
| ಅಂಡಿ | aṇḍI | ಮೊಟ್ಟೆ |

| | | |
|---|---|---|
| ಕಡ್ಗಳ್ಕಿ | kaḍgalkI | ಜೋಳದ ಹಸಿರು ಕಣಿಕೆ |
| ಕಡಿ | kaḍI | ಕೊನೆ |
| ಕತ್ತಿ | kattI | ಉದ್ದನೆಯ ಕುಡುಗೋಲು |
| ಕಳಸಿ | kaḷasI | ಸಣ್ಣ ಕೊಡ |
| ಕ್ವಾಟಿ | kva:ṭI | ಗೋಟೆ |
| ಕಿರ್ಗುಣಿ | kirguṇI | ಹೆಣ್ಣು ಕೂಸುಗಳಿಗೆ ಉಡಿಸುವ ಸಣ್ಣ ಸೀರೆ |
| ಕಿಸ್ತಿ | kistI | ಬಾಗಿಲು ಪಟ್ಟೆನ ತುಕ್ಕಡಿ |
| ಕುತ್ಗಿ | kutgI | ಕುತ್ತಿಗೆ |
| ಕೇರಿ | ke:rI | ಬಡಾವಣೆ |
| ಕಂಡಾಬಟ್ಟೆ | kaṇḍa:baṭṭI | ಬಹಳ |
| ಖಾಲಿ | kha:lI | ಬರಿದು |
| ಖಿಡ್ಕಿ | khiḍkI | ಕಿಟಕಿ |
| ಖಿಚಡಿ | khicaḍI | ಜೋಳದ ಬೋನ |
| ಖುಸಿ | khusI | ಅಗಲಿಸು |
| ಖಂಡ್ಕಿ | khaṇḍkI | ಕಂಡಿಕೆ |
| ಗವಾಕಿ | gava:kI | ಗವಾಕ್ಷಿ |
| ಗಾದಿ | ga:dI | ಮೆತ್ತನೆಯ ಹಾಸಿಗೆ |
| ಗುದಿ | gunI | ಹುಲ್ಲುದಾರದ ಉಂಡೆ |
| ಗೋಲಿ | go:lI | ಮಾತ್ರೆ |
| ಘಡಿ | ghaḍI | ಗಡಿಯಾರ |
| ಘುಂಗಡಿ | ghuŋgaḍI | ಕಂಬಳಿ |
| ಚಕಮುಕಿ | cakamukI | ಬೆಂಕಿ ಕಿಡಿ ಸಿಡಿಸುವ ತುಕ್ಕಡಿ |
| ಚ್ಯಾರಿ | cErI | ನಾಲ್ಕು ಬೆರಳುಗಳಲ್ಲಿ ಹಿಡಿಯುವಷ್ಟು |
| ಚಿಪಡಿ | cipḍI | ಕಣ್ಣಗೆ ನೀರು ಸುರಿವಾಕೆ |

| | | |
|---|---|---|
| ಚೆಕ್ಕಿ | cekkI | ಕಟಿಗೆಗೆ ತುಂಡು |
| ಚೆಂಡ್ಕಿ | cenḍkI | ಬೋಳು ತಲೆಯಲ್ಲಿ ಡುವ ಸಣ್ಣ ಜುಟ್ಟು |
| ಚಿಂದಿ | cindI | ಬಟ್ಟೆಯ ತುಕ್ಕಡಿ |
| ಛುಟ್ಟಿ | chuṭṭI | ರಜೆ |
| ಜಜಗಿ | jajagI | ಬಾಣಂತಾನ |
| ಜಂತಗಿ | JantagI | ದನಗಳ ಕೊರಳ ಪಟ್ಟಿ |
| ಝರ್ಪಿ | jharpI | ಝುರಿ |
| ಟಾಳಿ | ta:ḷI | ಚಪ್ಪಾಳಿ |
| ಟೋಳಿ | to:ḷI | ಗುಂಪು |
| ಟಾಂಗ್ಳಿ | ta:ŋgḷI | ಕೆಟ್ಟ ಸ್ತ್ರೀ |
| ಥೈಲಿ | thailI | ಕೈಚೀಲ |
| ಠೇಚಿ | the:cI | ಕಾಲಿಗೆ ಕಲ್ಲುಬಡಿ |
| ತಟ್ಟಿ | taṭṭI | ಬಾಗಿಲು ಪಟ್ಟು |
| ಢೇಕರ್ಕಿ | dhe:karkI | ತೇಗು |
| ತಲಾರಿ | tala:rI | ನುರಿತ ಎತ್ತುಗಳ ಮುಂದೆ ಅಭ್ಯಾಸಕ್ಕಾಗಿ ಕಟ್ಟು ಹೋರಿಗಳು |
| ದಾಡಿ | da:ḍI | ಗಡ್ಡ |
| ದಾಸಿ | da:sI | ಮಾಳಿಗೆಯ ಕಟ್ಟಿಗೆಯ ಮುಖ್ಯ ತುಂಡು |
| ಧಡಿ | dhaḍi | ಹುಲ್ಲುಕಡ್ಡಿಯಿಂದ ಕಟ್ಟಿದ ಗೋಡೆ |
| ಧುಪಾಟಿ | dhypa:ṭI | ಹೊದ್ದಿಕೊಳ್ಳುವುದು |
| ಪರಗಾಣಿ | paraga:nI | ಎಲ್ಲ ಭಾಗದ ಅಡವಿ |
| ನರ್ಗಿ | nargi | ತೆಳ್ಳಗೆ |

| | | |
|---|---|---|
| ನ್ಹ್ಯಾರಿ | nherI | ಬೆಳಗ್ಗಿನ ಊಟ |
| ನೆಗ್ಯಾಣಿ | negEṇI | ಮೈದುನನ ಹೆಂಡತಿ |
| ಪೆಟಾರಿ | peṭa:rI | ತೆನೆ ಬಿಡುವ ಹಂತದ ಜೋಳದ ಬೆಳೆ |
| ಫಕ್ಕಿ | phakkI | ಬಾಯಿಗೆ ಹಾಕು |
| ಫಡಕಿ | phaḍkI | ಲಂಗ |
| ಫಾರ್ಗಿ | phairgI asmal | ಬಾವಿಯ ನೀರೆತ್ತ ಬಕೇಟು |
| ಫಾಡಿ | pha:ḍI regular | ಒಂದು ಅಳತೆಯಕಲ್ಲು |
| ಬಗಿ | bagI | ಗೊತ್ತು ಗುರಿ |
| ಬಾಸಿ | ba:sI | ತಂಗಳು |
| ಬೇಮಾರಿ | be:ma:rI | ಅನಾರೋಗ್ಯ |
| ಬಂಗಾಲಿ | banga:lI | ನಟನೆ ಮಾಡುವಾಕೆ |
| ಮಗಿ | magI | ಮಡಿಕೆಯ ಮೇಲೆ ಮುಚ್ಚು ಸಣ್ಣ ಗಡಿಗೆ |
| ಮಲಿ | malI | ಮೂಲೆ |
| ಮ್ಹೆವ್ನಿ | mhevnI | ಹೆಂಡತಿಯ ತಂಗಿ |
| ಮೋಕ್ಳಿ | mo:dlI | ಉದುರು ಬೇಳೆ |
| ಮ್ಹೋರಿ | mho:rI | ಬಚ್ಚಲು ನೀರು ಹೋಗುವ ದಾರಿ |
| ರಂಜುಣಗಿ | ran̑JuṇgI | ಮಣ್ಣಿನ ದೊಡ್ಡ ಮಡಿಕೆ |
| ರುಳಿ | ruḷI cuff | ಒಂದು ಕಾಲು ಆಭರಣ |
| ರ್‍ಯಾಗ್ಡಿ | rEgḍI | ಕರಿಭೂಮಿ |
| ಲದ್ದಿ | laddI | ಕತ್ತೆಯ, ಕುದುರೆ, ಒಂಟೆಯ ಸೆಗಣಿ |
| ಲಗ್ಳಿ | lagḷI | ನೀರು ಹೊದೆಯಲು ಇದ್ದ ಎತ್ತು |

| | | |
|---|---|---|
| ಶಟಿ | śat I | ಮುನಿಯು |
| ಸೋಬ್ತಿ | so:btI | ಜೊತೆಗೂಡು |
| ಸಂಕ್ಳಿ | saŋkḷI | ಕಬ್ಬಿಣದ ಸಂಕೋಲೆ |
| ಸೀತ್ನಿ | si:tnI | ಬೆಯಿಸಿದ ಹಸಿರು ಜೋಳ |
| ಸುರಿ | surI to | ತಿನ್ನು/ಕುಡಿ |
| ಹರ್ದ್ಹಾರಿ | harda:rI | ಒಂದು ಮೈಲು |
| ಹಾದರಗಿತ್ತಿ | ha:dargittI | ನಡತೆಗೆಟ್ಟ ಸ್ತ್ರೀ |
| ಹೊತ್ರಳಿ | hotraḷI | ಬೆಳಗ್ಗೆ |
| ಹೊತಾಳಿ | hotaḷI | ಎಮ್ಮೆಯ ಕೂರುವಿಕೆ |
| ಹರಿ | harI | ಹರಿವು |

ಶಬ್ದಾರಂಭದಲ್ಲಿ 'ಈ' ಕಾರ (ಈ-)

| | | |
|---|---|---|
| ಈತ | i:ta | ಇವನು |
| ಈಟು | i:ṭU | ಇಷ್ಟು |
| ಈಸು | i:sU | ಇಷ್ಟು |
| ಈಳ್ಗಿ | i:lgI | ಈಳಿಗೆ |

ಪದಮಧ್ಯ 'ಈ' ಕಾರ (-ಈ-)

| | | |
|---|---|---|
| ಗರೀಬ್ | gari:b | ಬಡವ |
| ಘೀಖಿಚಡಿ | ghi:khicḍI | ಬೆರೆತದ್ದು |
| ಚೀಕು | ci:kU | ದಬ್ಬು |
| ಛೀನು | chi:nU | ಸೀನು |
| ಠೀಕ್ | ṭhi:k | ಒಳ್ಳೆಯದು |
| ತೀನ್ ಪಾರ್ | ti:npa:r | ಸಂಜೆ ಮೂರು ಗಂಟೆ |
| ದೀಡ್ | di:ḍ | ಒಂದುವರೆ |
| ಧೀರ್ | dhi:r | ಮೆಲ್ಲಗೆ |
| ಬಗೀಚ್ಯಾ | bagicE | ತೋಟ |
| ಜಮೀನ್ | jami:n | ಭೂಮಿ |

ಶಬ್ದಾರಂಭದಲ್ಲಿ 'ಉ' ಕಾರ (ಉ-)

| | | |
|---|---|---|
| ಉಟ್ವಳ್ | uṭval | ನಡತೆಗೆಟ್ಟು ಸ್ತ್ರೀ |
| ಉಣು | uṇU | ಉಣ್ಣು |
| ಉನಾಕ | una:ka | ಉತ್ತವಲ್ಲದ್ದು |
| ಉಪ್ರಟೆ | upraṭe | ತಿರಿಗಿ |
| ಉಮರ್ | umar | ವಯಸ್ಸು |
| ಉರಿ | urI | ಬೆಂಕಿ |
| ಉರ್ಸ್ | urs | ಮುಸಲ್ಮಾನ ಸಂತರ ಹಬ್ಬ |
| ಉಸುಬು | usubv | ಉಸುಕು |
| ಉಟುಕೊ | uṭuko | ಧರಿಸು |
| ಉಗಾಡ | uga:ḍa | ಮೋಡ ಬಯಲಾಗು |
| ಉಜಾಡ | uJa:ḍa | ಖಾಲಿಜೇಬು |

ಶಬ್ದ ಮಧ್ಯದಲ್ಲಿ 'ಉ' ಕಾರ (-ಉ-)

| | | |
|---|---|---|
| ಆಟುಕ್ | a:ṭuk | ಎಂಟಕ್ಕೆ |
| ಓಟುಕ್ | o:ṭuk | ಅಷ್ಟಕ್ಕೆ |
| ಓಡುಕ್ | o:ḍuk | ಓಡಲಿಕ್ಕೆ |
| ಕಮುಣಬುಟ್ಟಿ | kamuṇbuṭṭI | ಕಬ್ಬಿಣದ ಬುಟ್ಟಿ |
| ಕುರುಕುಲಿ | kurukulI | ಸಣ್ಣ ಕಟ್ಟಿಗೆ ಬುಟ್ಟಿ |
| ಚುಚುಂದ್ರಿ | cucundrI | ಸೊಂಡಿಲಿ |
| ಚುಚುಲಿ | cucullI | ಚಾಡಿ |
| ಜತ್ತುನ್ | jattun | ಎಚ್ಚರಿಕೆ |
| ಝುರಕಿ | jhurakI | ಬಿಡಿಸಲು ಸರಳ ಗಂಟು |
| ಡುಲಾಸ್ | dula:s | ನರ್ತಿಸು |
| ನೆಂಬುಸಿ | nembusI | ನಂಬಿಸು |
| ಫುರ್ಸತ್ | phursat | ಬಿಡುವು |

| | | |
|---|---|---|
| ಬೆಲುಗು | belugU | ದೊಡ್ಡಗೋಪುರ ಹುಲ್ಲಿನ ಚಪ್ಪರ |
| ಭುರ್ಕಟ | bhurkaṭ | ಬೂದು ಬಣ್ಣ |
| ಮುಣುಗು | muṇugU | ಮುಳುಗು |
| ಮುರೆಛಂಜಿ | murechañj | ಸಂಜೆ ಹೊತ್ತು |
| ರುಪೈ | rupaI | ರೂಪಾಯಿ |
| ರುಕ್ವತ್ | rukvat | ಮಗಳಿಗೆ ಕೊಡುವ ಉಡುಗೊರೆ |
| ಲುಂಗಿ | lungI | ಪಂಚೆ |
| ಸುದ್ | sud | ಶುದ್ಧ |
| ಸುಟ್ಟಿ | suṭṭI | ಬಿಡುವು |
| ಸುಂಬುಳ್ | sumbaḷ | ಸಿಂಬಳ |
| ಹುವ್ವಾ | huvva: | ಹೂವು |
| ಹಚ್ಚುಗ್ | hachug | ಹಸಿರು |

ಶಬ್ದಾಂತ್ಯದಲ್ಲಿ 'ಉ' ಕಾರ (-ಉ)

| | | |
|---|---|---|
| ಎಡ್ಡು | eḍḍU | ಎರಡು |
| ಒನೊಂದು | onondU | ಒಂದೊಂದು |
| ಏರು | e:rU | ಹತ್ತು |
| ಕದು | kadU | ಅದು |
| ಕಲ್ಸು | kalsU | ಮಿಶ್ರಮಾಡು |
| ಕೊಯ್ಸು | koysU | ಕೊಯಿಸು/ಸಾಯಿಸು |
| ಗೂಡು | gu:ḍU | ಜೋಳದ ಬಣಿವೆ<br>ಮುರಿದ ತೆನೆ ಕೊಯಿಸು |
| ಘುಂಗರು | ghuŋgarU | ಗೆಜ್ಜೆ |
| ಚ್ಯಾಕು | cEkU | ಕತ್ತಿ |
| ಚೆಂಬು | cxmbU | ಲೋಟ |
| ಜಮ್ಮೂಸು | jmmusU | ಒಟ್ಟು ಸರಿಯಾಗಿ ಗೂಡಿಸು |

| | | |
|---|---|---|
| ಝಾಪಡ್ಸು | jha:padsU | ಹಿಡಿದುಕೊ |
| ಟಬ್ಬು | tabbU | ಕಕ್ಕಸಿನ ತಂಬಿಗೆ |
| ಟೆಂಗು | tengU | ತೆಂಗು |
| ತರುಬು | tarubU | ನಿಲ್ಲಿಸು |
| ತೊನ್ಸು | tonsU | ಎತ್ತುಗಳ ಮೇಲಿರುವ ನೊಣ |
| ತುರ್ಕು | turkU | ಹೊಕ್ಕಿಸು |
| ಧೊಡ್ಡು | dhoddU | ದೊಡ್ಡದು |
| ಪರಂತು | parantU | ಆದರೆ |
| ಮೇವು | me:vU | ದನಕರುಗಳ ಹುಲ್ಲು |
| ವತ್ತು | vattU | ದಬ್ಬು |
| ಸಂಪು | sampU | ರಂಧ್ರ |
| ಹಳ್ಳು | hallU | ಮೆಲ್ಲಗೆ |
| ಹಿರುಸು | hirusU | ಛಲ |
| ಹಲಕಾಸು | halaka:sU | ಅಲಗಾಡು |

ಶಬ್ದಾರಂಭದಲ್ಲಿ 'ಊ' ಕಾರ (ಊ-)

| | | |
|---|---|---|
| ಊನ್ | u:n | ವಿಕಲತೆ |
| ಊಟಬೈಟ್ | u:tbait | ಎದ್ದೆದ್ದು ಕುಳಿತುಕೊ |
| ಊಚ | u:ca | ಉದ್ದ |
| ಊಬು | u:bU | ಊದು |
| ಊರು | u:rU | ನೆಡು |

ಪದಮಧ್ಯ 'ಊ' ಕಾರ (-ಊ-)

| | | |
|---|---|---|
| ಅಂಗೂರು | angu:rU | ದ್ರಾಕ್ಷಿ |
| ಖರಬೂಜ್ | kharbu:j | ಕಲ್ಲಂಗಡಿ |
| ಖೂನಾ | khu:na: | ಗುರುತು |
| ಖೂರ್ | khu:r | ಚೊಕ್ಕಪಾದ |

| | | |
|---|---|---|
| ಘೂಟ | ghu:ṭa | ಗೂಟ |
| ಟೂಕ್ | ṭu:k | ಗುಟ್ಟು |
| ತೂತು | tu:tU | ರಂಧ್ರ |
| ಧೂಪ್ ಛೌಂ | dhu:pchaU | ನೆರಳು ಬೆಳಕು |
| ಪೂರಾ | pu:ra: | ಸಂಪೂರ್ಣ |
| ಭಾದೂರ್ | bha:du:r | ಧೀರ |
| ಭರಪೂರ್ | bharpu:r | ಬಹಳ |
| ಮೂತಿ | mu:tI | ಮುಖ |
| ನೂಕು | nu:kU | ದಬ್ಬು |
| ಸೂಳಿ | su:ḷI | ಸೂಳೆ |
| ಹೂಡ್ಯಾ | hu:dE | ಎತ್ತರದ ಜಾಗ |

ಪದಾಂತ್ಯದಲ್ಲಿ 'ಊ' ಧ್ವನಿಮಾ ಬಳಸಲಾಗುವುದಿಲ್ಲ. ಶಬ್ದಾರಂಭ ಹಾಗೂ ಪದಮಧ್ಯ ಬಂದರೂ ತೀರ ವಿರಳವಾಗಿ ಬಳಸಲ್ಪಡುತ್ತದೆ.

'ಊ' ಧ್ವನಿಮಾ ಶಬ್ದಾಂತ್ಯದಲ್ಲಿ ಬರುವುದಿಲ್ಲ ಬಂದರೂ ಒಂದೆರಡು ಮಾತ್ರ ಬರುತ್ತವೆ ಮತ್ತು ಎಲ್ಲೊ ಒಂದು ಕಡೆ.

| | | |
|---|---|---|
| ನಾನೂ | na:nu: | ನಾನೂ ಕೂಡ |
| ಅವನೂ | avanU | ಅವನು ಕೂಡ |
| ಆಕಿನೂ | a:kinu: | ಆಕೆಯೂ |

**ಶಬ್ದಾರಂಭದಲ್ಲಿ 'ಎ' ಕಾರ (ಎ-)**

| | | |
|---|---|---|
| ಎಲ್ರಾ | elra: | ಎಲ್ಲಾದರೂ |
| ಎಡ್ಡು | eḍḍU | ಎರಡು |
| ಎಸ್ಸೊ | esso | ಎಷ್ಟೊ |
| ಎಟ್ಟೊ | eṭṭo | ಎಷ್ಟೊ |
| ಎಣ್ಸು | eṇsU | ಎಣಿಕೆ ಮಾಡು |
| ಎತ್ಕೊ | etko | ಎತ್ತಿಕೊ |

| | | |
|---|---|---|
| ಎಬುಸು | ebusU | ಎಬ್ಬಿಸು |
| ಎಲು | elU | ಎಲುಬು |

ಪದಮಧ್ಯದಲ್ಲಿ 'ಎ' ಕಾರ (-ಎ-)

| | | |
|---|---|---|
| ಕೆಬ್ಬಿಣ | kebbiṇ | ಕಬ್ಬಿಣ |
| ಕೆಟ್ಕೊ | keṭko | ಕೆಟ್ಟವನಾಗು |
| ಖೆಂಪಾನ | khempa:n | ಕೆಂಪಗೆ |
| ಚೆಕ್ | cek | ಬರಿದಾಗು |
| ಚೆಮಕಿ | cemakI | ಮಿಂಚು |
| ಚೆಂಡಿ | ceṇḍI | ತುದಿ |
| ಚೆರಗಿ | ceragI | ದೊಡ್ಡ ತಂಬಿಗೆ |
| ಚೆಪ್ಲಿ | ceplik | ಚಪ್ಪಲಿ |
| ಚೆವ್ | cev | ಕುತೂಹಲ |
| ಟೆಕ್ಳು | ṭeklU | ಬೋಳುತಲೆ |
| ತೆಳಗ | teḷga | ಕೆಳಗೆ |
| ತೆಪ್ಪಿ | teppI | ನೀರಿನ ಮೇಲೆ ತೇಲಾಡಿ ಬಿಟ್ಟ ದೀಪ |
| ನೆಂಬುಣಕಿ | nembuṇkI | ನಂಬಿಕೆ |
| ನೆತ್ತಿ | nettI | ತಲೆ |
| ಪೆಟಾಸ್ | peṭa:s | ಹೊತ್ತಿಸು |
| ನೆಂಪು | nempU | ನೆನಪು |
| ನೆಲು | nelU | ನೆಲುವು |
| ನೆಗ್ಯಾಣಿ | negEnI | |
| ಪೆದಿ | pedI | ಹೆಣ್ಣು ಗಂಡಿಗೆ ಆಕರ್ಷಿಸುವುದು |
| ಬೆಲುಗು | belugU | ದೊಡ್ಡ ಚಪ್ಪರ ಅಡ್ಡ ಬದಿ |
| ಭೆಂಡೋಳಿ | bhendo:ḷI | ಕಿವಿಯ ಆಭರಣ |

| | | |
|---|---|---|
| ಮೆಲ್ಗೆ | melgI | ಮೈಲಿಗೆ |
| ಸೆಕ್ತಿ | sektI | ಶಕ್ತಿ |
| ಹೆಡುಕು | heḍukU | ಬೆನ್ನಿನ ಮೇಲ್ಭಾಗ |

**ಪದಾಂತ್ಯದಲ್ಲಿ 'ಎ' ಕಾರ (-ಎ)**

| | | |
|---|---|---|
| ಥೋಡೆ | tho:ḍE | ಸ್ವಲ್ಪ |
| ಬಾಪರೆ | ba:prE | ಅಬ್ಬಾ! |
| ಬರೆ | barE | ಕೇವಲ |

ಈ ಕೆಲವು ಶಬ್ದಗಳು ಬಿಟ್ಟರೆ ಈ ಭಾಗದಲ್ಲಿ ಪದಾಂತ್ಯ 'ಎ' ಧ್ವನಿಮಾ ಉಚ್ಚಾರಾಗುವುದಿಲ್ಲ. ಮೇಲೆ ಉದಾಹರಿಸಿದ್ದು ಇವು ಕನ್ನಡದೇ ಅಲ್ಲ ಕೂಡ.

**ಶಬ್ದಾರಂಭದಲ್ಲಿ 'ಏ' ಕಾರ (ಏ-)**

| | | |
|---|---|---|
| ಏಸೊ | e:sso | ಎಷ್ಟೊ |
| ಏಳೂಕ್ | e:ḷuk | ಏಳಲಿಕ್ಕೆ |
| ಏರು | e:rU | ಹತ್ತು |
| ಏಸು | e:sU | ಎಷ್ಟು? |
| ಏಕ್ ದಮ್ | e:kdam | ಒಮ್ಮೆಲೆ |
| ಏಚ್-ಪೇಚ್ | e:-pe:c | ರಟ್ಟಾಗದ |

**ಪದಮಧ್ಯದಲ್ಲಿ 'ಏ' ಕಾರ (-ಏ-)**

| | | |
|---|---|---|
| ಫೇರಿ | pherI | ಸುತ್ತು |
| ಖೇಪ್ | khe:p | ಸರತಿ |
| ಠೇಲ್ | the:l | ತುಂಬ |
| ಥೇಟ್ | dueiṭ | ಅಂತೆ |
| ಧೇಡಿ | dhe:ḍI | ಕೆಲಸಕ್ಕೆ ಬಾರದ ಸ್ತ್ರೀ |
| ಭೇತ್ರಿನ್ | bhe:trin | ಒಳ್ಳೆಯದು |
| ಸೇಪ್ | se:p | ಸೇಬು |

೭೬೬. ಭಾಂಜಗಡಿ : ಥೊಡ್ಸಳ ದುನೇದು ಭಾಜಗಡಿ ಮನಸ್ಕ ಹನಾ

೭೬೭. ಭೆಂಡಲಿ : ಕಿಂವ್ಯಾಗ ಭಂಗಾರ ಭೆಂಡಲಿ ಛಂದ ಕಾಣಸ್ತಾವ್

೭೬೮. ಭೆಂಡೋಳಿ : ಕಿವಿಗಿ ಭೆಂಡೊಳಿ ಇದ್ದರೆ ಒಪ್ಪುಣ್ಕಿ

೭೬೯. ಭೋಸುಡಿ : ಏಯ್ ಭೋಸುಡಿ ಸುಮ್ ಖೂಡ್ತೇನಿಲ್ಲ; ನಂಗೇನ ನಿಶಾ ಆಗ್ಯಾದಾ?

೭೭೦. ಭೌಜಿ : 'ಭೌಜಿ' ನಿಮ್ಮ ತಮ್ಮಗಕರಿರಿ ಝುಗಡಕ್ ಖೂರ್ ಖರ್ ಹರಾ

೭೭೧. ಭಂಗಾರ : ಕೈಯ್ಯಾಗ ಭಂಗಾರ ಪಾಟ್ಲಿ ಒಳಿಗಿ ಒಪ್ಪುಣ್ಕಿ ತಂತಾವ್

೭೭೨. ಮಕ್ಕುಳು : ಮಕ್ಕುಳಿದ್ದರ ಮನ್ಯಾಗ ಛಂದ ಕಾಣುಸ್ತುದ್

೭೭೩. ಮಗಿ : ಗಡಿನ್ಯಾಗ 'ಮಗಿ' ಮುಚ್ಚು ಮಗಾ ಬ್ಯಾಳಿ ಝುಲ್ಪಿಕುದಿತದ

೭೭೪. ಮಜಬೂತ್ : ಮನಸ್ಯಾ ಹಟ್ಯಾ ಕಟ್ಯಾ ಮಜಬೂತ್ ಹನಾ

೭೭೫. ಮಜಾ : ಮಟನ್ ಸರಿ ಸೆರಿ ಇದ್ದರೆ 'ಮಜಾ'ರಿ

೭೭೬. ಮಟ್ಕಿ : 'ಮಟ್ಕಿ'ನ ಕಾಯಗ ಬ್ಯಾಳಿ ಹಾಕಿ ಮಾಡ್ಬೇಕರೆ

೭೭೭. ಮಣಾ : ಮಣಾ ಉಳಗಡ್ಡಿ ತಂದಾರೆವ್ವ ಆಯ್ತಾ ಆಗಾಲು

೭೭೮. ಮತಲಪ್ : ಎಲ್ಲಾ ಮತ್ಲಪಿನ್ ಮಂದಿ ಅವಾರಿ

೭೭೯. ಮನ್ನಾಗ : ಹೊರುಗ ಇಲ್ಕುರ್ ಇಲ್ಲ ಮನ್ನಾಗ ದೇವ್ರಿಗಿ ನೆನಸಬೇಕು

೭೮೦. ಮನ್ಸಿನಾಗ : ಆಕಿ ನನ್ಮನ್ಸಿನಾಗೆ ಹಳಾ

೭೮೧. ಮರಬ್ : ಅಂಗ್ಯಾಗ್ 'ಮರಬ್' ಹಾಕ್ತುರಾ ಕೆಸರಾಗಾಲ

೭೮೨. ಮಮ್ಮಾ : ನಿಮ್ಮಗಳಿಗಿ ಬಿಟ್ಟು ನಾ ಬ್ಯಾರ್ಯಾಕಿಗಿ ಹ್ಯಾಂಗ್ ಮಾಡ್ಕೊತಾ 'ಮಮ್ಮಾ'

೭೮೩. ಮರ್ಚುಲ್ : ಚೊಚ್ಚುಲ್ 'ಮರ್ಚುಲ್' ಬಾಣತನ ನಾನೇ ಮಾಡಿದಾ

೭೮೪. ಮಲಿ : ಪೋರಿಗಿ ಹಿನಾ ಮಲಿನೆ ಬಂದಿಲ ಏಟ್ ವಡಾಳದ

೭೮೫. ಮಸಾಲಿ : ನಿಮ್ಮಪ್ಪ ಬರ್ಲಿ ನೋಡ ನಿನ್ 'ಮಸಾಲಿ' ಮಾಡಸ್ತಾ

೭೮೬. ಮಸ್ಕಾ : ಒಂದ್ ಬಾರ್ ಕರ್ದಿ ಸಾಕು ಯಾಕ್ 'ಮಸ್ಕಾ' ಹೊಡಿಬೇಕು

೭೮೭. ಮಸೂರ್ : ಊಟಕ ಮಸೂರ್ ಇರಬೇಕ್ರಿ; ಬ್ಯಾಸ್ಕ್ಯಾಗರಾ ಮಸೂರ್ ಛಂದ

೭೮೮. ಮಳಕಾಲ್ : 'ಮಳಕಾಲಾಗ' ಬ್ಯಾನಿಯದ ನೊಯ್ ಲತದ್

೭೮೯. ಮಾಡಾ : 'ಮಾಡಾ' ಬಂದದ ಮಳಿ ಬರಾಂಗದ

೭೯೦. ಮಾಯಿನ್ನಾಯಿ : ಪಾಡಬಿದ್ದಿನ ಮಾಯಿನ್ನಾಯಿ ತಿನಬೇಕ್ರಿ

೨೯೧. ಮಾಲ್ಡಾಕ್ : ಮಾಲ್ಡಾಕ್ ಯಾನ್ ಮಾಡ್ತಿದಾ ಖರೆ ಯಾನ್ ಮಾಡ್ಬೇಕು
೨೯೨. ಮಾಯಾ : ಆ ಹೆಂಗ್ಸಿನ್ ಮ್ಯಾಲೇ ತೊಲ್ ಮಾಯ ಅದಾಲ
೨೯೩. ಮ್ಹಾಡಿ : ಹಿಂದುಕೆಲ್ಲ ಮ್ಹಾಡಿ ಮನಿ ಚೀಲವಂತರದಿರುತ್ತಿದ್ದು
೨೯೪. ಮ್ಹಾವರ್ : ಈ ಉಗಾದಿಗಿ ಏಟು ಮ್ಹಾವರ್ ಮಾತಾಡ್ದಿ?
೨೯೫. ಮಾಸ್ತರ : ಮಾಸ್ತರ ಮಂದಿ ಪಾಪ್ ಊರ್ ಬಿಟ್ಟು ಬರ್ತಾರ ಗರಿಬ ಮಂದಿ
೨೯೬. ಮ್ಯಾಗ : ಆ ತುಟ್ಯಾ ಮ್ಯಾಗ ಏರಿ ಏರಿ ಬರ್ತಾನ್
೨೯೭. ಮ್ಯಾಲ : ಮಂಚ್ಗಿ ಮ್ಯಾನ ನಿಂತರ ಗುಬ್ಬಿಗುಳ್ ಕಾಣಸ್ತಾವ್
೨೯೮. ಮಿರ್ಚಿ : ಎಡ್ ಫಿಲೆಟ್ ಮಿರ್ಚಿ, ಒಂದು ಖಾರಾ ತಾ
೨೯೯. ಮೀಣ್ : ಮೀಣ ಹಿಡ್ಯಾವ ತೋಲ್ ಚಪ್ಪುಳ್ ಇರಬೇಕು
೩೦೦. ಮಿಸಿ : ಮಿಸಿನೇ ಬಂದಿಲ್ಲ ಪೋರಿಗುಳಿಗೆ ನೋಡ್ತಾನ
೩೦೧. ಮಿಳಿ : ಆರಿಗಿ 'ವಿಳಿ'ನೆ ತಟ್ಟತದ ಹಗ್ಗಾ ಕಡ್ನೇ ಹೊಯ್ತಾವ
೩೦೨. ಮುಕ್ಸಿ : ಬೆಳೆ ತಿಂಬಾಲಗತಿ ಎತಗುಳಿಗಿ ಮಕ್ಸಿ ಆಕಬೇಕು
೩೦೩. ಮುಗರಾಣಿ : 'ಮುಗರಾಣಿ' ಹೆಂತ ಎತ್ ಬೀ ಅಳ್ ಆಯ್ತದ
೩೦೪. ಮುಗುಲ್ : ಮುಗುಲ್ ಥುಂಬಾ ಚುಕ್ಕಿನೇ ಚುಕ್ಕಿ ಅವಾ
೩೦೫. ಮುಚ್ಚಣಕಿ : ಭೊಗೊನಿ 'ಮುಚ್ಚಣಕಿ' ತೊಕೊಣ ಬಾ
೩೦೬. ಮುಜನತ್ : 'ಮುಜನತ್ 'ನ್ಹಾರಿ ಮಾಡಿ ಹೋದುರ ತೀನ್ಪಾರಾತನ ಹಸು ಆಗಾಲ್
೩೦೭. ಮುಣಗಿ : ತೊರ್ಯಾಗ 'ಮುಣಗಿ' ಸುರಂಗ ಹುಡಿಬೇಕು
೩೦೮. ಮುಶ್ಯಾರಿ : 'ಮುಶ್ಯಾರಿ' ಧಂದ್ಯಾ ಯಾರು ಮಾಡಂತಾರಾ ಅವನಿಗಿ
೩೦೯. ಮುಸ್ಕಿ : ಎತುಗುಳಿಗಿ 'ಮುಸ್ಕಿ' ಕಟ್ಟುರಾ ಬೆಳೆ ತಿಂಬಾಲ್
೩೧೦. ಮ್ಹೆವ್ಣಿ : ಆಕಿ ನಮ್ 'ಮ್ಹೆವ್ಣಿ' ಹಳಾ ಅದಕೆ ನಂಗನೋಡಿ ನಾಚತಾಳ
೩೧೧. ಮೆಟ್ನಾಲ್ಗಿ : 'ಮೆಟ್ನಾಲ್ಗಿ' ಮ್ಯಾಗ ನಿಂತು ತೂರ್ದುರಾ ಸುಂಕಾ ಕಡುದು ಹೊಯಿತದ
೩೧೨. ಮೇಟಿ : ಬಳದಾಗ 'ಮೆಟಿ' ಹುಡಿಲಾಕ ಎಲ್ಲೊ ರಿಗಿ ಬರಾಲ
೩೧೩. ಮೇವು : ದನಗುಳಿಗಿ 'ಮೇವು' ಹಾಕ್ದುರಾ ಹೌ ಹೌ ಮಾಡಾಲ್
೩೧೪. ಮೈದಾನ : ಥೈಮ್ಗಿ ತೊಕೊಂಡು 'ಮೈದಾನ'ಕ ಹೋಗ್ಯಾರ
೩೧೫. ಮೈದೂನ್ : ನಮ್ 'ಮೈದೂನ್ 'ಗಾ ಪೊರಿ ನೊಳತಿದೆ ಥಂದ ಸಿಗಲೇ ಹೋಗ್ಯಾವ

೮೧೬. ಮೋಕ್ಳಿ : ರೊಟ್ಟಿ ಸರಿ 'ಮೋಕ್ಳಿ' ಬ್ಯಾಳಿ ಸೈಯ್ ಹತ್ತದ

೮೧೭. ಮೊಕೊ : ನಿದ್ದ ಬಂದುರ್ ಮೊಕೊ; 'ಮೊಕೊಲಾ'ಕ್ ಜಾಗಯಿಲ್ಲ

೮೧೮. ಮೊಗಲಾಯಿ : ನಮ್ಮಪ್ಪವರೆಲ್ಲ 'ಮೊಗಲಾಯಿ' ಮಂದಿರಿ

೮೧೯. ಮೋಟಾ : ಕಡ್ಡಿ ತೊಗ್ರ 'ಮೋಟಾ' ಮಾಲಾ ಇರ್ತದ

೮೨೦. ಬಚ್ಚಲ್ : 'ಮ್ಹೋರ್ಯಾ'ಗ ಇಲ್ಚಪ್ ಸಿಕ್ ಬಿದ್ದದ

೮೨೧. ಮ್ಹೋರ್ನಿ : ಮ್ಹೋರ್ ಕುಣ್ಯಾಲ 'ಮ್ಹೋರ್ನಿ' ಕುಣಿತದ

೮೨೨. ಮೊಸುರು : 'ಮೊಸುರು' ಮೈದಾನ ಝುಲ್ದಿ ನಿಂದುರಸ್ತೂದ್

೮೨೩. ಮೊದಿ : 'ಮೊದಿ' ತಂದು ನುಲ್ಕಿ ಹೊಸಿಬೇಕು

೮೨೪. ಮೋಸ್ : 'ಮೋಸ್ ' ಮಾಡಾ ಮಂದಿನೇ ತೋಲವಾ ದುನಿಯಾದಾಗ

೮೨೫. ಮೋಳಿ : ನಿಮ್ ಯೋಸುಗ 'ಮೋಳಿ' ಹುಡ್ದು ಕೊಲ್ಲ್ಯಾ ಕ್ಯಾರಂತ

೮೨೬. ಮುಂಗ್ಸಿ : 'ಮುಂಗ್ಸಿ' ಕಟ್ಟಿ ದುಂಡ್ಯಾ ಹುಡಿಬೇಕು

೮೨೭. ಮಂಚಗಿ : 'ಮಂಚಗಿ' ಮ್ಯಾಗ ನಿಂತ ಹಕ್ಕಿ ಹೊಡ್ದರು ಸುತಮುತ್ತೆಲ್ಲ ಇದ್ದ ಹಕ್ಕಿ...

೮೨೮. ಮಂಡಳಿ : ಗಾಯನ 'ಮಂಡಳಿ' ಬಂದಿತಂತ ಪುನ್ಯಾಕಿತಿಗಿ

೮೨೯. ಮಂದಿ : ಮಂದಿ ಮನಿಗಿ ಧಿಪಾ ಹಚಲಾಕ್ ಹೋಗ್ಯಾಳ

೮೩೦. ಮುಂಬೆಕಾರಿ : ಊರಿಗಿ ಅವನೇ ಗುತ್ತಿ ಹಿಡ್ಯಾವ 'ಮುಂಬೆಕಾರಿ' ಹನಾ

೮೩೧. ಯಣಾ : ಹೊತ್ರ್ಯಾಳಿ ಮನಿಕಡಿ ಬಾ ಯಣಾ

೮೩೨. ಯಾಕಾ : ಮಸ್ತಿಗಿ ಬಂದ್ಹಾ ಮಾತಾಳತಿದಿ 'ಯಾಕಾ'?

೮೩೩. ಯಾನಾದಾ : 'ಯಾನಾದಾ' ತೋಲ್ ಮಂದಿ ನೆರ್ದವಲ್ಲಿ

೮೩೪. ಯಾನು : ...'ಯಾನು' ಕಿವಿಗಿ ಕೇಳ್ಸಲ್ದೆ; ಘುಚ್ಚಿ ಮಾತಾಡು

೮೩೫. ಯಾರ್ಯಾಕ : 'ಯ್ಯಾರ್ಯಾಕ' ಬರಾಲ ನಾ ಅಂಜಾಕಿ ಮಗುಳಿಲ್ಲ ನೋಡು ತಂಗ್ಯಾ

೮೩೬. ಯಾವಾಗಾ : ನೆಂಟುರ್ ಯಾವಾಗ ಬಂದುರು

೮೩೭. ಯಾಳಿ : ಯಾಳಿ ಕೆಟ್ಹೋಗ್ಯಾದ ಅದಕ್ ಹೀಂಗ್ ಉಕ್ಯಾದ ಜನ

೮೩೮. ರಾಜಿಖುಷಿ : ಓಡ್ಯಾಕ್ ಹೋದುಳು ಇಬ್ಬರು 'ರಾಜಿಖುಷಿ' ಹಿಂದೆ ಮದಿ ಆಗಾರಲ

೮೩೯. ರ್ಹಾಟಿ : ಮಕ್ಕುಳಿಗಿ 'ರ್ಯಾಟಿ' ಹಾಕ್ಕೊಂಡುರೆ ಇರ್ತಾವ ಬಲ್ಲಿ

೮೪೦. ರ್ಯಾಶನ್ : ಈ ತಿಂಗುಳು 'ರ್ಯಾಶನ್' ಘುಂಬಿಲ್ಲ ಯಾನಿಲ್ಲ

೮೪೧. ರುಮಾಲ : ಮಸರೇಜ ರುಮಾಲ ಕಟ್ಟಿದ್ದವಾ ; ಸತ್ತಾ?

೮೪೨. ರೇಕ್‌ದೇಕ್ : ರೇಕ್‌ದೇಕ್ ಮಾಡ್ಕೊತಾ ಹಿರಿಮನಸ್ಯರ ಬೇಕ್ರಿ ಮನಿಕಡಿ

೮೪೩. ರೊಕ್ಕಾ : ತಿಂಗುಳ್ ತಿಂಗುಳ್ 'ರೊಕ್ಕಾ' ಹ್ಯಾಂಗ ಎಣುಸುಕೊತಾಳ್

೮೪೪. ರೋಕಾ : ಖಿಶ್ಯಾದಾಗ 'ರೋಕಾ' ಇದ್ದುರೆ ಬಿರಿಯಾನಿ ಮಟನ್ ಇಲ್ಬುರ್ ..

೮೪೫. ರಂಜುಣಗಿ : ನಮ್ಮ ಕಾಲ್ದಾಗ 'ರಂಜುಣಗಿ' ಮದ್ಯಾ ಖರ್ದಿ ಮಾಡ್ತೀರು

೮೪೬. ರಂದಾ : ಖಟ್ಕಿಗಿ ರಂದಾ ಹುಡ್ದುರಾ ಸಾಪ್ ಸಾಪ್ ಖಾಣಸ್ತದ

೮೪೭. ಲಗಾತಾರ : ಲಗಾತಾರ್ ನಾಕ್ ಗಿಡಾ ಕಡ್ದಾ ಒಯ್ದು

೮೪೮. ಲಗ್ಗುಣ : 'ಲಗ್ಗುಣ' ತಾನ ಹಿಡಿಮಗುಳ ಬಾಣತನದ ಹಿನಾ

೮೪೯. ಲಪಡಾ : ಯಾನ 'ಲಪಡಾ' ಮಾಡಿಬಂದಾಳೊ ಯಾನೆ ಹಿನಾ ಇಲ್ಲೆ ಹಳಾ

೮೫೦. ಲಾಟನಕಿ : ಹೊಳ್ಗಿ, ಜಪಾತಿ ಮಾಳಾಕ್ 'ಲಾಟಣಿಕೆ' ಬೇಕು

೮೫೧. ಲೇಟ್ : ಬಸ್ ತೋಲ್ 'ಲೇಟ' ಈ ಗೊತ್

೮೫೨. ಲೈಟ್ : ಬಸ್ ಬಂದೊಂದ ಬಾರ್ 'ಲೈಟ್ ' ಮಾಡ್ತದ್

೮೫೩. ಲಿಂಬಿಕಾಯಿ : ನೋಡಾವ ಲಿಂಬಿಕಾಯಿ ತಾ ಅಂತಾನ

೮೫೪. ಲೆಂಡ್ಕಿ : ತಮ್ಮಾ ಎಡ್ದು ಲೆಂಡ್ಕಿ ಇಟತು ನಿನ್ನ ಹೇತಿಲ ಯಾನಿಲ್ಲ

೮೫೫. ವರುಗು : ನಿದ್ದಿ ಬಂದ್ರ ಎಲ್ಲಾರಾ ವರುಗು ಸುಮ್ನೆ ಸತಾಸಲತಿದಿ

೮೫೬. ವವಳಿ : ಅಯ್ಯಾರ್ ಮಾಡ್ಕೊಂಡವರು ವವಾಳಿ ಕುಡುಬೇಕು

೮೫೭. ವಾನಿ : ನಮುಗ ಠೀಕ್ ವಾನಿ ಆಲ್ದಾಕ್ ಬರಾಲ್ ನಿದ್ರಿ

೮೫೮. ವಾಪಿಸ್ : ನಿನ್ನೆ ಅವಾ ವಾಪಿಸ್ ಬಂದ್ನಲ್ಲ: ನೀ ಖ್ಯಾಲ ಮಾಡಿಲಾ?

೮೫೯. ವೈಕಸಿ : ಹತ್ ನಿನ್ ವೈಕಸಿ ಹಾಂಗ್ ಮಾಡ್ತಿ?

೮೬೦. ವೈನಿ : 'ವೈನಿ' ನೀನು ಬರ್ಗ ಕುಬ್ಸಾ ಉಡ್ಸುಲಾತಾರ್ ಛೆಂಜಿಕಿ

೮೬೧. ವೊಲ್ಲಿ : 'ವೊಲ್ಲಿಂದೆ' ಬೇಮಾರ ಮನಸ್ಯಾಗ ತಂದಾರ

೮೬೨. ಶಕರಿ : ಚಾಯ್ ಗಿ ಶಕರಿ ಜಾಸ್ತಿ ಆಗ್ಯಾದ

೮೬೩. ಶಣವ್ : ಆಕಿ ನಮ್ ಕಾಕನ ಹೆಣ್ತಿ ಹಳ ನಮಗ ಶಣವಾ ಆಗಬೇಕು

೮೬೪. ಶಾಣವ್‌ಸೇರ್ : ಶಾಣವ್ ಸೇರ್ ನಿಂದ ಅಳದು ಕೊಟ್ಟೆದಾ

೮೬೫. ಶಪತ್ : ಕೊಲ್ಯಾಕ್ತ ಅಂತ ಹೆಣದ ಮ್ಯಾಲೆ ಶಪತ್ ಮಾಡ್ಯಾನ

೮೬೬. ಶಪ್ಪಿ : ಖಬ್ಬಿನ್ ಶಪ್ಪಿಲಿಂದ ಬಲಿ ಭಂದ್ ಉರಿತದಂತ

೮೬೭. ಶರಬತ್ : ಮ್ಹೋರಂದಾಗ 'ಶರಬತ್ ' ಕುಡಿಲಾಕ ಘೋಡೆ ತಿಲ್ಲಾಕ ಕುಡ್ತಾರ

೮೬೮. ಶಂಗ್ಟ : ನಾ ಹೋಗಿದ ಆಕಿನ್ 'ಶಂಗ್ಟ' ಖುದ್

೮೬೯. ಶಂಬರ್ : ಶಂಬರ್ ರುಪಾಯಿಗಿ ಒಂದು ಚೀಲ ಜ್ವಾಳಾ ಕುಡ್ತಿರು

೮೭೦. ಶರಬತ್ : ಮ್ಹೋರಂದಾಗ ಶರಬತ್ ಸಿಗ್ತದ

೮೭೧. ಸಕ್ರಿ : ಈ ವರ್ಸ್ ಖಬ್ಸೆಲ್ಲ 'ಸಕ್ರ' ಫ್ಯಾಟ್ರಿಗ್ ಹೋಗ್ಯಾದ

೮೭೨. ಸಪಾಟಿ : ಅವಾ ಹುಡ್ಸುನ್ 'ಸಾಪಾಡಿ' ಪ್ಯಾರ್ ಧೂರ್ ಹೋಗಿರಬೇಕು

೮೭೩. ಸಪ್ಪಿ : 'ಸಪ್ಪಿ' ಯಾನ್ ಕೆಲಸಕ ಬರ್ತದ ಭಿಟ್ಯಾಕಲಾಕೆ

೮೭೪. ಸವ್ವಾ : ಸರಿಮರೊ ನವರಾಮರೊ 'ಸವ್ವಾ' ರೂಪಾಯ ಘಟ್

೮೭೫. ಸವ್ವಾಸೇರ್ : ಸೇರಿಗಿ 'ಸವ್ವಾಸೇರ್' ಇದ್ದುರೆ ಮಜಾ ಬರ್ತುದ ಆಟದಾಗ

೮೭೬. ಸಳಾಯ್ : ಅರ್ ಸಿಸಿ ಹಾಕ್ಲಾಕ್ 'ಸಳಾಯ್ 'ಬೇಕು; ಬೈಲ್ ಭಂಡಿಗಿ ಸಳಾಯಿಬೇಕು

೮೭೭. ಸವಲತ್ : ಕಿರ್ಬ್‌ನ್ ಆದುರ ಯಾನ್ 'ಸವಲತ್ ' ಸಿಗಾಲ್

೮೭೮. ಸವಾಲ್ : ಆಕಿಂದ್ ಯಾನ್ 'ಸವಾಲದ' ನಮುಗ

೮೭೯. ಸಾಟಿ : 'ಸಾಟಿ' ರುಪಾಯಿ ಮಣಕಾಯಿ ಬರ್ತಿದ್ದು

೮೮೦. ಸಾಡೆಸತಿ : ಇದು ಯಾನ್ ಬೆನ್ನ ಹತುತ್ ನಂಗಾ 'ಸಾಡೆಸತಿ'

೮೮೧. ಸಾಬುರ್ : 'ಸಾಬುರ್' ಬಂದಾರಂತ ಭೇಟಿ ಆಗಿ ಹೋಗಾರಂತ ಖುಂತಿದಾ

೮೮೨. ಸಾಮಾನ್ : ಗುಬಾರದಾಗ 'ಸಾಮಾನ್' ಹಾಕಾ ಖೋಲಿಬ್ಯಾರ ಇರ್ತದಂತ

೮೮೩. ಸಾಲ್ಯಾಗ : ಸಾಲ್ಯಾಗ ಮಾಸ್ತರಗುಳೇ ಇಲ್ಲ

೮೮೪. ಸಾಳ್ಯಾಗ : ಸಾಳ್ಯಾಳ ಪಾರ್ಗುಳೇ ಇಲ್ಲ ಮಾಸ್ತಾರ್ ಎಲಿದು ಬರ್ತಾನ

೮೮೫. ಸಿಕ್ಕಿಲ್ : ಓಟ್ ಬರ್ದುರ್ ಬಿ ನೌಕ್ರಿನೇ ಸಿಕ್ಕಿಲಂತ

೮೮೬ ಸಿಮಿಟ್ : ಕಲ್ಲು ಕೆಸ್ರಿಲಿ ಯಾರು ಮನಿ ಕಟ್ಟಾತಾರ ಇಟಗಿ 'ಸಿಮಿಟ್ 'ಲಿಂದೆ

೮೮೭. ಸಿಲ್ಗಾಸ್ : ಲೈಟ್ ಹೊಯ್ತುದ ಗೋಲಾ 'ಸಿಲ್ಗಾಸ್ ' ಝುಲ್ದಿ

೮೮೮. ಸುಟ್ಟಿ : ಸಾಳಿಸುಟ್ಟಿ ಆಗ್ಯಾವ ಖರೆ ಮಾಸ್ತರಗುಳು ಹೊಂಟಾವೆ

೮೮೯. ಸುದ್ : ಏಮ್ ಮಾತಗುಳ ಬ್ಯಾರೆ ಅವ್ರು ಸುದ್ ಆಡ್ತಾರ

೮೯೦. ಸುದ್ರಾಸಾಲ್ : ಪ್ಯಾಟ್ಯಾಗ ನಮುಗ್ ಎತ್ ಬೀ ಸುದ್ರಾಸಲ್

೮೯೧. ಸುಮ್ : ಸುಮ್ ಖಿಂತಾವನ ಶಂಟ ಯಾರ್ ಕಿತ್ತಾಲ

೮೯೨. ಸೂಡ್ : ಮದಿ ಕೊಯ್ದು 'ಸೂಡು' ಸೂಡು ಕಟಭೇಕಂದುರ ಇರ್ತದ

೮೯೩. ಸೆಕ್ತಿ : ಈಗ ಖೂಡಬಿದ್ದೇವು ಧಂದ್ಯ ಎಲಿಂದು ಏಳಾಕೆ 'ಸೆಕ್ತಿ' ಇಲ್ಲ

೮೯೪. ಸೇಪ್ : 'ಸೇಪ್ ' ಬಾರಾ ರೂಪಾಯಿಗಿ ಬಂದಂತ

೮೯೫. ಸೈತಾನ್ : ಇಕಡ ಯಾಕ ಬಂತೊಯಪ್ಪಾ ಸೈತಾನು

೮೯೬. ಸೊತೆಕಾಯಿ : ಜ್ವಾಳ ಅಡ್ ಖೆಡುವುತಾವಂತ ಸೊತೆಕಾಯಿ ಹಾಕಾಲರು

೮೯೭. ಸೊಸಿ : ಸೊಸಿ ಗುಣ ಭಂಗಾರಖಿಂತ ಛಂದವಾ

೮೯೮. ಸೋಬ್ತಿ : ಆ ಪೋರಿ ಯಾರಿಗೊ 'ಸೋಬ್ತಿ' ಹಳಾ ಅಂತಲ

೮೯೯. ಸೋಲ್ : ಪಂಚಮಿಗಿ ಝುಕಾಲಿ ಹಾಕಲಾಕ ಸೋಲ್ ಬೇಕು

೯೦೦. ಸೊಲಗಿ : ದೊನ್ಸೆ ಸೊಲಗಿ ಅದರ ಒಂದು ಚೀಲ

೯೦೧. ಸಾವುರ್ಸ : ಎತ್ತಾರಾ ಹೋಗಾಂಗಿದ್ವರ ಝುಲ್ದಿ ಸಾವುರ್ಸಲೆ

೯೦೨. ಸಂಕ್ಯಿ : ಎಮ್ಮಿ ಸಂಕ್ಯಿಗಿ ಕಟ್ಟೆ ಕೀಲಿ ಹಾಕಬೇಕು

೯೦೩. ಸೇಂಗಾ : ಸೇಂಗಾ ಸೊಲ್ಲೆ ಸುಲಿಬೇಕಾಯಿತದ

೯೦೪. ಸೀತ್ನಿ : ಸೀತ್ನಿ ಮೈಗಿ ಭಾಳ ಛಂದ : ದಿವಸಾ ತಿನಬೇಕು

೯೦೫. ಹಗಲತ್ : ಕಳ್ಳುರ ಹಾಡಿ 'ಹಗಲತ್' ಮನಿ ಹುಡ್ಕಾರಂತ

೯೦೬. ಹಜಾಮ್ : ಯಾಕ್ ತಡಾ ಮಾಡ್ದೊ ಸಾಳಿಗಿ ಹಜಾಮ್

೯೦೭. ಹಜಾಮತಿ : ಹಜಾಮುರಿಗಿ ಹಜಾಮತಿ ಮಾಡಿ ಮಾಡಿ ಹರ್ಾಟಿ ಇರ್ತದ

೯೦೮. ಹಜ್ಯಾರ : ತಿಂಗಳಿಗ ಹಜ್ಯಾರ ಕುಡ್ತಾ ಇರ್ತೇನ ನೌಕ್ರಿ

೯೦೯. ಹಣ್ಹಿಗ್ಗಾ : 'ಹಣ್ಹಿಗ್ಗಾ'ದಿಂದ ಎತಗುಳಿಗೆ ಎತ್ತಬೀ ತಿರ್ಗುಸಲಾಕ ಬರ್ತದ

೯೧೦. ಹತಾಳಿ : 'ಹತಾಳಿ' ಹೊತ್ಯಾದ ಹಾಲಿಡು, ಝುಲ್ದಿ ಆಡಿಗಿ ಹೋಗಾದದ

೯೧೧. ಹಪ್ಸಾ : ನಳ್ಳಗಿ ನೀರು ಬಂದಿಲ ಹಪ್ಸಾದಿಂದ ನೀರು ತಾ ಹೋಗ್ರಿ

೯೧೨. ಹಮ್ಮಿಳಿ : ಟೊಂಕಿನಾಗ ಈಟ್ ಧೊಡ್ಡು 'ಹಮ್ಮಿಳಿ'ಯದ

೯೧೩. ಹರಕತ್ : ಮಾವ್ ಒಪ್ಪಾಲ್ಲುರ್ 'ಪರಕತ್ ' ಇಲ್ಲ ಪೋರಿ ಒಪ್ಪಿದರ ಸಾಕು

೯೧೪. ಹರದಾರಿ : ನಿಡೇಬಾನ ದಿಂದ ಭತಮುರ್ಗಿ ಬಂದ 'ಹರದಾರಿ' ಅದಾ

೯೧೫. ಹಲಕಟ್ : ಈ ಹಲಕಟ ಹೆಂಗ್ಸಿಗಿ ಹೇಳದ ಅಕಡಿ ಹೋಗಬ್ಯಾಡಗ ಅಂತ

೯೦೭. ಹಳ್ಳಾ : ಶಣ ಹಳ್ಳಾ ಅದಾಲ ವೊಲ್ಲಿಕ ಮೀಣಂತೀ ಮೀಣ್ ಬಂದಾವ್

೯೦೭. ಹಳ್ಳು : ಬಿದ್ದಿ 'ಹಳ್ಳು'ಗ ಬಾ ಕಲ್ಲು ರೇಚಿ ಹತ್ಯಾತಗಿನ

೯೦೮. ಹಾಕ್ಯಸಿ : ಓಟ್ 'ಹಾಕ್ಯಸಿ' ಬಂದ ನೀ ಹೋಗಿ' ಹಾಕ್ಯಸಿ ಬಾ

೯೦೯. ಹಾಜರ್ : ಸುಮ್ ಹೇಳಿ ಬಳಸದೂರಬೀ 'ಹಾಜರ್ ' ಇರ್ತಾ

೯೧೦. ಹಾದರತಾನ : ಹಾದರತಾನ ಮಾಡಾ ಪೋರಿಗಿ ಯಾರ ಮಾಡ್ಕೊತಾರಾ

೯೧೧. ಹಾಲತ್ : ಆಕಿಂದ್ ಹಾಲತ ತೋಲ್ ಖರಾಬ ಆಗ್ಯಾದಲರಿ

೯೧೨. ಹಿಕಮತ್ : ಮನಿಹ್ಯಾಂಗ ಕಟ್ಟಸಲ ತೋಲಹಿಕಮತ್ ಅದಾ...

೯೧೩. ಹಿಜಡಾ : 'ಹಿಜಡಾ' ಆಗ್ಯಾದಗ ಹೆಂಗ್ಯಾಕ ಒಡ್ಯಾಡತದ

೯೧೪. ಹಿನಾ : 'ಹಿನಾ' ಅಂವಾ ಅಲೇ ದನಾ ತರುಬಿದಾ

೯೧೫. ಹಿರಸ್ : ಹಿಜಡ್ಯಾಲ 'ಹಿರಸ್ ಭಾರಿ' ಅಂತ ಹಿರಸೇ ತೋಲದ

೯೧೬. ಹಿರುಸ್ : ಮನ್ಸ್ಯಾನ ಬದಿಲಿ ಹಿರುಸ್ ಇರ್ಬೇಕು

೯೧೭. ಹುವ್ವಾ : ಕುರುಬುನ್ ಕೈಯ್ಯಾಗ ಹುವ್ವಾ ಕೊಟ್ಟುರು ಕುಂಡ್ಯಾಗ ಇಟ್ಕೊ...

೯೧೮. ಹುಶಾರಿ : ತೋಲ್ 'ಹುಶಾರಿ' ಮಾಡಬ್ಯಾಡ ನೋಡು

೯೧೯. ಹೂಡ್ಯಾ : ಓಟ ಮ್ಯಾಗಯಾಕೇರಿದಿ ಹೂಡ್ಯಾದ ಮಾಗ್ಯ

೯೨೦. ಹೆಡಕು : ಹೆಡಕು ಬೆನ್ನು ಬಿಗಿಲತಂದ್

೯೨೧. ಹೈರಾಣಿ : ನಿನ್ನಿಂದ ಹಿನ್ನಾಧನ ಹೈರಾಣಿ 'ಹೈರಾಣಿ' ಆಗ್ಲತಾನ

೯೨೨. ಹೊಕ್ಕುಳ್ : ಪ್ಯಾಟಿ ಹೆಂಗ್ಸುರೆಲ್ಲ 'ಹೊಕ್ಕುಳ್ ' ಕೆಳಗ ಸೀರಿ ಉಟ್ಕೋತಾರ

೯೨೩. ಹೊತ್ರಳಿ : ಹೊರೆ ಹೊತ್ರಳಿ ಸಾವಿನ ಸುದ್ದಿ ಬಂತ್ ನೋಡು

೯೨೪. ಹೊಯ್ತಾನ್ : ಲಗ್ಗುಣ ಚಿಟ್ಟಿ ಬಂದದ ಹೊಯ್ತಾನ್

೯೨೫. ಹಂತಿ : ಬಾರಾಬಾರಾ ಜೋಬೀಸ್ ಎತಗುಳ ಹಂತಿ ಹುಡ್ಡಿದಾ

೯೨೬. ಹಾಂಗಂತ್ : ಒಹೋ! ಹಾಂಗಂತಾ ಬರ್ತಾ ನಿಂದುರ್

೯೨೭. ಹಿಂಬ್ನಿ : ಹಿಂಬ್ನಿ ಕುಟ್ಟಿಡದದ; ನಿನ್ನಿಂದ ನೈಯ್ ಲತದ

೯೨೮. ಹಿಂಬ್ರಿ : ಹಿಂಬ್ರಿಹತಿ ಬಂದಾಳ ಯಾನಮದಿ ಮಾಡ್ಕೊಂಡಿದಾ

೯೨೯. ಹುಂಡಾ : ಹುಂಡಾ ಇಲ್ದೆ ಮದಿನೇ ಆಗಾಲ್ಲು ಈ ಕಾಲದಾಗ

೯೩೦. ಹುಂದಾ? : ಊರಿಗ ಬರ್ತೆನೊ ತಮ್ಮಾ ಹುಂದಾ?

೯೩೧. ಹೊಂಟಿ : ಹೊರಗ 'ಹೊಂಟಿ' ಛಂಜಿಧನ ಪುರಸತದ ಮನಿಗಿ ಹೋಗಲಾಕ

೯೩೨. ಕ್ಷಣ : ಭೂಮಿಗಿ ಭೆಂಕಿ ಹತ್ತಿ ಕ್ಷಣದಂಗೆ ಉರ್ದುಹೊಯಿತು

೯೩೩. ಜ್ಞಾನ್ : ಮನಸ್ಯಾಕ ಬಲ್ಲಿ ಜ್ಞಾನ ಇರಬೇಕು ಅವನೇ ಬದಕ್ತಾನ

೯೩೪. ಜ್ಞಾನಿ : ಚನ್ನಬಸವ ಪಟದೇವುರು ಜ್ಞಾನಿ ಇದ್ದುರು ಬುದ್

# ಅನುಬಂಧ ೨

## ೭.೨.೧ ಬೀದರ ಕನ್ನಡದ ಜನಪದ ಕಥೆಗಳು

### ೧. ಶಬ್ಬಾಸ್ರೆ ಹೊಲ್ಯಾ

ವಾಣಿಬೇಂದ್ರ, ಭಾಲ್ಕಿ ತಾಲೂಕು, ನಿಡೇಬಾನ ೧೦ ವರ್ಷ

ಹೀಂಗೊಬ್ಬ ರಾಜ ಇದ್ದ. ಕಚುರಿಥುಂಬಾ ಮಂದಿ ಥುಂಭಿವ್. ಆಟ್ರಾಗ ಸಲಾಂ ಗೋಡ್ರೆ ಹೊಲ್ಯಾ ಬಂದ ಅಂದು ವಾಪಿಸ್ ತಿರಗ್ದ. ಮsssತ ನಾಳೆಗ್ಹೋದ. ಹಿಂಗೆ ಅಂದ. ರಾಜಗ ಜುಗ ಬಿತ್ತು. ಈ ಹೊಲ್ಯಾ ಹಿಂಗ್ಯಾಕ್ಮಾಡ್ತಾನ, ರೋಜ್ ರೋಜ್ ಬರ್ತಾನ್ . ಅಂತ ಚಿಂತ್ಯಾಗ ಖೂಡ್ತಾನ್ ಮಾರಿ ಯಾಕ್ ಶಣ್ ಮಾಡಿರಿ ಏಳ್ರಿ ಉಣ್ರಿ ಜರಾ ಆರಾಮಾಗ್ರಿ ಅಂತಾಳ ರಾಜನ ರಾಣಿ. ಒಂದೇ ಮಾತದ, ಆ ಮಾತ್ತುನಾಗಥನಾ ನಾ ಉಂಬಾಲ್ ಅಂದ ರಾಜ ಯಾನ್ಮಾತದ ಹೇಳ್ರಿ ಅಂದ ಕೇಳ್ಸೋಕ್ ಈಟೆ ಮಾತ್ರಿ ನಾ ಹೇಳ್ತಾ ಉಣ್ರಿ ಮಾಡ್ರಿ ಅಂತಂದುಳ್. ಇಲ್ಲಿಲ್ಲ ನೀ ಹೇಳಾಥನಾ ನಾ ಊಟಾನೆ ಮಾಡಾಲ ಅಂತಾನ್. ಮನ್ಯಾಗ ನನ್ಹೆಣ್ತಿ ಮಕೊಂಡಾಳ ಚಿಕ್ಕುಡು ತುಪ್ಪ ತೊಕೋಣುಬಾ ಅಂತ ಹೇಳ್ರಿ ಆ ಹೊಲ್ಯಾಗ ಅಂದಳು ಆಗ ಉಂಡು ಕಚುರಿಗಿ ಹೊಯ್ತಾನ್ ರಾಜ.

ಮರಧಿನ ಹಾಂಗೆ ಬಂದು ಹೊಯ್ತಾನ ಆ ಹೋಲ್ಯಾ; ಯಾನಂಬಾದ ಅಂದು. 'ಹೊಲ್ಯಾ, ಏಯ್ ಹೊಲ್ಯಾ ನಿಂದುರ್ ಅಂತಾನರಾಜ ಯಾಕ್ರಿ ರಾಜರೆ ಅಂತಾನವ, ಹೆಣ್ತಿ ಹೇಳ್ದಾಂಗೆ ಹೇಳ್ತಾನ್ . ಈಗ ಹೊಲ್ಯಾ ಪರೆಶಾನಾಗಿ ಖೂಡ್ತಾನ್ ಮನಿಗ್ಹೋಗಿ ನಮ್ಯಾಲ ಹೊಲ್ತಿ ಅಂತಾಳ ಉಣು, ಯಾಕೊ ಮಾರಿ ಶಣ್ಣುದು ಮಾಡಿದಿ, ಅಂದಾಗ ರಾಜ ಒಂದ್ಮಾತ ಕೇಳ್ಯಾನ ಚಿಕ್ಕುಡ್ತುಪ್ಪ ತಾ ಅಂದಾನ ಅಂದ ಅಯ್ಯೋಗ ಇಟೇ ಮಾತು 'ಬನಿಸಾವಿರ್ ಎತ್ತಿನ ಮ್ಯಾಲ ಚಿಕ್ಕುಡ್ತುಪ್ಪ ಹೊಂಟುದ್ರಿ ಮತ್ ಕಮಾನ ದಂಡ್ಗಿ ಸೂರ್ಯನ್ತಕಡಿ ಚೆಂದುರ್ಕಲ್ಹಾಚ್ಚಿ ತೊಕೊಬರ್ರಿ ಅಂತ ಹೇಳ್ರಿ ರಾಜಗ ಅಂದುಳ ಅಂಗ್ ಉಣ್ತಾನ ಹೊಲ್ಯಾ

ಮುಂಜೆಳೆದ್ದು ಹೊಲ್ಯಾ ಹೋಗಾಣ ರಾಜ ತಂದೆನೋ ಹೊಲ್ಯಾ ಚಿಕ್ಕುಡ್ ತುಪ್ಪ. ಅಂದಾಗ ಹೊಂಟಾವ್ರಿ ಅಂತ 'ಬನ್ನಿ ಸಾವಿರ ಎತ್ತಿನ ಮ್ಯಾಲ್ ಚಿಕ್ಕುಟ ತುಪ್ಪ ಹೊಂಟದ.... ಅಂತ ಹೇಳ್ದನು. ಮತ್ತರಾಜಪರೆಶಾನಾದ ಕಮಾನ ದಂಡ್ಗಿ ಸೂರ್ಯನ ತಕ್ಡಿ ಹ್ಯಾಂಗ್ ಸಿಕ್ರೊ ಹೊಲ್ಯಾ ಅಂತ ಕೇಳ್ತಾನ್ ರಾಜ ಅದ್ಕಂದ ಆಕುಳ್ ತಪ್ಪ ಸಿಕ್ತದ, ಕುರಿತುಪ್ಪ ಸಿಕ್ತದ, ಯಮ್ಮಿತುಪ್ಪ ಸಿಕ್ತದ ಚಿಕ್ಕುಡ್ತುಪ್ಪ ಹ್ಯಾಂಗ್ಸಿಕ್ತದ ಅಂತ ಪರಶಣ ಅಕ್ತಾನ. ಜರಾ ಇಚಾರ ಮಾಡಿ ಆಗ ರಾಜ ಶಬ್ಬಾಸ್ರೆ ಹೊಲ್ಯಾ ಅಂತ ಬೆನ್ನ ಬಡಿತ್ತಾನ....

# ೨. ಪತಿವರ್ತಾ ಕಡಿಗಿ ಹೊಯ್ತುದ

ಕಮಲಾಬಾಯಿ ಬೇಂದ್ರೆ
ವಯಸ್ಸು ೫೦, ನಿಡೇಬಾನ
ಭಾಲ್ಕಿ ತಾಲ್ಲೂಕು

ಒಬ್ ಸಿಂಪ್ಗೇರಾವ ಇರ್ತಾನ್ ಅವ್ನ ಹೊಟ್ಟಿಲಿ ನಾಕ್ ಮಂದಿ ಗಂಡ್ಸು ಮಕ್ಕಳು. ಅವ್ರು ಅರ್ ಬೇಪಾರ್ ಮಾಡ್ತಾರ. ನಾಕೂ ಮಂದಿಗಿ ನಾಕ್ ಒಂಟಿ, ಇದ್ವಿವ್. ಮೂಗರ ಮದಿ ಮಾಡಿನ್ ಅವ್ರಪ್. ಅವಾ ಕುಡ್ನಾಗಿನ್. ಎಲಾ ಸಿವಾ ಈ ಮಗನ್ ಮದಿ ಮಾಡಾಟ್ಗೆ ನನ್ಕಣ್ ಹೋದು ಅಲ. ಯಾನ್ ಮಾಡ್ಬೇಕಂತ್ಹೇಳಿ ಚಿಂತ್ಯಾಗ ಖೂಡ್ತಾನ್. ಒಬ್ಬಾಕಿ ಒಂದೂರಾಗ ಒಂದ್ಪೋರಿಹಳ್ ನಿಮ್ಮಗ್ನಿಗಿ ಜೋಡಿ ಛಂದ್ ಹಾಳ್ ನೋಡಂದುಳ್. ನಾರಾ ಕುಡ್ನಾಗಿದ ನಾಯಾನ್ ಬರ್ಲಿ? ನೀವೆ ಹೋಗ್ರಿ ನೋಡ್ಕೊಂಡು ಬರ್ರಿ. ಅಂದರ ಆಕಿ ಅಂದಳು ನಾವ್ಯಾನ್ರಿ ತೋಲ್ ಬಾರ್ ನೋಡಿದೇವ್ ನೀವ್ ಏಟಂದರ ಪಾರನ್ತಂದಿ ಇದ್ದಿರಿ ಅಂದುಳ್ ಅವ ತಯಾರಾದ.

ಹಿಂಗೆ ಒಂಧಿನಾ ಮ್ಹೋರತ್ ನೋಡಿ ನಡ್ದುರು ಊರ್ಸೀಮಿ ಧಾಟಿ ಹೋಗಾದ್ರಾಗ ನಿಮ್ಮನಿಗಿ ದಸಿವಂತಿ ಸೊಸೆ ಹೊಂಟಾಳ ಆಕಿನ್ ಕಾಲ್ಗುಣದಿಂದ ನಿನ್ಕಣ್ ಬರ್ತಾವ ಅಂದುರ್ . ನೋಡಿ ಸಕ್ರಿ ಹಾಕಿ ಒಂಧಿನ ನೋಡಿ ಮದಿ ಮಾಡ್ದುರು.

ಈಗ ತನ್ಮದಿಬಿ ಆಯಿತು ನಾಯಕ್ ಮನ್ಸ್ಯಾಗ್ಹೂಲ್ಲಿ ಅಂತ ಅಣ್ಣೇರ ಸಂಗ್ತಬೀ ಬೇಪಾರ್ಕ್ ತಯಾರಾದ. ಹೋಗಾ ಯಾಳ್ಯಾಕ ಹೆಣ್ತಗಿ ನಂಗ್ಬರ್ಲಾಕ ಆರ್ ತಿಂಗುಳ್ ಬೇಕು. ನೀ ನಂಗ್ಮರಿಭ್ಯಾಡ ಅಂದ ಆಕಿ ಯಾಕ್ರಿ ಬರೊಸಿ ಇಲ್ಲೇನ್ರಿ ನಾ ಪತಿವರ್ತಾ ಇದ್ನ ಅಂದುಳ್. ನೀ ಪತಿವರ್ತಿ ಇದ್ಹೆಂತ ನಾ ಹ್ಯಾಂಗ್ ತಿಳಿಲಿ? ಅಂತಂದು ಮನಿ ಸಾರ್ಸು ನಾಕು ಮೂಲಿಗಿ ನಾಕು ಸೆಮೆ ಹಚ್ಚು ಅಂಗ್ನಾಗ ಒಂದು ಹುವ್ವಿನ್ ಗಿಡ ಹಚ್ಚು ನಾ ಹೋಗಿ ಬರ್ತಾತನಾ ಸೆಮೆ ಹೀಂಗೆ ಉರಿಬೇಕು ಮನಿಬೀ ಹಿಂಗೇ ಇರ್ಬೇಕು ಹುವ್ವಿನ್ಗಿಡಬೀ ಹಿಂಗೆ ಇರ್ಬೇಕ್ ಅಂತಂದು ಮನಿಗಿ ಕೀಲಿಹಾಕಿ ಕೀಲಿ ತಾನೆ ಒಯ್ತಾನ.

ಗಂಡ್ ಹೋದ್ಮ್ಯಾಲ ಮಾವ್ ಸೊಸಿಗಿ ಕೆಣ್ಕ್ಯಾಲ್ರ್ ಸುರುಮಾಡ್ದ. ಒಬ್ ಫಕೀರನ್ಬಲ್ಲಿ ಹೋಗಿ ಒಂದ್ಪೋರಿ ಅದ್ ಅದು ನನ್ಮ್ಯಾಲ್ ಬಂಧ್ಬಿಳ್ಬೇಕು ಹಂತಾದು. ಹಾಂಗ ಒಂದು ಮಂತುರ್ಸಿ ಕುಡು ಅಂದ. ಯಾಕಾಗಾಲ್ದು ಅಂತ್ಹೇಳಿ ನಾಕ್ಟೆಂಗ್, ನಾಕ್ಬಾಳೆಕಾಯಿ ತೊಕೊಣ ಬಾ ಅಂತ ಫಕೀರ ಹೇಳ್ದ. ಹಾಂಗೆ ಮಾಡ್ದ ಫಕೀರ ಒಂದೇ ಟೆಂಗಿಗಿ ಒಂದೇ ಬಾಳೆಕಾಯ್ಗಿ ಮಂತ್ರಸ್ದ. ತಂದು ಮಾವ ನಾಕು ಮಂದಿ ಸೊಸ್ದೇರಿಗಿ ಕೊಟ್ಟ ಆದರ್ ಸಣ್ ಸೊಸಿಗಿ ಮಂತ್ರಿಸಿದ್ದು ತಂದ್ಕೊಟ್ಟ. ರಾತ್ರಿ ನಾ ಹೊರಾಗ ಮಕೋತಾ ಯಾನ್ ಘುರ್ದಾಳಿ ಆದುರ್ ಬಿ, ಕಳ್ಳುರ್ ಬಂದುರ್ ಬೀ ನೀವ್ ತಟ್ಟಿ ತೆರಿಭ್ಯಾಡ್ರಿ ಅಂತ ಹೇಳ್ದ.

ಸಣ್ ಸೊಸಿಗಿ ಅನ್ಮಾನಬಂದು ಇತ್ತು ಇವ ತಂದಿಂದ ಟೆಂಗು ನಾಯಾಕ್ ತಿಲ್ಲಿ ಅಂತ ಯಾರಿಗಿ ಖೂನಾ ಇಲ್ಲೆ ಯಮ್ಮಿಗಿ ಕೊಟ್ಟಿಳ್. ಟೆಂಗ್ ಭಾಯಾಗ್ ಭೀಟ್ಟುಳ್. ರಾತ್ರಿ ಯಮ್ಮಿ ಮಮ್ಮನ್ಕ್ಯಲ ಆಸಿಕ್ ಆಯ್ತು; ಕಡ್ಕೊಂಡು ಮಮ್ಮನ್ಮಾಲ್ ಬಿತ್ತು. ಬಿಡ್ಕೋಮಾರಂಬಟ್ಕೆ ಭಾಯಾಗ ಬಿದ್ದ ಬಾಯ್ಬೀ ಆಸಿಕ್ ಆಯ್ತು. ಹಗ್ಗಲಿ ಮ್ಯಾಲ್ತೆಗ್ಗುರು. ಸಣ್ ಸೊಸಿನ ಮಿಂಡ್ಯಾಗರದರ್ ಬಂದು ನಂದ ಈ ಹಾಲತ ಮಾಡ್ಯಾರ ಅಂತ ದುಸ್ರೆ ಸೊಸ್ದೇರಿಗಿ ಹೇಳ್ದ. ರಾತ್ರಿ  ಶಣ್‌ಸೊಸಿಗಿ ಹಿಡ್ದು ಕಟ್ಟಿ ಚೀಲ್ದಾಗ ಹಾಕಿ ಒಂದೂರಿಗೆ ಒಯ್ದಾನ. ಅಲ್ಲಿ ಪಾತುರ್ದೇರ ಮನಿ ಇರ್ತುದ ಅಲ್ಲಿ ಒಯ್ದಾನ್. ಇವ ಯಾತ್ಕೊ ಮನಿ ಹೊರಕ ಹೋಗಾಣ ಚೀಲ್ದಾಗಿನ ಸೊಸಿ ಮಾತಾಡ್ತಾಳ. ಅವು ಹುಶಾರ್ಕಿ ಮಾಡಿ ಸೊಸಿಗಿ ಹೊರಾಗ ತೆಗ್ದು ಒಳಾಗ ಕೋತಿಗಿ ಹಾಕ್ತಾವ್ ರಾತ್ರಿ ಬಂದು ಮಮ್ ಚೀಲಾ ತೆಗ್ಯಾಣ ಕೋತಿ ಮೈಯಲ್ಲಿ ಹರಿತದ.

ಈ ನಾಕು ಮಂದಿ ಅಣ್ತಂಬುರು ಬೇಪಾರದಿಂದ ಬರ್ತಾವ ಈ ಪಾತುರ್ದೋರ ಮನ್ಯಾಗ ಬಂದ್ ಇಳಿತಾವ್ ಇವುಕ್ಬೀ ಖರಾಬ್ ರ್‍ಯಾಟಿ ನಾಕು ಮಂದಿ ಒಬ್ಬೊಬ್ಬಾಕಿಗಿ ತೊಕೊಂಡು ಮೊಕೊತಾರ ಸಣ್ ಮಗನ ರಂಡಿ ಅವ್ನ ಕಾಲೊತ್ಕೊತ ಖುಂತು ಇಸಾರತಿ ಮಾಡಿ ಇವ್ನ ಹೆಣ್ತಿಗಿ ಕರಿತಾಳ. ನಿದ್ದಿ ಬಂದಾಗ ಧೀಪ ಆರ್ಸು ಅಂತ. ಧೀಪಾ ಮಟ್ಲಾಕ್ ಹೋದರ್ ಹೆಂತಾ ಪತಿವರ್ತಿ ನೀ ಯವ್ವ ಅಂತ ಆ ಧೀಫಾ. ಯಾರು ಯಾರಿಗಿ ಮಾತಾಲ್ದಾತಾವಂದು ಸಣ್ಣ ಮಗ ನೋಡ್ತುರು ಹೆಣ್ತೆ ಹಳಾ ಘಾಬ್ರಿ ಆಯ್ತಾನ ನಾ ಬೇಪಾರ್ಕ್ ಹೋಗಾಣ ಇಕಿ ಪಾತುರ್ ದೋರ ಬಲ್ಕಿ ಬಂದು ಧಂದ್ಯಾ ಸುರು ಮಾಡ್ಯಾಳಂತ. ಆಗ ಅವ್ನ ರಂಡಿ ಬಂದು ಆಗಿನ ಕತಿ ಹೇಳ್ತಾಳ, ನಾಕು ಮಂದಿ ಮರ್ಧಿನ ತನ್‌ತನ್ ಹೆಂಡುರಿಗಿ ಹುಡ್ಕಾಕಿ, ಅಪ್ಪಗ್ಬೀ ಕೋಲ್ತಾರ. ಮೂಗರ ಬ್ಯಾರೆ ಮದಿ ಮಾಡ್ಕೊತಾರ. ನನ್ ರಂಡಿ ಇಮಾಂದಾರ ಆದ ಅಂದು ಹೊಲ ಕೊಟ್ಟು, ಊರಾಗೆ ಮನಿ ಕೊಟ್ಟು ಇಡ್ತಾನ. ಮುಂದ ಸಂಸಾರ ಛಂದ ಮಾಡ್ತಾರ.

## ೩. ಕುಂಡ್ಯಾಗ್ ಬ್ಯಾಳಿ

ದಿನಾಂಕ ೨-೧೧-೦೨
ಶ್ರೀಮತಿ ಮಲ್ಲಮ್ಮ ವಿ.ಬೆಂಬಳಖೇಡ್
೩೫ ವಯಸ್ಸು

ಒಂದೂರಾಗ ಇಬ್ಬರ್ ಗಂಡ ಹೆಣ್ತಿ ಇದ್ದುರ್. ಅವ್ರಿಗಿ ಮಕ್ಕುಳ್ ಇದ್ದಿಲ್ ಪಾಪ ಅವ್ರು ಯಲ್ಲ ದೇವ್ರಿಗಿ ಬೇಡ್ಕೊಂಡುರ್, ಬೇಡ್ಕೊಂಡಿನ್ಮ್ಯಾಲಿಬೀ ಮಕ್ಕಳೇ ಅಗಾಲ್ದೋದು ಅವ್ರು ಸಾವ್‌ಮಿ ಬಲ್ಲಿ ಹೋಗಿ ಸಾವ್‌ಮಿ ನಾವ್ ಯಲ್ಲ ದೇವ್ರಿಗಿ ಬೇಡ್ಕೊಂಡೆವ್ ಅಂದುರ್ ಬೀ ನಮ್‌ಗ್ ಮಕ್ಕುಳೇ ಆಗಾಲ್ ಹೋಗ್ಯಾವ್ರಿ 'ನಿಂಬಲ್ಲಿ ಬಂದಿನ್ ಮ್ಯಾಲ್ ಮಕ್ಕುಳ್ ಆಯ್ತವ ಅಂತ ಹೇಳ್ಯಾರ ಅದಕ ಬಂದೆವ್ರಿ ಸಾವ್‌ಮಿ ಅಂದ್ರುಪಾ. ಅದಕ ನಿಂಬಲ್ಲಿ ಬಂದೇವ್ ಮಗ ಹುಟ್ಯಾದ ಯಾನ್ ಹೆಸರು ಇಡ್ಬೇಕ್ರಿ ಸಾವ್‌ಮಿ ಹೇಳ್ರಿ ಅಂದ್ರುಪಾ ಅವ್ನೆಸ್ರು ಕುಂಡೇಶ್ವರ ಅಂತ ಇಕ್ರ ಅಂದ್ರುಪಾ. ಮಂದಿ ಯಲ್ಲ ಕುಂಡ್ಯಾ ಕುಂಡ್ಯಾ

ಅಲ್ಲತುರು. ಒಂದು ಮದಿ ಇತ್ತು ಬ್ಯಾಳಿ ಬ್ಯಾಳಿ ಅಂತ ಚೀರ್ಲತಿದ ಬ್ಯಾಳಿ ನೀಡಾಂವ್ ಬ್ಯಾರೇ ಊರಾಂವ ಅವ್ನಿಗಿ ಏಯ್ ಬಾಬು ಆ ಪಾರ್ ಎಯ್ಯೆಳಾಯಿತು ಕರಿಲತದ ಆ ಪಾರಗ ಹಾಕ್ರಿ. ಅಂತಂದ. ಯಾರಿ ಅಂದವ, ಬ್ಯಾಳಿ ನೀಡಾಂವ. ಆ ಪಾರಗರೀ ಕುಂಡ್ಯಾಗ ಅಂದ. ಹಾಂಯ್ ಯಾಕ್ರಿ ಕುಂಡ್ಯಾಗ ಅಂತನ್ ಆ ನೆಂಟ್ರಾವ್ ಏಯ್ ಅವ್ನಿಗಿ ನಡಿತದ ಹಾಕ್ರಿ. ಅಂದ ಅವಮತ್ ಸರಿಬರಿದಾಗ ನಿಂತ, ಈ ಕುಂಡ್ಯಾಗ ಬ್ಯಾರೆ ಮನ್ಯಾಗ ಕರ್ದುರು, ಅಲ್ಲಿ ಛಂದ ನೀಡ್ತಾರಂತ ಬಂದು ಆಪಾರ್ ಏಟ್ ಭ್ಯಾಡಭ್ಯಾಡಂತ ಅತ್ತುರಬೀ ಕಾಲ್ ಮ್ಯಾಲ್ ಮಾಡಿ ಕುಂಡ್ಯಾಗ ಫುಕ್ಕಿಲಿ ಬ್ಯಾಳಿ ಹಾಕ್ದುರ್. ಆ ನೆಂಟ್ರಾವ್ನಿಗಿ ನಾಹುಡಿ ನೀ ಹುಡಿ ಮಾಡ್ದರು.

## ೪. ರಾಜನು ಮದುವಿ ಆದ

ಇಬ್ಬರಣ್ಣತಂಬುರ ಇರ್ತಾರಂತಫಾ, ಅವ್ರಿಗಿ ಒಂದು ತಂಗಿ ಇರ್ತಾಳಂತಪ ಆಗ ಒಬ್ಬ ರಾಜಾ ಬ್ಯಾಟಿ ಆಡಕೋತ ಬರ್ತಾರಂತ ರಾಜಾ ಬ್ಯಾಟಿ ಆಡಾಗ ಒಂದ್ನೆಣ್ಮುಗುಳು ಬರ್ತಾಳ್ರಪಾ, ರಾಜಾ ಅಕಿಗಿ ನೋಡ್ತಾ ನೋಡ್ತಾ ಅಕಿನ್ನಿಂದೆ ಹೊಯ್ತಾನ್. ಆಕಿ ತೊರ್‍ಯಾಗ ಮೈ ತೊಳ್ಕೊಲಾಕ್ ಹೋದುಳ್ ಇವ ಗಿಡ್ಡಿಂದ ಮುಚ್ಕೊಂಡು ಖೂಡ್ತಾನ್ ಎಲ್ಲ ಎಲ್ಲ ನೋಡ್ತಾನ. ಆಗ ಆಕಿ ಮೈ ತೊಳ್ಕೊಂಡು ಹೊರಗ್ಬಂದುಳ್ ಅರ್ಬಿ ಉಟ್ಕೊಂಡು ಮನಿಗಿ ಹೋಗ್ತಾಳ, ಆಗ ರಾಜಾ ಓಡ್ಕೋತ ಬಂದು ಅಕಿನ ಸೀರಿ ಹಿಡ್ದುನ್, ಅಕಿ ಬಿಡು ಅಂತ ಚೀರ್ದುಳ್, ಬಿಡಾಲ್ಲತಿನೆ ಓಡ್ಕೊಂಡು ಹೋದ ರಾಜ. ಏಟಾದರ ರಾಜೇರ್ ನೋಡು

ಈ ಇಬ್ಬರಣ್ಣತಮ್ಮದೇರ್ ರಾಜಾನ ಬಲಿ ಹೋಗಿ ಕೇಳ್ಕೋತಾರ ರಾಜಾ ನಾ ನಿಮ್ತಂಗಿಗಿ ಮಾಡ್ಕೊಮಾವಿದ್ದ ಅಂದು ಟೋಪಿ, ಶಲ್ಯ ಮುಂಡಾಸಿ ಧೋತುರ್ ಮಾಡಿ ಹೊದ್ಕಿ ಮಾಡಿ ಖಳ್ತಾನ್

## ೫. ಗುಬ್ಯಾವ ಕಾಗ್ಯವನ ಕಲೆ

ಕಮ್ಲಾಬಾಯಿ ಚೇಂದ್ರೆ
ನಿಡೇಬಾನ ಭಾಲ್ಕಿ ತಾಲೂಕ
ವಯಸ್ಸು ೫೦

ಗುಬ್ಯಾವ ಕಾಗ್ಯವ ಅಂಗ್ನಿಗಿ ನಡ್ಡಿರಂತ ಹಾದ್ಯಾಗೊಂದು ಎತ್ಸತ್ತಿತಂತ ಎತ್ಸತ್ತದಲ ಅಂಗ್ನಿಗಿ ಹೋಗಾರೇ ಯಾನ್ ಇದೆ ತೊಕ್ಮಾರಿ ಅಂದಳು ಗುಬ್ಯಾವ್ ಗುಬ್ಯಾವಭೊಲೊಂದು ಭೊಲೊಂದು ಮೆತ್ತಾಂದ ಮೆತ್ತಾಂದ್ತೂಕೊಂಡುಳಂತ. ಕಾಗ್ಯಾವ ಕಣ್ಣು ಮೂಗು ಕಿವಿ, ತುಟಿ ಹಿಂಥಾದೆಲ್ಲ ತೊಕೊಂಡುಳಂತ. ಇಬ್ಬರು ಮನಿಗ್ಹೋಗಿ ಬ್ಯಾಳಿ ಮಾಡ್ದುರಂತ, ಗುಬ್ಯಾವುಂಧ್ಬೀ ಗಂಡ ಬಂದಂತ ಕಾಗ್ಯಾವುಂಧ್ಬೀ ಗಂಡ ಬಂದುನಂತ ಗುಬ್ಯಾವುನ್ ಪಲ್ಯ ಸೈಸೈ ಆಗಿತಂತ ಕಾಗ್ಯಾವಂದ ಪಲ್ಯ ಸೈಯ್ಯಾಗಿಲಂತ. ಕಾಗ್ಯಾವುಂದ ಗಂಡ ಹುಡಿಹುಡಿ ಹುಡ್ಡಂತ ಹುಡ್ದುರ್ ಕಾವ್ ಕಾವ್ ಕಾವ್ ಮಾಡ್ಕೊತಾ ಒಬ್ಬುರ ಮನಿಮುಂದ ಹೋಗಿ ಒಳ್ಳತಂತ. ಒಳ್ಕೋತಾ ಖುಂತುತಂತ ಅಲ್ಲಿಬ್ಬರ ಅತ್ತಿಸೊಸಿ ಇದ್ದುರಂತ ಒಂದ್ಮನ್ಯಾಗ ಅವ್ರತ್ತಿ ಸೊಸಿ ನೆಂಟುರ್ ಊರಿಗಿ ಹೋದುಳಂತ ಊರಿಗ್ಹೋಗಾಣ ಕಾಗಿ ಒಳ್ಯಾದ್ ನೋಡಿ ಯಾರೊ ಯಾನೊ ನೆಂಟುರ್

ಬರ್ತಾವೊ ಯಾನೊ ಯವಾ ಅವ್ರ ಬರಾಸ್ತಾನ ಸಾವ್ಗಿ ಮಾಡ್ಕೊಂಡು ಉಣ್ಣೇಕಂದಿಳು ಯಾಕಂದರ ಅತ್ತಿ ಕುಡಾಲಾ ಯಾನ್ನಿಲ್ಲ ಅಂತಂದ. ಅಲೊಂದು ಮುದ್ಕಿ ಎಮಗ ನನಗ ಜರಾ ಹೇನ್ನೊಡೆ ಅಂತ್ಪಂದುಳಂತ ಬರಾಣ ಅಯ್ ಇದುಯಾನ್ ಮುದ್ಕಿಯವಾ ಉಂಬಾರಂತ ಖಿಂತರ 'ಹೇನ್ನೊಡೆ ಅಂತ ಬಂದಿನ್ಕಡಿಂದ ಬಯ್ಡ್ ಳಂತ. ಅಯ್ ನೋಡೇ ಮಗ ತೋಲ್ ತೋಲ್ ಕಚಲತದ. ಕಿಲ್ಕಿಚಲತದ ಕಲ್ಕಿಚಲತದ ನೋಡಂದರ ಎತ್ತರ ಫಿತ್ತರ ನೋಡ್ಡುಳಂತ ಒಂದ್ಬೀ ಹೇನಿಲ್ಲ ಆಯಿ ಹೋಗಂದುಳಂತ.

ಗಡ್ಗಿ ತೆರ್ದು ನೋಡಾಸ್ತಾನ ಶಾವುಗಿ ಗಡ್ಗಿ ಹೇನೇ ಆಗ್ಪಂತಾವಂತ ಗಡ್ಗಿಯಲ್ಲ. ಅಯ್ ಮುದ್ಕಿಗಿ ಹೇನ್ನೋಡಾಲ್ದರ ಹಿಂಗಾಯ್ತುಲ ಅಂದು ಹೊರಾಗ ಬಂದು ಬಾರ್ ಆಯಿ ಹೇನ್ನೋಡ್ತಾ ಅಂದುಳಂತ. ಹೇನ್ನೋಡ್ಡುಳಂತ ಛಂದ್ ಒಂದೊಂದಿಕ್ಕಾಲಗತಿ ತೆಗ್ದುಳಂತೆಲ್ಲ. ಹೋಗ್ನೋಡಾಸ್ತನ ಗಡ್ಗ್ಯಾಗ ಶಾವ್ಗಿ ಆಕ್ಪುಂತದಂತ ಉಂಡುಳಂತ ಹೊಟ್ಟುಂಬ ಉಂಬಾಣ ಪೆಟ್ಟಗಿ ಯಾನ್ಯಾನ ಉಂಡಾಳೊ ಅಂತ ಅತ್ತಿ ಬಯ್ತಾಳೊ ಯಾನೊ ಅಂದು ಕುಂಡಿಗಿ ಮ್ಯಾಣ ಮೆತ್ಕೊಂಡುಳಂತ ಮೊಕೊಂಡುಳಂತ ಮೊಕೊಮಣ ಅತ್ತಿ ಬಂದೆಬುಸ್ದುಳಂತ ಏಟ ಎಬ್ದುರ್ದ ಏಳಾಳ್ಳಂತ ಕಣ್ತೆರೆಳ್ಳಂತ ಅತ್ತಿ, ಸೊಸಿ ಸತ್ಪೋಗ್ಯಾಳಂತ ಸುದ್ದಿ ಖಳ್ಸಿ ಮ್ಯೆ-ಗಿ ತೊಳ್ದು ಮಣ್ಣಾಮ್ಲಾಕ ತೊಕೊಂಡ್ಹೋಗ್ದುರಂತ ಹೆಣ, ಒಯ್ಯಾ ಪರಿ ಟವ್ವಿವಿ ಒಳ್ಕೊತ್ ನಡಿತಂತ. 'ಟಿವ್ ಟಿವ್ ಟ್ಯಾಣಾ ಗಾಂಡಿತ ಮಾಣಾ ರಾಂಡಾಚ ಕವಸಾಲ ಕುನಾಲಾ ಕಳ್ನಾ' ಟಿವ್ ಟಿವ್ ಟ್ಯಾಣಾ ಕುಂಡ್ಯಾ ಮ್ಯಾಣಾ ರಂಡೆಯ ನರ್ತನ ಯಾರಿಗೂ ತಿಳಿಯಲ್ದು ಅನ್ಕೊತ ನಡಿತಂತ ಒಯ್ದು ಹೆಣ ಇಳುಸ್‌ದುರಂತ ಟವ್ವಿವಿ ಹಾಂಗೆ ಒಳ್ಯಾತಂತ್ ಒಬ್ಬ ಮನ್ಸ್ಯಾ 'ಏಯ್ ಯಾನೊ ಹೇಳತದ ನೋಡ್ರೊ ಅಂತ ಅಂದಂತ. ಅಕೊ ಮ್ಯಾಣ ಅದಂತ ಕುಂಡಿಗಿ ಅಂದು ತೆರ್ದು ನೋಡ್ದುರಂತ ಈಸ್ ಶಾವ್ಗಿ ಬಿದ್ದು ಅಂತ ಆಕಿಗಿ ಜಿವ ಬಂತಂತ. ಅಯ್ ಈಗ್ಯಾತ್ ಕ ಒಯ್ಯಾರಿ ಮನಿಗಿ ಅಂತ ಅಲ್ಲೆ ಘುಡ್ಸಿ ಕಟ್ಟಿ ಇಟ್ಬುರಂತ ಆಕಿನೆ ಲಮಣ್ಣೇರಾಕಿ ಆದುಳಂತ.

## ೬. ಶಟ್ಯಾವ್ ಬರ್ದುಳ್ ಹಣೆಬಾರ್

ಕಮ್ಲಾಬಾಯಿ ಬೇಂದ್ರೆ

ಇಬ್ಬರ್ತಾಯಿ ಮಗಳು ಇದ್ದುರಂಥ. ತಾಯಿ ಹೆಸರು ಶೇಟ್ಯವ್ ಇತ್ತಂತ ಆಕಿ ಧಿನ್ನss ಮಂದಿ ಹಣೆಬಾರ ಬರಿಲಾಕ ಹೊಯ್ತಿಳಂತ ಮಗಳು ಏಳಾಸ್ತಾನ ಆಕಿ ಇರ್ತಿಲೆ ಅಂತ. ಒಂಧಿನ ಎತ್ತ ಹೊಯ್ತಾಳ ನೋಡಾರಂತ ಎಚ್ಚುssರ್ಕಿ ಉಳ್ದುಳಂತ ಆಕಿ ಹೋಗಾಯಾಳಿ ಮಗ್ಳು ಶಗ್ರ್ಹಿಡ್ದುಳಂತ ಹೋಗಾಪಾರಿ ಯಾರಿಗ್ಬೀ ಮಾತಾಡ್ಸಿಲಂತ ಶರುಗೆ ಬಿಡು ಭೇಗಿ ಹೋಗಾದದ ಅಂದರ್ ಬಿ ಶರುಗ್ ಬಿಡಾಲೇ

ಹೋದುಳಂತ. ನಾಮಂದಿದೆಲ್ಲ ಹುಟ್ಟಿಂದ್ಮುಸುಗುಳ ಹಣೆಬಾರ ಬರಿಲಾಕ್ ಹೊಯ್ಯಾ ಬಿಡು ಅಂದುಳಂತಾಕಿ. ಮಂದಿದೆಲ್ಲ ಬರ್ದಿದಿ ನನ್ನ್ಯಾಕ್ನಬರ್ದಿದಿ ಹೇಳು ಅಂಬಾಣ ನಿಂದ್ಮ್ಯಾಂಗ ಬರ್ಯಾದಿತ್ತು ಬರ್ದಿದ ಅದು ಹೇಳಾದಿರಾಲ ಬಿಡು ಅಂದುಳಂತ. ಕೇಳಾಲ್ಹೋಗಾಣ ಹೇಳ್ದುಳಂತ ಯಾನಂದರ ನಿನ್ಗ ಮದಿಯಾಗಲ್ದೆ ಒಂದ್ಮಗ ಹುಟ್ತಾನ ಅವನ್ಸರಿನೆ ನಿನ್ಮ್ದಿ ಆಯಿತ್ತದಂದುಳ್ ಮದಿಯಾಗಲ್ದನೆ ಹ್ಯಾಂಗ ಮಗಾ ಹುಟ್ತಾನ ಹಿಂಗ್ಯಾಕ್ಹಾಂಗ ಬರ್ದಿ ನೀ ಅಂದುಳಂತ ಅಕಿ ಹೋದುಳಂತ. ಹಿಂಗ್ಯಾಕ್ಹಾಂಗ ಆಯ್ತುದ ಅಂತ್ಹೇಳಿ ಧೂರ್ ಧೂರ್ ಭಂದಾಂದು ಭಂಗಾರ ಸೀರೆ ಉಟ್ಕೊಂಡ ಕಾಡಿನಾಗ ಹೋದುಳಂತ. ನಂಗ್ಯಾ ಮಾರ್ಡ್ಕೊತಾವ ಅಂದು. ದೊಡ್ಡದು ಆಲ್ಗಿಡಾ ಏರ್ಬಿಂತುಳಂತ ಯಾರಿಗ್ಬೀ ಕಾಣ್ಸಾಲದಂಗ. ಅದು ಸಿವ್ನಿಗಿ ಕುದಿ ಬಿತ್ತಂತ. ಇದು ಆಗೇ ಬೇಕಾಯ್ತದ. ಅಂದು ನೀರಿನ ಕಾಲ್ವಿ ಹರ್ಸ್ದನಂತ ಕಾಲ್ವಿ ಹರ್ಯಾದ ಕೇಳ್ಬಂತಂತ ತೆಳಗಿಳ್ದುಳಂತ ಸರ ಸರ ಒಡ್ಯಾಡ್ದುಳಂತ ಯಲ್ಯಾವ ನೀರಂತ. ಯಲ್ಬೀ ನೀರೆ ಕಾಣ್ಸಲಂತ ಮತ್ತ ಪುನಾ ಗಿಡಾಏರ್ಬಿಂ ತುಳಂತ. ಸಿವ್ನಿಗಿ ಕುದಿ ಬಿದ್ದು ತಾನೇ ಇಳ್ದನಂತ ಅಲ್ಲಿನ್ ನಿರ್ಕೊಂಡು ಗಿಡ್ಯಾಳಗಿಂದು ಹೋಯ್ಯಾ ಹೋಯ್ಯಾ ಈಗ್ ನೀರು ಸಿಕ್ಕುನೋಡು ಆ ಮಾಯ್ನಗಿಡ ಕ್ಯಾಳಗವ ನೀರು ನಾ ರೋಜ್ ಇಲ್ಲೆ ಬರ್ತಾ ಅಂತ ಅನ್ಕೋತ ಹೋದುನಂತ. ಅದು ಕೇಳ್ದುಳಂತಾಕಿ ಹಾಂ ಆ ಮಾಯ್ನಗಿಡ್ಕೆಳಗ ನೀರಾವ ಅಂತ್ಪುನಾ ಆಯ್ತುಂತಾಕಿಗಿ. ಈಗ್ಯಾಂಗ್ಮಾಡ್ಬೇಕು ನೀಡ್ಕಿರಾ ಆಗ್ಯಾವ್ ಖರೆ ಆವ ಹೋಗಾಣ ಕುಡಿಬೇಕಂದಿಳು. ಅವ ಹೋಗಲ್ಹೋದುನಂತ. ಹೋಗಾಲ್ಹೋಗಾಣ ರಾತ್ರಿಯಲ್ಲ ಹಂಗೆ ಖುಂತುಳಂತ ಹಾಂಗೆ ಖೂಡಾಣ ಮುಜೆನತ ಗಿಡಾ ಇಳ್ದು ಹೋಗಾಥನ ಅಲ್ಲಿ ಗುಂಡಾ ಕಾಣ್ಸುಂತ ಅಲ್ಲಿ ನೀರಿದ್ದು. ನೀರು ಭೋಲೊಭಲೊ ಅವ ಅಂದಳಂತ ನೀರ್ಬಲ್ಲೆ ಖುಂತುಳಂತ ಖೆಮ್ಮಿ ಖ್ಯಾಕುರ್ಸಿ ಉಗುಳಿ ಉಚ್ಚಿ ಹೊಯ್ದು ಕೊಂಡು ಹೊಟ್ಟಿ ನಿಂತುತಂತ. ಧಿನಕೊಂಧಿನ ಆಗಿ ಧಿನಾ ಬಂದು ಅಂತ ತೆಳಗ ಇಳ್ದುಳಂತ. ಕೂಸ್ಹುಟ್ಟಂತ ಆ ಮನ್ಸ್ಯಾಕ್ನಹ್ಹಂತದೆ ಚೆದುರ ಚೆದುರ ಮುದ್ದಿ. ಈ ಕೂಸು ಹುಟ್ತಲ ಗಂಡಿಲ್ದೆ ಕೂಸ್ಹುಟ್ಟು ಅಂಬಾಣ ಭಂಗಾರ ಸೀರಿ ಶರ್ಗು ಹರ್ದು ಮಂಗುಸಿ ಬ್ಯಾರೆ ಗಿಡ್ಯಾಕ್ಳ ಹೋಗಿ ಖುಂತುಳಂತ ಗಿಡ್ಯಾಳಾಗಿಂದ ಒಂದ್ಯಾವ ಹೊಯ್ತಿದಂತ ಆ ಕೂಸಿಗಿ ನೋಡ್ದಂತ. ನೋಡಿ ಕೂಸಿಗಿ ತೊಕೊಂಡ್ಮನಿಗಿ ಹೋದುನಂತ. ಆಗಾಣ ಆಕಿ ಕುಂತಿನ್ಗಿಡ್ಯಾಕ್ಳಗಿಂದಾಗಿ ದೋಸ್ತುರಿಗಿ ತೊಕೊಂಡು ನಾ ಹಿಂತಾ ಹೆಣ್ತಿಗಿ ಮಾಡ್ಕೊತಾ ಆಕಿ ಯಾರ್ಯಾರಿಗಿ ಕಾಣ್ಸ್ಯಾಕ್ಡದ್ದು ಹಂತಾಕಿಗಿ ಮಾಡ್ಕೊತಾ ಅಂದಿನಂತ ಇವ ಹೀಂಗಲತಾನ ಯಾರಾವ ಇವ ಆಂತಂದು ಹೋಗಾಪರಿ ಭಂಜಿಕಿ ಅವಿನ್ಹಿಂದಿಂದೆ ಹೋದುಳಂತ ಹಿಂತಾಕಿ ಭೊಲೊನಾಕಿ ಬಂದುಳಲ ಅಂದು ಭಂದ್ ಭಂದ್ ಹಳ ಅಂತ ಆಕಿಗ್ಬೀ ಅವ್ನಿಗ್ಬೀ ಇಟ್ಕೊಂಡುರಂತ ಎಲ್ಲ ಮಂದಿ ಮದಿಗ ಬಂದುರಂತ. ಬರಣ ಅವರ್ರೊವ ಬೀ ಬಂದುಳಂತ ಮದಿಗಿ ಬಂದು ಲಗ್ಗುಣ್ಹಾಚ್ಚಿ ಯಾರ್ಮನಿಗಾವ್ರು ಹೋದುರಂತ. ಹೋಗಾಣ ರಾತ್ರಿ ಪಲಂಗ್ಯಾಕ್ಲೆ ಮೊಕೊಂಡುರಂತ. ಮೊಕೊಮಣ ಪೆಟ್ಟಿಗೆ ಒಂದ್ನಿದ್ದಿ

ಆಯ್ತಂತ. ನಿದ್ದಿ ಆಗಾಣ ಸೀರಿಸೆರ್ಗು ನೋಡ್ದುಳಂತ ಭಂಗಾರ ಸೆರುಗ್ ಕಟ್ಟಿಂದು. ಆದು ಸೀರಿ ಸೆರ್ಗು ನಂನ್ದೆ ಅದ ಅಂದುಳಂತ ಅದರ ಅವ ಇದ್ರಾಗ ಯಾರೊ ಒಂದ್ಮುಸು ಮಂಗ್ಸಿ ಹೋಗಿರು. ಆ ಕೂಸೇ ನಿನ್ನಂಡೆ. ತಂದು ಸಲುಕೊಂಡಿದೆವೆ. ಅಂದುಳಂತ ಆ ಮದಿಮಗನವ್ವ ನಮ್ಮವ್ವ ಶಟ್ಯಾವ ಹೇಳಿಂದ್ ಮಾತು ಖರೆ ಆಯ್ತಂತ. ಪರೇಶನ್ ಆದುಳಂತ್.

## ೭. ಕಂಬುರ್ಬ್ಯಾಳಿ ಖಮ್ಮಾನ್ಬ್ಯಾಳಿ

**ಕಮಲಾಬಾಯಿ ಬೇಂದ್ರೆ**

ಇಬ್ಬರ್ಗಂಡ ಹೆಣ್ತಿ ಇರ್ತಾರಂತ. ಮತ್ತೊಂದ್ಮನ್ಯಾಗ್ಬಿ ಗಂಡಾಹೆಣ್ತಿ ಇರ್ತಾರಂತ. ಈ ಇಬ್ಬರ್ ಹೆಣ್ತಿದೇರ ಬ್ಯಾಳಿ ಮಾಡ್ತಾರಂತ ಒಬಾಕಿನ್ ಬ್ಯಾಳಿ ಫೋಣ್ಣಿ ಹುಡ್ಡಿಂದೆ ಘಾಣಿ ಖಮ್ಮಗ ಖಮ್ಮಗ ಬರ್ತದಂತ ಒಬಾಕಿನ್ಬ್ಯಾಳಿ ಕಂಬುರ್ ಘಾಣಿ ಬರ್ತದಂತ. ಕಕಿ ಏಟ್ಟಮ್ಮುಗ ಮಾಡ್ಯಾಳ. ಫೋಣ್ಣಿ ಹುಡ್ಡಿಂದೆ ಘಾಣಿ ಈಟ್ಟಂದದ ಕಕಿನ್ಗಂಡ ನಾ ಹೊಂಟಿದೇವ್ ಯಣ್ಣಿಗಿ ರೊಕ್ಕಾ ಇಲ್ಲಂದರ ಖಾಲಿ ಚ್ಯಾರಾಣಿನೆ ಕೊಟ್ಟಾನ್ರೊಕ್ಕಾ. ಮುರ್ಕುಸ್ಕೋತ ಮುರ್ಕುಸ್ಕೋತ ಲುಗು ಲುಗು ದುಕಾನ್ಕ ಹೋಗಿ ತಂದು ಓಟ್ಟಂದ್ಬ್ಯಾಳಿ ಮಾಡ್ದುಳ್. ನೀ ನೋಡು ಟೀಣಿಗ್ ಟೀಣ್ ಯಣ್ಣಿ ತಂದರ್ಬಿ ಈಟ್ಟರಾಬ್ ಬ್ಯಾಳಿ ಮಾಡಿದಿ ಅಂದು ಹುಡಿ ಹುಡಿ ಹುಡ್ದುನಂತ.ಮರ್ಧಿನ ಇಕಿ ಝುಗ್ಗಾ ತೆಗ್ದುಳು ಕಕಿಗಿ ಎಲ ಛಿನಾಲಿ ನಿನ್ನಂಡ ಖಾಲಿ ಚಾರಾಣಿ ರೊಕ್ಕ ಕೊಟ್ಟರ್ ನನ್ಗಂಡುನ್ಮುಂದ ಮುರ್ಕುಸೇ ಮುರ್ಕುಸಿದಂತ ಯಾಕ್ಮಾರಂಡಿ ನನ್ಗಂಡದೆ ಘೂಟ ನಿಬ್ಬರ ಕಾಣ್ಸಲತದ. ನನ್ಗಂಡನ್ಮ್ಯಾಲ ಯಾಕ ನಿನ್ನಕಣ್ಣು. ಅಂತ ಕೈ ಮಾಡಿ ಬೈಯ್ಯಾಕ ಸುರು ಮಾಡ್ದರ ಕಕಿಗ್ಬಿ ಸಿಟ್ಬುಂತು ನನ್ಗಂಡನ್ಬಲ್ಲಿ ಯಾನ್ಕಮ್ಮಾದಾ ನಿನ್ಗಂಡಗ ನೋಲ್ಯಾಕ. ಹೀಂಗ್ವೆದಿರಿ ಝುಗ್ಗಾ ತೆಗಿತಿ. ನಾಳಿಗಿ ನನ್ಗಂಡ ಯಮ್ಮಿ ತರ್ತಾ ಅಂದಾನ ನೀ ಮಜ್ಗಿ ಗ್ರಾ ಬರಾಟಿ ಸೂಳಿ ಚಪ್ಲಿ ಹಚ್ಚಿ ಮೆಲ್ಕಿನಾಗ ಕುಡ್ತಾ. ಹೋಗ್ಮಾ ಹೋಗು ನನ್ಗಂಡ ಹೊಲ ಮಾಡ್ತಾ ಅಂದಾನ ನಿ ಯಮ್ಮಿ ತೊಕೊಂಡ್ಕಟ್ಟಿಗರಾ ಬರಾಟಿ ಅಂತ ಝುಗ್ಗಾ ದನ್ಕಿ ನಡಿತು. ನೋಡ ಸುಮ್ಮುಸುಮನೆ ನಡಿತ್ನೋಡ್ರಿ ಝುಗ್ಗಾ. ಆಕಿನ್ಗಂಡ ಯಮ್ಮಿ ತೊಕೊ ಮಾಲ ಇಕಿನ್ಗಂಡ ಹೊಲ ಮಾಡಾಲ್

## ೮. ಹರ್ಯಾನಾರ್ಯಾನ ಕತಿ

**ಬಾಬುರಾವ್ ಮುಂಗ್ಯೆ ಎಕಲಾಸಪೂರವಾಡಿ**

ಹೀಂಗೊಂದೂರಾಗ ಇಬ್ಬರ್ಗಂಡಾಹೆಣ್ತಿ ಇದ್ದುರಂತ. ಗಂಗ ಹೆಣ್ತಿಮಾಲ್ಬರೋಸಿನೇ ಇದ್ದಿಲಂತ. ಯಾಕಂದರಾ ಅವ ಮುಂಜೆಳಿ ಹೋದಾವ ಪುನಾ ರಾತ್ರಿ ತಡಾ ಮಾಡೇ ಬರಾವ. ಬರಾಸ್ತನ ಇಕಿ ಉಂಡ್ಬೂಡಾಕಿ. ಅದ್ಕವ ನೀ ಯಾಗೋತರ ನಾ ಬರಾಸ್ಥನ ಖಂತಿದಿ ಬಿಟ್ಬಿಟ್ ಬಿಟ್ಬಿಟಿ ಉಣ್ತಿಂದಂತ

ಸುಮ್ಮನ ಯಾಗಾರಾ ಗಂಡ್ಸಂದಿನ್ಮ್ಯಾಲ ಉಂಬಾರಂತ ಯಾಗೊತರಾ ಹುಟ್ಯಾದ ನಿನ್ಮನ್ಸಿನಾಗ ಅಂದು ಬೈಯ್ಸಂತ. ನಾ ಬರಾಥನಾ ಯಾರ್ಯಾರರಾ ಸಂಗಟ್ ಉಣ್ತಾಳಿಕಿ. ಯಾರ್ಯಾರ ಸಂಗಟ್ ಉಣ್ತಾಳೊ ಯಾರ್ಯಾರ ಸಂಗಟ್ ಮಾಕ್ತಾಳೊ ಅಂತ ಶಕ್ ಹಿಡಿಲತ. ಆಕಿ ನಾ ಹಂತಿಕಿಯಿಲ್ಲವ್ವ ಅಂತ ಖರೆ ಮಾಡ್ಸೇಳಾಕಿ.

ಹಿಂಗೆ ಒಂಧಿನಾ ಗಂಡಂದ ನಾ ಬರಾಥನಾ ನೀ ಉಣ್ಬ್ಯಾಡ ನಾ ಬರಾಣಾನೆ ಇಬ್ಬರು ಖುಸಿಲಿ ಉಂಬಾರಂದ. ಅಯ್ ಯಾಕಾಗಲ ಅಂತಂದು ಭಂಜಿಪಾರಿ ತರಿತರಿದ ಅಡ್ಗಿ ಮಾಡ್ತಾಳ ಉಳ್ಯಾಕ್ಗಂಡನ್ಹಾದಿ ನೋಡ್ತಾಳ. ಬರ್ತಾಂದಿದು ಯಾಳಿ ಖತಮ್ಮಾಯಿತು ರಾತ್ರಿ ಈಗ್ಬರ್ತಾನೆನೊ ಅಂತ ಗಂಗಾಳ್ಮಾಡಿಟ್ಟುಳ್ ಎಡ್ವ. ಹಾದಿ ನೋಡ್ನೋಡಿ ಒಂದ್ಗಂಗಾಳ ನೀಡಿಂದೆ ಹಾಂಗೆ ಬುಟ್ಟಿ ಬಾಳ್ಯಾಕೆ ಮತೊಂದ್ಗಂಗಾಳ ಇತ್ತಲ ಅದು ಉಂಡುಳ್. ಹಾಸ್ಕಿ ಮಾಡಿಂದಿತು ಗಂಡ್ಬರಾಥನಾ ಸುಮ್ಮನ್ನಡ್ಡಾಗಾರಂತ ಅಡ್ಡಾದುಳ್ ಹಾಂಗೆ ನಿದ್ದಿ ಹತುತ ಒಂದ್ಝಂಪಾಯಿತು. ಓಟ್ರಾಗ ರಾತ್ರಿ ಕಳ್ಳರು ಬಂದಾವ ಹರ್ಯಾ-ನಾರ್ಯಾ ಅಂಬವ್. ಹರ್ಯಾ ಯಾನ್ಮಾಡ್ತಿದಂದುರಾ ಕಳೊಂಟ್ಕಿ ಮಾಲ್ದಾಕ ಹೋಗಿನ್ಮನ್ಯಾಗ ಪೈಲೆ ಉಂತಿದ. ಅಬ್ಬಾ ನೀಡಿಂದೆ ಗಂಗಾಳದ ಅಂತದು ಖೂಬ್ ಉಂಡು ಢೇಕರ್ಕಿ ಹುಡ್ದ ಓಟ್ರಾಗ ಇಕಡಿ ನಾರ್ಯಾ ಯಾನ್ಮಾಳತಂದುರ ಎಲ್ಲ ಸವುರ್ಸಾಲಾತುನ್ ಓಟ್ರಾಗ ಆಕಿನ್ಗಂಡ್ಬಂದಪ ಯಾನ್ಮಾಟ್ತಾರ ಹರ್ಯಾ ಖಸ್ರ್ಯಾಗ ಮುಚ್ಚುಂತ ನಾರ್ಯಾ ಮಾಳ್ಗಿ ಸರಕ ಮೆತ್ಕೊಂಡ್ಸುಂತ ಬಂದ್ನೋಡ್ತಾನ 'ಹಾಂಅ ಒಂದ್ಗಂಗಾಳ್ ಇಕಿಂದು ಹಿನೊಂದು ಯಾರ್ದು? ಅತಂದು ಎಬ್ಸಾನ್ ಏಯ್ ಛಿನಾಲ್ಚೋದಿ ಏಳ್. ಈ ಗಂಗಾಳ್ ಯಾರ್ದು ಅಂದರ ನಂದಂದುಳು. ಮತೊಂದ್ಗಂಗಾಳ ಯಾರ್ದು ಅಂತ ಕೇಳ್ಕೋತೆ ಹುಡಿಲತ ಹರ್ಯಾಗ ನಗುಬಂತು ಖಸ್ರ್ಯಾಗಿಂದು ಖುಲುಕಂತ ನಕ್ಕ ಇವ 'ಹಾಂಹಾ ಯಾರೊ ನಕ್ಕ್ಯಾಂಗಾಯ್ತಲ ಅಂತ ತೋಲೆ ಹುಡಿಲಾಕ್ ಸುರು ಮಾಡ್ದುರ ಯಾರುಂಡಾವೊ ಯಾನೊಯವ ನಂಖೂನಾ ಇಲ್ಲಿ ಮ್ಯಾಲಿಂದು ನಾರಾಯಣಗೆ ಖೂನ ಅಂದುಳ್. ಆಗ್ ಮ್ಯಾಲ್ಮೆತ್ಕೊಂಡಿದ ನಾರಾ ಅಂತಾನ ಏನಪ್ಪಾ ನಾ ಉಂಡಿಲೊಸಿವಾ ಖಷ್ಯಾಗ್ಬುಂತಾನೋಡ ಆವ ಉಂಡಾನಂತ ಮ್ಯಾಲಿಂದ್ಬಿಡ್ದ ಇಬ್ಬರ್ಬಿ ಗಂಡಾ ಹೆಣ್ತಿ ಘಾಬ್ರಿ ಬಿಳ್ತಾರ್. ನಾರ್ಯಾ ಕಟ್ಟಂದ್ಗಂಟು ತಂದು ಅವುರ್ಮುಂದಿಟ್ಟು, ಹರ್ಯಾ, ಹರ್ಯಾ ಏಳೊಯಪ್ಪಾ ನಾವ್ಹೋಗಾರಿ ಇವ್ರು ಜಿಂದ್ಗಾಣಿ ಇವುರ್ಸ್ಗರಿ ಅಂತಂದು ಎಲ್ಲ ಬಿಟ್ಕೊಟ್ಟು ಓಡ್ಹೋದುರ. ಆಗಿನ್ಹಿಡ್ದು ಇವ ಶಕ್ ಮಾಡಾದು ಬಿಟ್ಕೊಟ. ಮುಂದಿಬ್ಬರ ಸುಖದಿಂದಿದ್ದ ಮಕ್ಕುಳ್ಹಡ್ದುರು ಮದಿ ಮಾಡ್ದುರು ಛಂದುಳ್ದುರು. ಖರೆ ನೋಡ್ದೇಕಾದರ ಶಕ್ ಮಾಡ್ಬ್ಯಾಡ್ದು ನೋಡು.

# ೯. ರಾಜಾನ್ಮಗಾ ಪರದಾನಿ ಮಗಾ

ಲಕ್ಷ್ಮೀಬೇಂದ್ರೆ
ವಯಸ್ಸು ೩೦

ಹಿಂಗ್ ಒಬ್ ರಾಜಾ ಇದ್ದನು. ಅವುನಿಗಿ ಒಬಾಂವ ಪರದಾನಿ ಇದ್ದನು. ರಾಜಾನ ಮಗಾ ಬೀ ಪರದಾನಿ ಮಗಬೀ ಸಾಳಿ ಬರಿಲಾಕ ಹೊಯ್ತಿವ್. ಇಬ್ಬರಿಗಿ ಬೀ ಮದಿ ಆಗಿತ್ತು. ಇವಿಬ್ಬರು ಸಾಳಿಗಿ ನಡ್ದರ್ ಒಂಧಿನ ರುಸಿ ಗಂಟ್ ಬಿದ್ದ; ಆ ಸಾಳಿ ಮುಂದ. ರುಸಿದು ಕುದ್ರಿ ಮ್ಯಾಲ ಮೂಗರಿಗಿ ಸಾಕಾಗೋಟ್ ಮೂರ್ ಊಟಾ ಇತ್ತು. ಒಂದು ಊಟಾ ಕುದ್ರಿಗದ. ಹಿನಾ ಎಡ್ ಊಟಾ ಯಾಕಾ? ಅಂತ ರಾಜಾನ ಮಗ ಕೇಳ್ದ ಅಂದುರ ಪರದಾನಿ ಮಗನ್ ಖಿನ್ನ ಮುಂದ ಮಾತಾಡ್ದ. ಅದಕ್ ಅವ ರುಸಿ 'ಮೈ ನೆರ್ದಿನ ಹೆಂಡ್ರಿಗಿ ಬಿಟ್ಟು ಯಾರಿರ್ತಾವ ಅವ್ರು ಕುಂಡ್ಯಾಗ ತುರ್ಕ್‌ಲಾಕ ಅಂತ್ ಹೇಳ್ದನ್.

ರಾಜಾನ್ ಮಗ್ನಿಗಿ ಸಿಡುಲ್‌ಬಡ್ದಾಹಂಗ್ ಆಯ್ತು. ಯಾಕಂದುರ ಇವುನ್ ಹೆಂಡ್ತಿ ಮೈನೆರ್ದು ತೋಲ್‌ಧಿನಾ ಆಗಿವ್. ಅದರ ಆಕಿನ ಮಾರಿನೆ ನೋಡಿಲ ಇಂವ. ಈಗ ಯಾನ್ಮಾಡ್ಬೇಕಂತ ಹೆಂಡ್ತಿ ಊರಿಗಿ ಕುದ್ರಿ ತಿರ್‌ಗಿಸ್ದ. ಹಿಂಗೆ ಪರದಾನಿ ಮಗಬೀ ಹೋದ. ಅವನ್ ಹೆಂಡ್ತಿಬೀ ಮೈನೆರ್ದು ತೋಲೆ ಧಿನಾ ಆಗಿತ್ತು. ರಾಜಾನ್ ಮಗ್ನಿಗಿ ಒಂದು ಮುದ್ಕಿ ಬಂದ್ 'ಐ ಈಗ್ಬಂದಿ ಮಗಾ ಹೆಂಡ್ತಿ ಮೈನೆರ್ದು ಏಸು ಧಿನ ಆಯ್ತು? ಅಂತು ಈಗೆ ಖಿನಾ ಆಯ್ತು; ಖಿನಾ ಆಗಿನ ಘಳ್ಗಿನೆ ಬಂದ ಅಂದ. ಹಿನಾ ರಾಜಾನ್ ಮಗ ಹಣಮಂದೇವ್ರು ಕಟ್ಟಿಮ್ಯಾಲ ಖುಂತಿದ. ಮುದ್ಕಿ ಹೋಗಿ ತಿಳುಸ್ದುಳ. ಅವ್ರು ಅತ್ತಿಮಾಂವುಗ್. ಅವುನ್ ಮಾಂವ ಊರಾಗ ನಾಕ್ ಹಳ್ಳಿಗಿ ಮೆರ್ದಾವ್. ಬಡ್ಕೋತ್ ಭಾರಸ್ಕೋತ್ ದಂಡಿಗಿ ದಂಡು ಬರ್ತುದ ಕರಿಲಾಕ್. ಮೈಕೈ ತೊಳ್ಸಿ ಊಟ ಮಾಡುಸ್ತಾರ. ಪರದಾನಿ ಮಗಬೀ ಇವುನ್‌ಹಿಂದ್‌ಹಿಂದೆ ಇರ್ತಾನ್.

ಮೈನೆರ್ದು ತೋಲ್ ಧಿನಾ ಆಗಿನ್ ಕಡಿಂದು. ಇಕಿಗಿ ಜವಾನಿ ತಾಳಾಲ್ದೋಗ್ಯಾದ. ಅದಕ ಆಕಿ ಯಾನ್ಮಾಡ್ತಾಳಂದುರ್ ಅಲ್ಲೆ ದುಕಾನ್ನಿರಿ ಬಾವಾ ಇರ್ತಾನ್ ಅವುನ್ ಸಂಗ್ ಮಾಡ್ಬೇಕಂತಾಳ ಮಾಡ್ತಾಳ್ ಯಾನ್ಮಾಡ್ತಾಳಂದುರ್ ಅಲ್ಲೆ ದುಕಾನ್ನಿರಿ ಬಾವಾ ಇರ್ತಾನ್ ಅವುನ್ ಸಂಗ್ ಮಾಡ್ಬೇಕಂತಾಳ ಮಾಡ್ತಾಳ್

ಬೀ. ಯಾರ್ ಸುಮ್ಮುಕ್ ಇರ್ತಾವ ಯಾಳಿ ಖರಾಬ್ ಬಂದುದ ಈಗರಾ ಪೋರಿಗುಳ್ ಟಿ.ವಿ ಬಂದುದ ಬೀ. ಯಾರ್ ಸುಮ್ಮುಕ್ ಇರ್ತಾವ ಯಾಳಿ ಖರಾಬ್ ಬಂದುದ ಈಗರಾ ಪೋರಿಗುಳ್ ಟಿ.ವಿ ಬಂದುದ ಹಿಡ್ದು ತೋಲ್ ತೋಲ್ ಕೆಟ್ಟಾವ. ರಾಜನ್ ಮಗ್ನಿಗಿ ಹಾಸ್ಗಿಮಾಡ್ದುರು ಗಂಡಾ ಹೆಂಡ್ತಿಗಿ ಒಂದ್ ಮಾಡ್ಬೇಕಂತ ಮಂಗುಸ್ತಾರ. ಇಕಿಗಿ ಇದು ಹಳೆದೆ. ಪರದಾನಿ ಮಗ್ನಿಗಿ ಪರದಾನಿ ಯಾವಸ್ತ ಮಾಡ್ತಾರ. ಅಂವ ಒಬ್ನೆ ಮಕೊತಾನ.

ಈ ಛಿನಾಲಿ ಗಂಡನ್ನರಿ ಮೊಕೊತೂ ಇಲೊ ಯವ್ವ ದ್ಯಾವ್ರಿಗಿ ಖಿನಾ. ಆದರ್ ದುಕಾನ್ ಬಾವಗ ಖಿನಾ ಆಯ್ತು ಈ ಪೋರಿ ಗಂಡ್ ಬಂದಾನಂತ. ಇವ್ನಿಗಿ ಯಾಳಿ ಹೇಳಿಂದಿತ್ತು ಧೀಪಾ ಹಚ್ಚಿನ್ಮ್ಯಾಲ

ನಮ್ಮವ್ವ ಅಪ್ಪ ಮೊಕೊಮಾಣ ಬರ್ತಾ ಅಂದಿತು. ಆದರ್ ಇಲ್ಲಿ ಗಂಡ್ ಬ್ಯಾರೆ ಬಂದಾನ. ಇಕಿಗಿ ಗಂಡನ್ಮ್ಯಾಲ್ ಯಾನ ಖ್ಯಾಲಿಲ್ಲ. ಖ್ಯಾಲೆಲ್ಲ ಅದರ ಮಿಂಡ್ಯಾರ ಮ್ಯಾಲೆ. ಗಂಡಗ್ಯಾನ ಸರಿ ಮಾತಾಡಿಲ್ಲ ಬಿಟ್ಟಲ. ಗಂಡುಗ್ ನಿದ್ರಿ ಬರಾಸ್ತನ ತರ್‌ಮಾಳ್ಸಿ ತರ್‌ಮಾಳ್ಸಿ ಎದುತರ ಹಣ್ಣುಗ ಬಾಕುಲ್ ತೆರ್ದು ಸರಕ್ ಅಂತ ಹೊರಾಗಾಯ್ತು. ಬಾವಾನ್ ದುಕಾನ್ಕಡಿ ತಿರುಗ್ತು.

ಇಲ್ಲಿ ದುಕಾನ ಬಾವಾ ಯಾಕ್ ಬರಾಲ್ದು ಈ ರಂಡಿ ಅಂತ ಹಾದಿ ನೋಡ್ಕೊತ್ ಖುಂತಿನು. ಅದರ ಝಿಪ್ರಿ ಬೋಳುಸ್ತಾ ಅಂತ. ಅಂಬಾದ್ರಾಗ ಬಂತು ಪೋರಿ. ಬಂತರಾ ನನಗ್ ಮಾಪ್ ಮಾಡು. ತಡ ಆಯ್ತು ಅಂತ ಕಾಲಿಗಿ ಬಿತ್ತು. ನೋಡ್ದಿ 'ಗಂಡುಗ್ ಅಂಜಾಲ್ದಾಕಿ ಮಿಂಡುಗಂಜಿಳಂತ್' ಮಾಪ್ ತಮಾಪ್ ಛಿನಾಲ್ ರಂಡಿ ತಡ ಮಾಡಿಂದ್ಮಾಡಿ ಮತ್ ನಿಂಗ್ ಮಾಪಿ ಮಾಡ್ಬೆಕಾ ಅಂತ ಫದಾ ಫದಾ ಒದಿಲಾಕ ಸುರು ಮಾಡ್ದಾ. ಈಗ್ ಮುಂದ ಯಾಗ್ಯಾಗ ತಡ ಮಾಡಾಲ್ ಅಂತು. ಝಿಪ್ರಿ ಹಿಡ್ದು ಎಳ್ಯಾದ್ರಾಗ ಮಂಗುಳ್ ಸುತ್ತುರು ಕಡ್ದು ಬಿತ್ತು. ನಿನ್ ಗಂಡ ಜಾಣ್ಯಾ ಕಟಿಂದು ಮಂಗುಳ್ ಸುತ್ತುರ ತಿಪ್ಯಾಗ ಭೀಟು; ನಾ ಒಂದು ದುಸ್ರೆ ಮಂಗುಳ್ ಸುತ್ತುರ ಕಟ್ತಾ ಅಂದುನು ಬಾವಾ.

ಅದು ನಾಳಿನ್ ಮಾತು ಈಗ ನನ್ಸರಿ ಮೊಕೊ ಅಂತ ಸೀರಿ ಕಳ್ದು ಭೀಟ್ದುಳ್. ಬಾವಗ್ ಖುನಾ ಇತ್ತು ಪೋರಿ ಕಮ್ಜೋರಿ(ನೋಡ್ದಿ ಪೋರಿಗುಳು ಮೈನೆರ್ದು ಮನ್ಯಗ್ ಖೂಡ್ಯಾಟ್ಯಡ್ದು. ಭೇಗಿ ಎಲ್ಲಾರ ಪಾರ್ ನೋಡಿ ಮದಿ ಮಾಡ್ಬೇಕು). ಅದಕ ಬಾವಾ ಅಂತಾನ ಇಲ್ಲಿಲ್ಲ ನಾ ಇಗೋತಿನ್ ಹಿಡ್ದು ನಿನ್ಸರಿ ಮೊಕೊಮಾಲ್ . ನಿಂಗ ನಾ ಬೇಕೇನ್ ಆ ಬೇಕುಬ್ ಗಂಡಬೇಕು ಪೈಲೆ ಹೇಳು ಅಂದುನ್. ಅದಕ್ ಆ ಪೋರಿ ನೀನೆ ಬೇಕು ಆ ಪಾರನ ಬಲ್ಲಿಯಾನದ ಇಗೊತೆ ನೋಡ್ದಲ ಸುಮ್ಮ ಯಳಿಕ್ ಅದ. ನಿಂದೆ ಫುಸ್ಮೂರ್ ಅದ ನೀನೇ ಬೇಕ್ ನಂಗ ಅಂತು. ಅದಕ್ ಬಾವಾ ಹೇಳ್ದಾ ಹ್ಞೂಂ ಅಂತ ಮೀಸಿ ಮ್ಯಾಲ್ ಕೈ ತಿರುಗಿಸಿ ಛಂದ ಹುರಿ ಹುಡ್ದು ಹಾಂಗದುರಾ ನಿನ್ ಗಂಡುನ ಕುತ್ಗಿ ಕೊಯ್ದು ಪಂಚ್ಯಾತ್ಯಾಗ ಇಟ್ಕೊಂಡು ನನ್ ಕಾಲಿಗಿ ತಂದಿಡು. ಅಯಳ್ ಥನ ನಿನ್ಸರಿ ಮೊಕೊಮಾಲ್ ಬೀ ಮಾತ್ಬೀ ಆಡಲ್ ಹೋಗ್ ಅಂತ ಕುಂಡಿ ತಿಗದ ಮ್ಯಾಲ ಝೂಡ್ನೊದ್ದ.

ಹಿಂಗೆ ಅಳ್ಕೊತ್ ಕರಕೋತ್ ಹೋದುರ್ ಹ್ಯಾಂಗ ಅಂತ ಧೈರ್ಯ ಘಟ ಮಾಡಿ ಅಳು ನುಂಗಿ ಹೊಯ್ತಾರ ಗಂಡಿದ್ದಿಂದು ಜಾಗಕ್! ಗಂಡ ಮೊಕೊಂಡಿನು. ಆವ್ನ ತಲ್ವಾರ್ ತೊಕೊಂಡು ಕಚ್ಚಂತ ಕುಲ್ಕಿನೇ ಹಾರ್ ಸ್ತು ಕಾಪರಂಡಿ! ಯಾರಿಗಿ ಬೀ ಖುನಾ ಆಗಾಲ್ದೆ ಪರಾತಿನಾಗ ಇಟ್ಕೊಂಡು ಮ್ಯಾಲ್ ಶರುಗು ಮುಚ್ಕೊಂಡು ಬಾಬಾಗ ಅರ್ಪುಸ್ತತುದ್. ಎಲ ನಿನ್ ಕಾಪರಂಡಿ ನಿನ್ ಸಂಗ್ ಮಾಡಾಲ ಹೋಗ್ ಅಂತ ಅವಾಜ್ ಮಾಡಾಲ್ದೆನೆ ಹೊರಾಗ ಹಾಕ್ತಾನ ಇಕಿ ಬಿಕ್ಕಿ ಬಿಕ್ಕಿ ಅಳ್ತಾಳ್ . ಅಳಾಲ್ದುರ್ ಯಾನ್ ಮಾಡ್ತಾಳ್ ಛೋದಿ.

ಹಣ್ಮಂದೇವ್ರು ಕಟ್ಟಿಮ್ಯಾಲ್ ಯಾನ್ ಮಾತಾಡಿತಲ ಮುದ್ಕಿ, ರಾಜಾನ ಮಗ್ನಿಗಿss ಆ ಮುದ್ಕಿಕಡ್ ಹೊಯ್ತಾಳ ಈ ಪೋರಿ ಆ ಮುದ್ಕಿಬೀ ತೋಲ್ ಸೈರಾ ಇತ್ತು. ಆಗ ರಾತ್ರಿ ಬಾರಾ ಭಾರ್ಸಿತ್ತು. 'ಆಯೀ ಆಯೀ' ಅಂತ ಒಳ್ತಾಳ್ . ತಟ್ಟಿ ತೆರ್ದುರ್ ಯಾರಾವ ಅಂಬಾಟ್‌ಕೆ ಈ ಪೋರಿ ಅದ! ಯಾಕ್‌ಬಂದ್ಮಗಾ ಈಟ್ ಸರ್‍ರಾತ್ರಿಗಿ... ಅಮಾಸಿ ಕತ್ಲಾಗ ಅಂದುಳ್ ಆ ಮುದ್ಕಿಗಿ ಹಿಂಗ್ಹಿಂಗ್ ಹಿಂಗ್ಹಿಂಗ್ ಅಂತ ಹೇಳ್ಕೋತ್ ಮಾsssತ ಬಾವಾಸಾಬ್ ನಿನ್ಗಂಡುಂದು ಕುತ್ಗಿ ತಂದ್ ನಂಗ ಆರ್ತಿಗ್ಗಿ ಮಾಡು ಆಗ ನಿನ್ಸರಿ ಮೊಕೊತಾ ಅಂದಿನು. ಅಂವಾ ಹೇಳ್ದ್ಹಾಂಗ್ ಮಾಡ್ದುರಬೀ ಈ ಒಲ್ಲಂತಾನ ಆಯೀ ಯಾನ್ ಖರ್ಮ ಬಂತುss ಅಂತ ಅಳ್ಯಾಕ್ ಸುರುಮಾಡ್ತಾಳ್ ಈಗ್ ಹ್ಯಾಂಗ್ ಮಾಡ್ಲಿ ಅಂತ ಅಳ್ತಾನೇ ಕೇಳ್ತಾಳ್ ಮುದ್ಕಿಗಿ

ಮುದ್ಕಿ ಇಚಾರ ಮಾಡಿ ಮಾಡಿ ಒಂದು ಹಾದಿ ಹೇಳ್ತು ಯಾನಂದುರು ನಿನ್ ಗಂಡುನ್ ಕುತ್ಕಿ ಒಯ್ದು ಅಲ್ಲೆ ಹಾಸ್ಕ್ಯಾಗ ಭೀಟು. ನೀನ್ ಸೀರಿ ಕಳ್ದು ಮಾಳ್ಗಿ ಸರ್ದಾಗ ತುರುಕು ಅದು ಥೋಡ್ಥೋಡೆ ಕಾಣ್‌ಸ್ ಬೇಕು. ಯಾವ್ದಾರಾ ಹಾಸ್ಕಿ ಖೌದಿ ಸುತ್ಕೊಂಡು ಖುಂತು ಹಲೊಲೊಲೊಲೊ ಅಂತ ಬೊಬ್ಬಿ ಹುಡಿ, ಹಾಂ! ಮತ್ತೊಂದು ಮರ್ತ ಹೇಳಾಕ್ ಕುಬ್ಸಾ ಮಲಿ ಇದ್ದಿಂದ ಜಾಗಕ್ ಹರ್ಕೊಂಡು ಮಲಿ ಮ್ಯಾಲ ಖೆದ್ರಿಂದು ಘಾಯಿಗುಳ್ ಮಾಡ್ಕೊ ಅಂತ ಹೇಳ್ತು. ಏಟ್ ಖೈ ಅದ ನೋಡು ಮುದ್ಕಿ ಹಾಂಗ್ ಮಾಡಿದವ್ರಿಗೆ ಹಂತಾ ನೆಂಪು ಬರ್ತಾವ್. ಆಕಿ ಹಾಂಗೆ ಮಾಡ್ದುಳ್ ಊರಿಗಿ ಊರೇ ಬಂದು ನೆರಿತು. ಪೋಲಿಸ ಜಮಾದಾರ ಬಂದು ಇಳೀತು. ಪರದಾನಿ ಮಗ್ನಿಗಿ ನಾಹುಡಿ ನೀ ಹುಡಿ ಬಡಿಲಾಕ ಸುರು ಮಾಡ್ದುರು. ಯಾರ್ಯಾರು ಭ್ಯಾಡ್ ಬಿಡ್ರಿ ಅಲ್ಲತುರು. ರಾಜಾನ ಮಗನ ಮುಣ್ಣುಮಾಡ್ದುರು. ಸರಕಾರ ಹುಕುಂ ಆಯ್ತು ಮಾಡ್ದುರು. ಪರದಾನಿ ಮಗನಿಗಿ ಬಲ್ಗಂಬಕ್ ಕಟ್ಟಿ ಹುಡಿನೇ ಹುಡಿಲತುರು. ಆಂವಾ ಬಾಯಿ ತೆರಿಲಾತುನ್ ಭ್ಯಾಂಭ್ಯಾ ಅಂತ.

ಹಿಂಗೆ ಥೋಡೆ ಘುಂಟ್ಯಾದ ಬಾದ್ ಪರದಾನಿ ಮ್ಹಗ ಪರೂರ್ ದಿಂದ ಶಾಣ್ಯಾಮನ್ಸ್ಯಾರಿಗಿ ಕರ್ಸಿ ಪಂಚೆತಿಹಾಕ್ದ್ ಈ ಟ್ಯಾಲ್ಲಕ ಕಾರಣ ಬಾವಾ ಅಂಬಾಹನ ಅವ್ನಿಗಿ ಕರಿರಿ ಊರಾಗೆ ಒಂದು ಸೈರಾ ಮುದ್ಕಿ ಅದ ಅದಕ್ಕ ಕರಿರಿ. ಎಲ್ಲೊರು ಬಂದುರು ಅದ ಅಂವಾ ಬಾವ ಹೇಳ್ದ ಹೊಂದ್ರ ಈ ಪೋರಿ ಬಂದು ನನ್ಸರಿ ಸಂಗ ಮಾಡಂದಾಗ ಈ ಮಾತು ನಾನೇ ಅಂದಿದಾರಿ ಯಾಕಂದರ ಆಕಿನ ಸರಿ ನನ್ಗ ಸಂಗ ಮಾಡಾದೆ ಇಲ್ಲ ಅಂತ ಹೇಳಿ ಹೀಂಗ್ ಹೇಳ್ದುರ ಯಾನು ಇಕಿ ತರಾಕಿ ಹೋದುಳಾ? ಅಂತ ಅಂದಿದಾರಿ ಅದರ ಈ ಹುಚ್ಚ್ಟ್ ಪೋರೆ ಖರೆಖರೆನೇ ಕೊಯ್ದು ತರಬೇಕಾ? ಸಾಬ್ರೆ ಅಂದುನ.

ಆ ಮುದ್ದಿಯಿತ್ತಲ ರಾತ್ರಿ ಬಾರಾಬಂದುಕ್ ನನ್ ಬಲ್ಕಿ ಬಂದು ಹೇಳ್ದುರ ನಾನೆ ಹಿಂಗ್ ಮಾಡಂತ ಹೇಳಿದಾರಿ ಅಂದುಳ್. ಅದಕ್ಕ ತಪ್ಪೆಲ್ಲ ಪೋರಿದೆ ಅದಾ ಬಿಡ್ರಿ ಅಂತ ಕುಂಬಾರ ಮನ್ಯಾಗಿನ ಕತ್ತಿ ತರ್ಸಿ

ತಲಿ ಬೋಳ್ಸಿ, ತಲಿಗಿ ಸುಣ್ಣಹಚ್ಚಿ, ಕೊಳ್ಳಾಗ ಚಪ್ಲಿ ಸರ ಹಾಕಿ ಥೂಥೂ ಉಗುಳೀ, ನಿಸಾ ಬತ್ಲೆ ಬಾಜಾರದಾಗ ಮೆರುಸ್ದರು.

ಪರದಾನಿ ಮಗ ತನ್ ಹೆಣ್ತಿ ಊರಿಗಿ ಹೋಯ್ತಾನ ಧೀಪಾ ಹಚಲಾಕ ಒಂದ್ ಮುದ್ಕಿ ಬರ್ತುದ್. ಅವ್ನ ಹೆಣ್ತಿಬಿ ಮೈನೆರ್ದು ತೋಲೆ ಧಿನ ಆಗಿವು ಅದಕ ಆಕಿ ನನ್ಗಂಡ್ ಬರ್ಲಿ ನಾ ದೇವ್ರಿಗಿ ಧೀಪಾ ಹಚ್ತಾ ಅಂವ ಬಂದ್ ನನ್ ಸಂಗ್ ಮಾಡ್ಬೇಕಂಬಾದೆ ಆಕಿಗಿ ಕುದಿ. ಒಂದೆ ಹೊರ್ಶಿನ್ ಮ್ಯಾಲ ಮೊಕೊತಾರ ಖರೆ ಮಾತಿಲ್ಲ ಕತಿಯಿಲ್ಲ. ಅಂತ ಎದು ದೇವ್ರು ಬಲಿಕಿ ಹೋಯ್ತಾಳ ನೀ ಹಿಂಗ್ ಮಾಡ್ದುರ ನಿಂಗ್ ಕೊಲ್ಲೇ ಹಾಕ್ತಾ ಅಂತಾಳ. ಅದ್ಕ ದೇವ್ರು ನಿನ್ನ ಗಂಡನ್ ದೋಸ್ತಾ ಹಣಮಂದೇವ ಗುಡ್ಯಾಗ ಹನಾ ಸತ್ತಾನ ನೀರು ಛಿಂಪಡಿಸು ಅಂವ ಏಳ್ತಾನ ಅಂದ. ಹಾಂಗೇ ಮಾಡ್ದುಳು. ಪರದಾನಿ ಮಗ ರಾಜನ ಮಗನ ಹೆಣ ಬೆನ್ನಿಗಿ ಕಟ್ಕೊಂಡು ಬಂದಿದ್ದ. ಆಗ ಮನಿಗಿ ಹೋಗಿ ಒಂದಾದುರ್.

ಅವರಿಬ್ಬರು ಹಿಂತಿರುಗಿ ಬರುತ್ತಿದ್ದಾಗ ಅಲ್ಲಿ ಒಬ್ಬ ರಾಜನ ಮಗಳು ಅಗ್ಸಿ ಮ್ಯಾಲಿನ ಯಾರು ಕುದ್ರಿ ಹಾರುಸ್ತಾರ ಅವ್ನಿಗಿ ಮದಿ ಆಯ್ತಾ ಅಂದುಳು ರಾಜನಮಗ ಹಾರಸ್ದ. ಅವ್ನ ಸರ ಮದಿ ಆಯಿತು. ಹಿಂಗ ಮುಂದ ರಾಜನ ಮಗ ಒಂದು, ಪರದಾನಿಮಗ ಒಂದು ಪೋರಿಗುಳಿಗಿ ತಕೊಂಡು ಹೊಯ್ತಾರ.

## ೧೦. ಅಕ್ಕರಂಡಿ ಬಿಟ್ಟೆ ಹೋದುಳ್

೩೧-೧೦-೦೨

ಕಥೆಗಾರರು

ಮಲ್ಲಮ್ಮ ವಿ.ಬೆಂಬಲಖೇಡ

ಒಂದೂರಾಗ ಇಬ್ಬರಕ್ಕತಂಗೇರಿದ್ದುರಂತ. ಅವ್ರಿಬ್ಬರ್ಬೀ ಹೆಂಡೆಬುಟ್ಟಿ ತೊಕೊಂಡ ಬಾರೆಕಾಯ್ ತರ್ಲಾಕ ಹೋದುರ್. ಹೀಗೆ ಧೂರ್ ಒಂದ್ ಹೊಲ್ದಾಗ ಒಂದೇ ಬಾರೆಕಾಯಿ ಗಿಡಾಸಿಕ್ತು. ಬುಟ್ಟಿ ಥುಂಬಕೊಂಡ್ರು ಅಟ್ರಾಗ ಒಂದು ಹುಲ್ಯಾಪ್ಪ ರಾಜ ಬಂತು ಬಂದಿನ್ಮ್ಯಾಲ ಆಕಿ ನೋಡಿ ತಂಗಿಗಿ ಬಿಟ್ಕೊಟ್ಟು ಓಡ್ಹೋದುಳ್ ಹುಲ್ಯಾಪ್ಪ ರಾಜ ತಂಗಿಗಿ ತಿಂದ್ಹ್ಯಾಕ್ತು. ಮೈಯಲ್ಲ ತಿಂದು ಹೆಬಳ್ಳು ಇಟ್ಟಿ ಹುಲ್ಯಾಪ್ ರಾಜ ಹೋಯಿತು. ಅಟ್ರಾಗ ಕುರಿ ಕಾಯಾ ಕುರುಬಣ್ಣಾ ಬಂದ ನೋಡ್ದ ಗಿಡ್ದ ಕೆಳಗ ಬುಟ್ಟಿ ಕಾಣ್ಸ್ತು ಅದುರು ಬಲ್ಲೆ ಒಂದು ಹೆಬ್ಬಳ್ಳು ಕಾಣುಸ್ತು. ಆ ಕುರುಬಣ್ಣ ಹೆಬ್ಬಳ್ಳು ತೊಕೊಂಡಿ ಮನಿಗಿ ಹೋದ. ಗಡ್ಯಾಗ ಇಟ್ಟು

ಒಂಧಿನ ಕಡ್ಗಿ ತೆರ್ದು ನೋಡ್ತಾನ ಕುರುಬ ಅದರಾಗ ನೋಡಾಟಗೆ ಒಂದು ಪೋರಿ ಕಾಣ್ಸದ. ದಿನಾ ಸ್ವಾಮಿ ಹಿಟ್ಟಿಗಿ ಬರ್ತಾನ್ ಆಗ ಆ ಪೋರಿ ನೀಡಾಪರಿ ತಂಗಿ(ಪೋರಿ) ಒಂದ್ ಮಾತ ಕೇಳಿ

ಹಿಟ್ಟು ನೀಡ್ತಾಳ್. ಆ ಮಾತೇನಂದ್ರಂದ್ರ ಅಕ್ಕಾರಂಡಿ ಬಿಟ್ಟೆ ಹೋದುಳು ಹುಲ್ಕಪ ರಾಜ ತಿಂದೇ ಬಿಟ್ಟ ಕುರುಬುರಣ್ಣಾ ತಂದೆ ಬಿಟ್ಟ. ಹಿಂಗೆ ದಿನಾ ಹೇಳ್ಕೋತಾ ಹಿಟ್ ನೀಡ್ತಾಳ್.

ಪೈಲೆಕೆ ಈ ಸುದ್ದಿ ಊರುಥುಂಬ ಖುನಾ ಇದ್ದಿರ್ತುದ್ ಅದರ ಮಂದಿಯಲ್ಲ ಏನಂತಾವ ಖರೆ ಖರೆ ಹುಲ್ಕಪ ರಾಜ ತಿಂದುದ ಅಂತ ತಿಳ್ಕೊತಾರ. ಆದುರ್ ಬೀ ಸ್ವಾಮಿ ಕಾಣಸ್ತುದ ಅಕಿನ್ ಮಾತ್ಕೇಳಿ ಬಾರೆಕಾಯ್ ತರ್ಲಾಕ್ ಹೋದೊರೆ ಇದ್ದಿರಬೇಕು. ಅದು ತಿಳುಕೋತಾನ. ಆಗ್ ಈ ಖುಸಿಸುದ್ದಿ ಕೇಳಕ್ಕ ಬರ್ತಾಳ್ ಅಕ್ಕ ತಂಗಿಗಿ ಸಿಟ್ ಬರ್ತುದ ಮತ್ತ ಅದೆ ಮಾತಹೇಳ್ತಾಳ 'ಅಕ್ಕರಂಡಿ ಬಿಟ್ಟೆ ಹೋದುಳು ಹುಲ್ಕಪರಾಜ ತಿಂದೆಬಿಟ್ಟ ಕುರುಬುರಣ್ಣಾ ತಂದೆಬಿಟ್ಟ' ಅಂತಾಳ ಅಕ್ಕನ್ಸರಿ ಹೋಗಾಲಂತಾಳ ಕುರುಬುರಾಂವ ಮಗಳಂತಿಟ್ಕೊಂಡು ಮದಿ ಮಾಡ್ಕ್ಯಾಕ್ತಾನ್.

## ೧೧. ಶಣ್‌ಪರ್‌ಗುಳ್‌ಕತಿ

**ಮಲ್ಲಮ್ಮ ವಿ. ಬೆಂಬಲಖೇಡ್**

ಒಂದು ಚಿನ್ನಿ ಇತ್ತಂತ ಒಂದು ಮುನ್ನಿ ಇತ್ತಂತ ನಾssಬೀ ಇದ್ದಂತ ಚಿನ್ನಿಬೀ ಆಲ್ದಾಕ್ ಹೊಯ್ತಂತ ಮುನ್ನಿಬೀ ಆಲ್ದಾಕ ಹೋಯ್ತಂತ ನಾssಬೀ ಹೋದಂತ. ಹಾದ್ಯಾಗ ಚಿನ್ನಿಗಿ ಒಂದುಡ್ ರೊಕ್ಕ ಸಿಕ್ತಂತ ಮುನ್ನಿಗಿ ಒಂದುಡ್ ರೊಕ್ಕ ಸಿಕ್ತಂತ ನನಗ ಸಿಕ್ಕಿಲೆ. ಆ ರೊಕ್ಕುಲಿ ಚಿನ್ನಿ ಒಂದು ಮೆಂಕಿತೆನಿ ತೊಕೊಂಡ್ತುಂತ, ಮುನ್ನಿಬೀ ತೊಕೊಂಡ್ತುತ. ನಾ ತೊಕೊಂಡಿಲೆ ಚಿನ್ನಿಬೀ ಒಲ್ಯಾಗ್ಹಾಕ್ ಸುಟ್ತಂತ ಮುನ್ನಬೀ ಒಲ್ಯಾಗ್ಹಾಕ್ ಸುಟ್ತಂತ ನಾ ಸುಟ್ಟಿಲೆ. ಚಿನ್ನಿ ಒಂದಾಣಿ ಕೊಟ್ತಂತ ಮುನ್ನಿ ಒಂದಾಣಿ ಕೊಟ್ತಂತ ನಂದು ಹೊಟ್ಟನೆ ಥುಂಬಿಲ ಚಿನ್ನಬಿ ನೀರು ಕುಲ್ದ್ಯಾಕ ಹೊಯ್ತಂತ ಮುನ್ನಿಬೀ ನೀರ ಕುಲ್ದಾಕ್ ಹೊಯ್ತಂತ ನಾss ಬೀ ಹೋದ ಚಿನ್ನಿ ನೀರು ಕೊಂಡ್ತಂತ ಮುನ್ನಿಬೀ ನೀರು ಕೊಂಡ್ತಂತ ನಾ ಕೊಂಡಿಲ್ಲೆ. ಚಿನ್ನಿ ಒಂದ್ಕೈಹಿಡಿತು ಮುನ್ನಿ ಒಂದ್ಕೈಹಿಡಿತು ನಂಗ ಅಳುನೇ ಬಂತು. ಚಿನ್ನಿ ಒಂದ್ ಕಣ್ ಸುಟ್ತು ಮುನ್ನಿ ಒಂದ್ ಕಣ್ಣು ಸುಟ್ತು ನಂಗ್ ನಗುನೇ ಬಂತು. ಚಿನ್ನಬೀ ಕೈಬಿಟ್ತು ಮುನ್ನಿಬೀ ಕೈಬಿಟ್ತು ನಾ ಭಯ್ ದಾಗೆ ಬಿದ್ದ.

## ೧೨. ಜೀಪಿನ ಫೇರ

**ಹೇಮಾ, ೧೫ ವರ್ಷ ಹುಪ್ಪುಳ ಭಾಲ್ಕಿ**

ಒಂದು ಜೀಪ್ ಇರ್ತುದಂತ ಅದು ಧಿನ್ನ ಒಂದೂರಿಗಿ ಹೋಗಿ ಬರ್ತುದಂತ ಒಂಧಿನ ಡಿರ್ಯಾವರ್ ಬಲ್ಲಿ ಒಂದ್ ಪಾರ್ ಖೂಡ್ತುದಂತ ಅವ ಫೇರ್ ಹಾಕಾದ ನೋಡ್ತುದಂತ ಹಿಂಗ್ ನಡಸಾದು ಎಲ್ಲ ನೋಡ್ತದಂತ ದಬಾಸಾದ ಟೀಟೀಕ್ ಮಾಡಾದು. ಊರು ಧೂರ್ ಇರ್ತುದಂತ ಅಲೊಂದು ಧಾಬಾ

ಇರ್ತುದಂತ ಎಲ್ಲ ಮಂದಿಗೂಳ್ ಚಾ ಕುಡಿಲಾಕ್ ಹೊಯ್ತರಂತ ಅದರ್ ಪಾರ ಹೋಗಾಲಂತ ಫೇರ್ ನಡಸಾದೆಲ್ಲ ಮುರ್ಧ್ಯಾಕ್ತುದಂತ ಓಟುರಾಗ ಡಿರ್ಯಾವರ್ ಬರ್ತಾನಂತ ಬರಾಣ ಇವೆಲ್ಲ ಯಾರು ಮುರ್ಧಾರ ಅಂತ ಕೇಳ್ತಾನಂತ ಆಗ ಆ ಪಾರ್ ಯಾನಂತುದಂತ ಇಟೆಲ್ಲ ನಾನೇ ಮಾರ್ದ್ಯಾಕಿದಾ ಯಾಕಂದರ ನಿನಗ್ಯಾಲ್ಲ ಅವು ಉಚಲಾಕ ಬರಲ್ದೆನೊ ಅಂತ ನಾ ಉಚ್ಚ್ಯಾಕ್ದ ಅಂತದಂತ. ಆಪಾರ

## ೧೩. ಹುಗ್ಗಿ ತುಪ್ಪಾ

ರೆ.ಎನ್.ಆರ್.ಲೂಕ್ ನಿಡೋದಾ
೭೦ವರ್ಷ ಔರಾದ ತಾಲೂಕು

ಒಂದೂರಾಗ ಇಬ್ಬರು ಗಂಡಹೆಣ್ತಿ ಇದ್ದುರಂತ ಅವ್ರು ಒಂಧಿನ ಹಿಂಗೆ ಖಿಂತು ಮಾತಾಡಾಪರಿ ಗಂಡ್ ಅಂತಾ 'ಏಐ ನಮಿಬ್ಬರ ಹೆಸ್ರು ನಮ್ಮವ್ವ ಅಪ್ಪ ಇಟ್ಟಾವ ಈ ಹೆಸ್ರು ಹಳಿದಾಗ್ಯಾವ ನಾವಿಬ್ರೊಂದ ಬಗಲ್ ಬಗಲ್ ಹೆಸ್ರು ಇಟ್ಕೊಮಾರಿ? ಅಂದುನ' ಅದಕ್ ಆಕಿ 'ಐ ಯಾಕಾಗಲ ನೀವ್ ಹಾಂಗಂದ್ಮ್ಯಾಲ ನಾಬೀ ರಾಜಿ ಇದ್' ಅಂದುಳ್ 'ಯಾ ಹೆಸರು ಇಟ್ಕೊಮಾರಿ' ಅಂತ ಕುದಿಬಿತ್ತು. ಆಕ್ರಿಗಿ ಒಂದ್ ನೆಂಪ್ಪಂತು. ಯಾನಂದ್ರ ಗಂಡ ಅಂದಂತಾ 'ನಾ ನಿಂದ್ ಹೆಸ್ರು ಇಡ್ತಾ ನೀ ನಂದ್ಹೆಸ್ಸು ಇಡು' ಅಂದಂತ ಹುಂರಿ ಹಾಂಗೆ ಮಾಡಾರಿ ಅಂದುರಂತ. ಆದರ ಪೈಲೆ ಯಾರಿಡ್ಬೇಕಂದ ಜುಗಬಿತ್ತು ಆಕ್ರಿಗಿ ಹೆಣ್ತಿ ಅಂದುಳಂತ 'ಏಟಾದರ ನೀವ್ ನನ್ಗಂಡ್ ಇದ್ದಿರಿ ನೀವ್ ಪೈಲೆ ಇಡ್ರಿ ಹಿಂದಿಂದು ನಾ ಇಡ್ತಾ' ಅಂದುಳಂತ. ಅದಕವ ಸೊಂಚಾಸಿ ಸೋಚಾಸಿ ಯಾಗ್ಬಿ ಇಕಿ ನಂಗ ಸೈಯಾನ್ ಸೈಯಾನ್ ಮಾತ್ತಾಡ್ತಾಳ ಅದಕ್ ಇಕಿನ ಹೆಸ್ರು ಹುಗ್ಗಿ ಅಂತ ಇಡಾರಿ ಪಿಲಾನ್ ಮಾಡ್ದುನಂತ. "ನಿನ್ಹೆಸ್ರು ಹುಗ್ಗಿsss" ಅಂತ ಅಂದುನಂತ. ಈ ಮಾತ್ ಕೇಳಿ ಇಕಿಗಿ ಯಾನ್ ಹೇಳ್ಬಿ ಯಾನಿಲ್ಲ ಅಂತ ಒಂದ್ಕಡಿ ಖುಸಿನೆ ಖುಸಿ ಹಿನೊಂದ್ಕಡಿ ಯಾನ್ ಹೆಸ್ರು ಇಲ್ದಿ ಹಿಗ್ಗಿ ಸರಿ ಯಾನ್ ಇರ್ತುದಂತ ಸೋಂಚಾಸಿ ನಿನ್ಹೆಸ್ರು ತುಪ್ಪಾss ಅಂದುಳಂತ. ಮನ್ಯಾಗ ಒಂದು ಕ್ವಾಣ ಒಂದು ಯಮ್ಮಿ ಇದ್ದು ಅಂತ. ಅವುದುರ್ ಹೆಸುರ್ ಬಿ ಇಟ್ಟುರಂತ ಕ್ವಾಣದ ಹೆಸರು ಕೊಡ್ತಿ, ಯಮ್ಮಿ ಹೆಸರು ಅಡ್ನಾಗು ಅಂತ ನೆಂಟುರ್ ಬರ್ತಾರ ಹುಗ್ಗಿ ಗಂಟ್ ಬಿದ್ದು ಹೇಳ್ತಾನ ಮನಿಗಿ ನಡ್ರಿ ಮನ್ಯಾಗ ತುಪ್ಪಾ ಅದಾ ಅಂತ. ಅವರು ಬಾಯ್ಗಿ ನೀರು ಹುಡುಕೋತ ಬಂದುರ್ ಆಕಿ ಅಂದುಳು ಖೂಡ್ರಿ ತುಪ್ಪ ಬರ್ತುದ ಅಂತ ಬಂದ ಯಮ್ಮಿ ಒಂದ್ಕಡಿ ಕ್ವಾಣ ಒಂದ್ಕಡಿ ಓಲ್ತಾತಂತ ಅದಕವ ಕೊಡ್ತಿ ಹಿಡಿ ಅಂದ, ಅಡ್ನಾಗು. ತಾ ಅಂದಂತ ನೆಂಟುರ ಅಂಜಿ ಓಡಿ ಹೋದ್ರು ಅಂತ ಅಡ್ನಾಗ ಅಂದರ ಹಿಡಿ ಅಂಬ ಅರ್ಥ ಕೊಡ್ತಿ ಅಂದರ ಹೊಡ್ಯಾದ ಸಾಮಾ ಅಂತ ತಿಳ್ಕೊಂಡು.

## ೧೪. ಇಲ್ಬಪಿನ್ ಕತಿ

ಶಿವಕಲ್ಯಾಣಿ ೧೦ವರ್ಷ, ಭಾಲ್ಕಿ

ಒಂದೂರಾಗ ಒಂದ್ ಇಲ್ಬಪ್ ಇತ್ತಂದ ಹಿಂಗೆ ಬೇಲಿ ಗೊಂಟ್ ನಡ್ಡಿತಂತ, ಹೋಗಾಪರಿ ಅದ್ರ ಬಾಲುಕ್ ಮುಳ್ಳ ಮುರಿತಂತ ಅದು ನಾದುರ್ ಬಲ್ಲಿ ಹೊಯ್ತಂತ ಅವ ಮುಳ್ಳ ತೆಗ್ಯಾಪಾರಿ ಬಾಲ ಕಡಿತಂತ ಅದರ ಇಲ್ಬಪ ನನ್ ಬಾಲಾರಾ ಕುಡು ಇಲ್ದರ್ ಕತ್ರಿರಾ ಕುಡು ಅಂತ ಹಟಮಾಡ್ತಾಂತ ಅದು ಕತ್ರಿ ತೊಕೊಡು ಹೋಗಿ ಹಜಾಮತಿ ದುಕಾನ ಹಚ್ತಂತ.

## ೧೫. ನಗೆಹನಿ

ಅಂಬ್ರಿಸ್ ೧೪ವರ್ಷ, ನಿಡೇಬಾನ

ಒಬ್ಬಾಕಿ ಟೀಚರ್ತಿ ಇರ್ತಾಳಂತ ಆಕಿ ಪಾಟಾ ಹೇಳಾಪರಿ ಪುಂಯ್ ಅಂತ ಭೂಸ್ ಹುಡಿತ್ತಾಳಂತ ಪಾರ್ಗುಳೆಲ್ಲ ನಗ್ತಾವಂತ ಅದಕ್ ಆ ಟೀಚರ್ತಿ ಅಂತಾಳಂತ ಯಾಕ ನಗ್ಲತಿರಿ ಮಕ್ಕಳೆ ಇದು ದೇವ್ರು ಕೊಟ್ಟಿಂದು ಪುಂಗಿ ಅದ ಅಂದುಳು.

## ೧೬. ನಗೆಹನಿ

ಗಂಡಾ ಹೆಣ್ತಿ ಫಟಫಟಿಮಾಲ್ ಹೋಗ್ಲತೀವಂತ ಅಲ್ಲಿ ಹೈಸ್ ಕಿರೆಟ್ ಹೊಯ್ತುದಂತ ಆಗ ಅವ್ರುಪಾರ ಯಪ್ಪಾ ಒಂದೇ ಹೈಸ್ ಕಿರೆಟ್ ಹೊಯ್ತುದಂತ ಆಗ ಅವ್ರುಪಾರ ಯಪ್ಪಾ ಬಂದ್ ಹೈಸ್ ಕಿರೆಟ್ ತೊಕೊಂಡುಕುಡ ಅಂತುದಂತ ಆಗ ಅವ ಇಸ್ಕುಡ್ತಾನಂತ ಹಾಂಗೆ ಖಂತ ಜರಾ ಧೂರ್ ಹೊಯ್ತಾರಂತ ಐಸ್ ಕಿರೇಟ್ ಬಿಳದಂತ ಆ ಪಾರ ಅವುರಪ್ಪಗ ಯಪ್ಪಾ ಗಾಡಿ ನಿಂದುರ್ಸ್ ಐಸ್ ಕಿರೆಟ್ ತೊಕೊಲಾಕ ನೋಡ್ತದಂತ ಅದಕ್ಕ ಅವ್ರುಪ್ಪ ಅಂತ್ತಾನ ಕೆಳಗ ಬಿದ್ದಿಂದ ಚೀಜ್ ತೊಕೊಭ್ಯಾಡ್ದು ಅಂತನ ಆಗ ತೊಕೋಮಾಲಂತ ಹಾಂಗೆ ಗಾಡಿಮ್ಯಾಲ ಖಂತ್ ಹೋಯ್ತಾರಂತ ಧೂರ್ ಹೊಗಿನ್ ಮ್ಯಾಲ ಅವುರ್ಸವ್ವ ಫಟಫಟಿ ಮ್ಯಾಲಿಂದ ಬಿಳ್ತಾಳ ಅವರಪ್ಪ ಫಟಪಟಿ ನಿಂದುರ್ಸಿ ಅವ್ವಗ ತೊಕೊಲಾಕ ಹೊಯ್ತಾನ ಆಗ ಅವ್ನ ಮಗ ಯಪಾ! ನೀ ಯಾಗ್ಬಿ ಕೆಳಗಿಬಿದ್ದಿಂದು ತೊಕೊಭ್ಯಾಡಂತಿ ಮತ್ತಾಕ ತೊಕೊಲತಿದಿ ಅಂತದಂತ.

## ೧೭. ಖರಾಬ್ ಬ್ಯಾನಿ ಹೆಣ್ಮಗುಳ್

ನಿಡೇಬಾನ ನಾಮದೇವ, ೫೦ ವರ್ಷ

ಒಂದ್ ಹೆಣ್ಮಗುಳಿದ್ದುಳಂತ ಆಕಿಗಿ ಒಂದ ಯಾನೊ ಖರಾಬ್ ಬ್ಯಾನಿ ಹತ್ತಿತಂತ ಹನ್ಯಾಡ್ ದೇವ್ರಿಗಿ ಹರ್ಕಿ ಮಾಡ್ದುಳಂತ. ಘೊರೊಡಿ ಮ್ಹೈಬು ಸುಬಾನಿ, ಮರೂರ್, ತುಳಾಜಾಪೂರ ಮ್ಹಾಪುರ್ ತಾಯಿ, ಕಪ್ಲಾಪುರ್, ಹಿಂಗೆ ಎಲ್ಲ ದೇವ್, ದೇವುಸ್ತಾಗುಳಿಗಿ ಹರ್ಕಿ ಮಾಡ್ದುಳು. ಕೋಳಿ ಕೊಯ್ದುಳ್, ಕುರಿ

ಕೊಯ್ದುಳ್ ಬ್ಯಾನಿನೇ ಕಡ್ಯಾಲ್ ಹೊಯ್ತು. ಧಿಂದಾಗ ಎಡ್ಮುರ್ ಸಿರಿ ಬದಲಾಸಾದ ಬಂತ್ತು ಕೆಟ್ ದುರ್ವಾಸಣ ಎದ್ದಿತು. ಯಾರ್ಬಿ ಬಲ್ಲಿಕಿ ಬರ್ಗುಡಾಲ್ ಹೋದು. ಇಕಿ ಇಲ್ಲಿದ್ದುರ್ ಓಟ್ ಧೂರಿಂದ ಮಂದಿಗುಳ್ ಹೊಯ್ತಿವ್. ಇಕಿಗಿ ಜಿಂದಗಿದಾಗ ಬಕ್ಕಳ ಬಕ್ಕಳ ಬ್ಯಾಸರ್ಕಿ ಆಯಿತು. ಯಾರೊ ಹೇಳಿರಂತ ಹಿಂಗ್ ಫಲಾಣಿ ಒಬ್ ಸಾದುಹನ ಅವ್ನಬಲಿಕಿ ತೊಕೊಂಡು ಹೋದುರ್ ಬ್ಯಾನಿ ರೀಕ್ ಆಯ್ತದ ಅಂತ ಧೂರಿನ ಸುದ್ದಿ ಹತ್ತಿತಂತೆ. ಇಕಿ ಯಾರಿಗ್ಬೀ ಖೂನಾ ಆಗಾಲಾಧ್ಹಾಂಗ ಸರಕ್ಕಂತ ಹೋಗಿ ಆ ಸಾದುನ ಅಂಗಿ ಮುಟುದುಳ್ ಆ ಸಾದುಗ ಖೂನಾ ಆಯ್ತ ಯಾರ್ ಹಾಳ್ ಪಾ ನನ್ನಂಗಿ ಮುಟ್ದೆರು ಅಂತ ಹಿಂದಕಿ ತಿರಗಿ ನೋಡಿನ ಮ್ಯಾಗ ಆಕಿ ಅಳ್ಯಾಕ ಸುರು ಮಾಡ್ಡುಳಂತ ಯಾಕಂದರು ಮುಟ್ಟೆಟ್ ಆಯ್ತಂತ ಇವ ಏನ್ ಬೈಯ್‌ತನೊ ಯಾನ್ ಹುಡಿತಾನೊ ಅಂದಕೊಂಡು ಆ ಸಾದು ಯೇಸು ಇದ್ದ. ಯೇಸುನ ಬಲಿಕಿ ಯಾ ಭೇದ್ಭಾವಿಲ್ಲ ಯಾರ್ ಅವ್ನ ಮ್ಯಾಗ ಇಸ್ವಾಸ್ ಇಡ್ತಾರ ಅವ್ರು ಭೇಗಿನ ನೆಟ್ಟಕ್ ಆಯ್ತಾರ. ಅವ್ನಿಗ್ ಬಿಟ್ಟು ಯಾರಾರಾ ಬ್ಯಾರೆ ದೇವ್ರು ಮ್ಯಾಲ ಇಸ್ವಾಸ ಇಟ್ಟು ಇಟ್ಟು ಏಟ್ ದಂಡ್ವತ್ ಹಾಕ್ದುರ್ ಬೀ ಯಾನ್ ಫೈದ್ಯ ಇಲ್ಲ. ಆದರ್ ಇದು ಅವ್ನನವ್ನ ಭಾವುದ್ಮಾಲ್ ಹೊಯ್ತದ.

## ೧೮. ದ್ಯಾವ್ರಿಗಿ ಯಾನೊಯ್ಲಿ?

**ಶಿವಮ್ಮ ಕುಮಾರಚಿಂಚೋಳಿ ೭೦ ವರ್ಷ**

ಒಂದೂರಾಗ ಒಬ್ಬಾಕಿ ಹೆಣ್ಮಗುಳು ಇದ್ದುಳಂತ ಆಕಿ ದ್ಯಾವ್ರಿಗಿ ಯಾನಾರಾ ಯಾನಾರಾ ಒಯ್ಯಾರಿ ಅಂತಂದು ಪಿಲಾನ ಮಾಡ್ತಾಳ. ಹಾಲಾರಾ ಒಯ್ಯಾರೆನೊ ಅಂತಂದು ಹಾಲ ಹಿಂಡ್ಲಾಕ್ ಹೊಯ್ತಾಳ್, ಕುಳ್ಗೇಡಿ ಕರು ಬಂದು ಯಂಜುಲ್ ಮಾಡ್ತು ಮತ್ ಯಾನೊಯ್ಲಿ ಅಂತ ಜುಗಾ ಬಿತ್ತು. ಹೊಳಿ ನೀರಾರ ಒಯ್ಯಾರಿ, ನೀರ್ ಅಂದರ ಗಂಗಾ ಇಧ್ಹಾಂಗ ಇರ್ತದಂತಂದು. ಝುಳ್ಕಾಮಾಡಿ ಹೊಳಿಗಿ ಹೊಯ್ತಾಳ. ಕುಳ್ಗೇಡಿ ಮೀಣ ಬಂದು ನೀರು ರಾಡಿ ಮಾಡ್ತಂತ. ಇನ್ಯಾನ ಮಾಡ್ಲ್ಯವ್ವ ಅಂತ ವಾಪಾಸಬರ್ತಾಳ. ಯಾರೊ ಹೇಳೀರಂತ ದ್ಯಾವ್ರಿಗಿ ಹಸಿಮೈಲಿ ಪಂಚ್ಯಾರ್ತಿ ಒಯ್ದುರ ಅದರಖಿನ್ನ ಛಂದ ಯಾನ್ ಬೀ ಇಲ್ಲಂತ ಹಾಂಗೆ ಮಾಡ್ಡುಳಂತ. ಖರೆ ಕುಳ್ಗೇಡಿ ಘಾಳಿ ಬಂದು ಪಂಚ್ಯಾರ್ತಿ ಶಾಂತ ಮಾಡ್ತಂತ ಆಗ ಯಲಾ ಖರ್ಮ ನಂಗ್ಯಾಕ ದ್ಯವ್ರು ಕಾಡುಸ್ಲಾತನ್ ಅಂತ ಕುದಿದಾಗ ಹಿಂಗೆ ತೋಲ್ ಮಾಡ್ತಂತ ಆಗ ಯಲಾ ಖರ್ಮ ನಂಗ್ಯಾಕ ದ್ಯವ್ರು ಕಾಡುಸ್ಲಾತನ್ ಅಂತ ಕುದಿದಾಗ ಹಿಂಗೆ ತೋಲ್ ತೋಲ ಧಿನ ಖುಂತುಳಂತ ಒಬ್ ಸಾದು ಬಂದು ಹೇಳ್ದಂತ ದ್ಯಾವ್ರಿಗಿ ಯಾನುಬೀ ಭ್ಯಾಡ್ ನಿನ್ಮನಸ್ ಕುಡು ಅಂದತ ಅಗೋತಿಂದ್ಹಿಡ್ದು ದ್ಯವ್ರುಮಾಲ್ ಭಗ್ತಿ ಇಟ್ಟು ನಡ್ಡುಳಂತ.

## ೧೯. ಅತ್ತಿಮನಿ ಸೊಸೆ

**ರೇವಣಮ್ಮ ಕುಮಾರಚಿಂಚೋಳಿ ೪೫ವರ್ಷ**
**ಹುಮನಾಬಾದ ತಾಲೂಕು**

ಅತ್ತಿಮನಿ ಸೊಸಿ ಹೊಂಟೆಳಂತ. ಯಣ್ಣಿ ಕುಳ್ಳಿ ಕೈಯಾಗಿತ್ತಂತ ಮುಂದ್ ಮೌಲಾನ ಸವಾರಿ ಹೊಂಟಿತಂತ. ಕಾಲಿಗಿ ಠೇಚಿ ಬಡಿತಂತ. ಧಪ್ಪೆಂತ ಕಡಕೊಂಡು ಬಿದ್ದುಳಂತ ಯಣ್ಣೆಯಲ ಛೆಲ್ಲಿ

ಹೊಯ್ತಂತ. ತೋಲ್ ತೋಲ್ ಅಳ್ಳತುಳಂತ ಇಕಿ ಅಳಾದ್ನೋಡಿ ಮೌಲಾಲಿಗ ಅಂತಕರ್ಣ ಬಂತಂತ. ಯಾರ್ ತಾಯಿ ನೀ ಯಾರ್ ಸೊಸಿ ಅಂತ ಕೇಳ್ಳುನಂತ ನಾ ಫಲಾಣ್ಯಾವ್ವು ಸೊಸೆ ಇದ್ದ ಯಣಿಯಲ ಛೆಲ್ಹೋಗ್ಯಾದ ಮುಕ್ ಬಿ ಯಣ್ಣೀಯಿಲ್ಲ ಅತ್ತಿ ಮಮ್ಮಗ ಯಾನ್ಹೇಳಿ ಗಂಡ ಯಾನ್ ಇಟ್ಕೊತಾನೋ ಇಲ್ಲೊ ಅಂತ ಸಂತಾಪ ಮಾಡಿ ಅಳ್ಳಾ ತುಳಂತ. ಆಲ ಪರಿ ದುಕಾ ಮಾಡಾಣ ಮೌಲಾಲಿಗ ಅಂತಕರಣ ಬಂದು ಯಣ್ಣಿಯಲ್‌ಛೆಲ್ಯಾದ ಹೇಳು ಮssssತ ನಾ ಹಿಂದಕ ತಂದ್ ಕುಡ್ತಾ ಅಂದಂತ ಜಾಗ ತೊಸ್ಪುಳ್. ಮೌಲಾಲಿ ಮಣ್ಣೆಲ್ಲ ಹಿಡ್ಕಿ ಮಾಡಿ ಹಿಂಡ್ಯಾನರಾ ಸಾಲಿಮ್ ಮಣ್ಣ ಥುಂಬಿತು ಭರನ. ಆಗ ನೆಲ ಸ್ರಾಪ್ ಕೊಟ್ತಂತ ಯಾನಂತ ನೀ ಸತ್ಮರ್ಧಿನ ನಿನ್ ಹೆಣ ಎಲ್ಲೂಳ್ಳಾರ್ ಅಂತ. ಅದಕ ಮೌಲಾ ಯಣ್ಣಿಯಾನ ಹಿಂದಕ್ ಬರಾಲ್ಲು ಅದರ ಬದಲಿಗಿ ನಾ ನನ್ ರಗ್ತಾ ಕುಡ್ತಾ ಅಂತ ರಗ್ತಾ ಕುಡ್ತಾನ್. ಹಸೇನ್ ಹುಸೇನ್ ಲಡ್ಕೈದಾಗೆ ಸತ್ತಾರೆ ಹಾಂಗೆ ಮೌಲಾಬಿ ಸತ್ತುನ್ ಯಾರ್ ಬೀ ಸಾವ್ ಬಂದ್ ಸತ್ತಿಲ ಅದಕೆ ಖತಲ್ ರಾತ್ರಿ ಅಂತಾರ.

## ೨೦. ನಾರೋಳ್ಳೋರಿ

ಜಗದೇವಿ ಹಳ್ಳಿಖೇಡ, ೪೦ವರ್ಷ
ಹುಮನಾಬಾದ ತಾಲೂಕು

ಹಿಂಗೊಂದೂರಾಗ ರಾಜಾ ಇದ್ದ. ಅವ್ನಿಗಿ ಒಬ್ ಮಗಾ ಇದ್ದ. ಅವ ಏಳ್ತಿಕಿ ತಡಾ ಠಾಕಾ ಚೆಂಡುಫಳಿ ಆಡ್ತಿದ 'ಒಂಧಿನ ಅವ್ನ್ಚೆಂಡ್ಸಂದ ಬಂದ್ ಮುದ್ಕಿ ಹಾದಿಗುಂssssಟಾ ನಡ್ಡಿಳ ಬಂದ್ಪಡಿತ ಪಟ್‌ಂತ್. ಅದು ಚೆಂಡು ಯದಿಮ್ಯಾಗೆ ಹತ್ತು ಅದ್ಕ ಮುದ್ಕಿ ಯಾನಂದುಳು 'ಏಯ್ ಖೈನನ್ನಾಟ್ಯ ನಂಗ್ ಯಾನ್ ಹುಡಿತಿ ನಾಯಾನ್ ಪೋರಾಬಟ್ಟೆ ಇದ್ದಾ ಅಂತಂದುಳ್ ಹುಡ್ಯಾಂಗಿದ್ದರ ನಾರೋಳ್ಳೋರಿಗಿ ಅಂದುಳು.

ಪೋರಿ ಅಂಬಾಣಾಕಿ ಇವ್ನ ಮೈಲುಬ್ಬು, ಮೈಗಿ ಮುಳ್ ಬಂದು. ಪೋರಿಗುಳಿಗಿ ನೋಡಾ ಖ್ಯಾಸ ತೋಲಿತ್ತು ಮೀಸಿ ಒಡ್ಡಿವ್. ಅದು ಮುದ್ಕಿ ಬಯ್ದಿಂದ್ಕಿಡಿ ಖ್ಯಾಲ್ ಮಾಡಿಲ್ಲ ಪೋರಿ ಎಲ್ಲದ, ಹ್ಯಾಂಗ್ ಹುಡಿಲಿ ಅಂಬಾ ಕುದಿನೆ ಬಿತ್ತು ಪೋರಿ ಠಿಕಾಣಿ ಸಿಗಾಲ್ ಕಡಿಂದ ತೋಲ್ ತೋಲ ಅಫ್ಸೋಸ್ ಆಯ್ತು. ಅದು ಎಲ್ಲದಾ ತಲಾಸ್ ಮಾಡಿ ತರ್ಬೇಕಂತ ಹೊಟ್ಯಾಗ್ಹುಟ್ತು. ಅನ್ನ ಅಂದಿಲ್ಲ ನೀರಂದಿಲ ನಾರೋಳ್ಳೋರಿಗಿ ಹುಡುತ್ಕೋತ್ ನಡ್ದ. ತಲಾಸಶ್ ಮಾಡ್ಕೊತ್ ಹೋಗಾಣ ಖಬರ್ ಬಂತು ಫಲಾಣಿ ಜಾಗದಾಗ್ಹಳಾಂತ. ಒಲ್ಲಿ ಹೋಗಾಥನಾ ಆಕಿಗಿ ರಾಕ್ಸಿಗುಳ್ ಕಾವ್ಲಿ ಇದ್ದುರು. ಈಗ ಹ್ಯಾಂಗ್ ಹೋಗ್ಬೇಕಂತ. ಪರೇಸ್ಯಾನ್ ಆಯ್ತಾನ್. ಪೈಲೆಫಸ್ಟ್ ಛಿಡಿಗಿ ರಕ್ಷಿದು ಅವ್ನ ಖುಂತಿಳು. ಅದಕ ಐದು ಮಂದಿ ಗಣ್ಣ್ಮಕ್ಕುಳಿದ್ದು. ಆಕಿನ್ ಬಲ್ಹೋದ, ರಾಜನ್ಮಗ ಆಗ್ ಆ ರಕ್ಷಿ ಈಟ್ ಊಚ್ ನ್ಯಾಲ್ಗಿ ನುಂಗ್ಲಾಕ್ಬಂತು ಆಯಾ ನೀ ನಂಗ್ ನುಂಗ್ಬ್ಯಾಡ್ ನಾನಿನ್ಮಮ್ಮಗ ಇದಂತ. ಸುಮ್ನೆ ಹೇಳ್ದ. ಅಂದರ

ನೀ ಯಾಕ್ಸಂದಿಲ್ಲಿ ಅಂಬಾಣಾಕಿ ಅವ್ವಾ ಖಳ್ಸ್ಯಾಳ್ ನಿನ್ನೂಡ ಮಾತಾಡ್ಬ್ಯಾಂತಂದ. ಹುಂ ಖೊಡ್ಸ್ಯಾಗ ಅಂತ ಖೊಡ್ಸ್ಕೊಣಿ ಸುಕುದುಕುದ ಮಾತಾಡಾಣ. ನಿಂಗ್ಯಾನಬೇಕು, ಧನಧಿರ್ವ್ಯಾ ಯಾಸ್ತಾ ಅಂದಾಳ ನಿಮ್ಮವ್. ನೋಡಾಯ್ ನಂಗ್ ನಿಂಧಿರ್ವ್ಯಾ ಭ್ಯಾಡsss ನಿಂಧನ ಭ್ಯಾಡ. ನಂಗ ನಾರೋಳ್ಸೋರಿ ಬೇಕಂದ. ಹ್ಯಾಂಗಾರಾ ಮಾಡು ಯಾನ್ರಾ ಇಲ್ಲ ಖರೆ ನಂಗ್ಸೋರಿ ಬೇಕ ಅಂದುನ್. ಆಗ ಆ ಆಯಿ ಐದು ಹಳ್ಳ ಕೊಟ್ಟುಳಂತ ಐದು ಮಂದಿ ಸ್ವಾದುರ್ ಮಾವ ಹರಾ ಅಂತ್ಹೇಳ್ಳುಳ್. ಅವು ನಿಂಗ್ ತಿಲ್ಲಾಕ್ ಬರ್ತಾವ್. ಈ ಐದು ಹಳ್ಳಾ ಹುಡಿ ಅಂತಂದುಳ್ ಹಾಂಗೇ ಮಾಡ್ತಾನ್.

ಹಿಂಗೆ ಒಬ್ರು ಒಬ್ರು ಬಂದರ ಒಬ್ರಿಗಿ ಒಬ್ರಿಗಿ ಹಳ್ಳ ಹುಡಿತಾನ ಅವೆಲ್ಲ ನ್ಯಾಲ್ಗಿ ಒಳಾಗ ಎಳ್ಕೊತಾವ್. ಕಡಿ ಸ್ವಾದರ್ ಮಾವ ಕೇಳ್ತಾನ ನೀ ಯಾರಿದ್ದಿ ಅಂದುನ ನಾನಿನ್ನ ಸ್ವಾದ್ರಳ್ಯಾ ಇದ್ದ. ನಿನ್ನಲಿಕಿ ಹೋಗ್ಬ್ಯಾಂತ ಅವ್ವ ಖಳ್ಸ್ಯಾಳ್ ಅಂತದನ್. ಆಗ ಆವ ನಿಂಗ್ಯಾನ್ಬೇಕು ಕೇಳು ಕುಡ್ತಾ ಅಂತಂದ ಅದಕ ಇವ ನಾರೋಳ್ಸೋರಿ ಅಂತದ ಅದಕ ಅಂವ ಆಕಿ ಹ್ಯಾಂಗ್ ಸಿಗ್ತಾಳೊ ನಿಂಗss ಅಂತಾನ ಹ್ಯಾಂಗಾರಾ ಮಾಡಿ ಆಕಿಗಿ ಹುಡ್ಕುಡುಬೇಕು ಮಮ್ಮ ಅಂದುನ್ ಆಂವಾ ಇವ್ನಿಗಿ ಈ ಗಿಡಕ್ ಐದ್ ಫೇರಿಹುಡಿ ಮಾರಿ ಮ್ಯಾಲ್ಕ ಮಾಡ್ಬ್ಯಾಡ ಇಕ ತೊಕೊ ಪಂಚ್ಯಾರ್ತಿ ಅಂತ್ಹೇಳ್ದನು. ತಿರ್ಗಾ ಪಾರಿ ಪಂಚ್ಯಾರ್ತಿದಾಗ ಠಪ್ಪಾ ಅಂತ ಒಂದ ಚೀಜ್ ಬಿಳ್ತದ ಅದು ಶಲ್ಕದಾಗ ಕಟ್ಕೊ. ಹಿಂದುಕ್ ತಿರಿಗಿ ನೋಡ್ಬ್ಯಾಡ್ ತಿರಿಗಿ ನೋಡ್ದುರ ಕಲ್ಲಾಯಿತಿ ನೋಡಂದ. ಹೀಂಗ್ ಮಾಡಾಣ ನಾರೋಳ್ಸೋರಿ ಸಿಕ್ತು. ಬರಾಪಾರಿ ಮಮ್ಮಾಗ ನಮಸ್ಕಾರ ಮಾಡಿ ಬಂದ.

ಇಕಡಿ ರಾಜಾ ರಾಣಿ ಅನ್ನ ನೀರ್ಬಿಟ್ಟು ಖುಂತಿರು ಮಗಾ ಎತ್ಹೋದೊ ಯಾನೋ ಅಂತ. ಅಟ್ರಾಗ ರಾಜೆರ್ ಮಗ ಹೊಂಟಾನ್ ಅಂತ ಸುದ್ದಿ ತಿಳಿತು. ಹಣಮನ್ದೇವ್ರ ಗುಡಿಗಿ ಹೋಗಿ ಅಲ್ಲೆ ಎಲ್ಲ ಯಾವಸ್ತಾ ಇತ್ತು ಝುಳಕಾ ಮಾಡಿ ಟೆಂಗ್ ಒಡಿತಾನ ಊದಿನ ಖಡ್ಡಿ ಹಚ್ಚಿ ಪೂಜಾ ಮಾಡ್ತಾನ್ . ಶಲ್ಯಾಬಾಗಿನಹಳ್ಳ ಒಡ್ಡ. ಅದ್ರಾಗಿಂದ ಒಂದ್ ಪೋರಿ ಬಂತು ಥಳ ಥಳ ಮಿಂಚ್ಕೋತ್. ಆಗಿಗಿ ರಥದಾಗ ಖೊಡ್ಸೊಂಡು ರಾಜನ ಮನಿಥಾನಾ ಮೆರಣ್ಗಿ ತೆಗ್ದುರು.

ತೊತ್ತು ಅಂತಾಳ ಆ ಪೋರಿಗಿ ನಿನ್ನರಬಿ ನಂಗ್ ಕುಡ್ರಿ ನಂದರ್ಬಿ ನೀ ಉಟ್ಕೊ ಅಂದಳೂ ಆಕಿ ಹಾಂಗೆ ಮಾಡ್ದುಳು. ಹೊಸಾಕಿ ಪೋರಿ ಆಕಿಗಿ ಯಾನ್ಬೀಖುನಾ ಇದಿಲ್ಲ. ಇಕಿಗಿ ಉಡ್ಲಾಲಾಕ ಹಚ್ಚುದುರ್ ಯಾಕಂದರ ತೊತ್ತು ಪಲಂಗ್ ಮ್ಯಾಗ್ ಹೊಯ್ತು. ರಾಜನ ತೊಳಿಲಾಕ ಬೊಳಿಲಾಕ ಹಚ್ದುದುರ್ ಯಾಕಂದರ ತೊತ್ತು ಪಲಂಗ್ ಮ್ಯಾಗ್ ಹೊಯ್ತು. ರಾಜನ ಮಗ್ನಿಗಿ ಖುನಾನೆ ಇಲ್ಲ. ತೊತ್ತಿಗಿ ಹೊರಾಗ್ ಹಾಕ್ರಿ ಅಂತ ಬಯ್ತು ಹುಡ್ದು ಖಳುಸ್ದುರ್. ಅಟ್ಟ ಮಗ್ನಿಗಿ ಖುನಾನೆ ಇಲ್ಲ. ತೊತ್ತಿಗಿ ಮನ್ಯಾಗ ಇಟ್ಕೊಂಡುನು ನಾರೋಳ್ಸೋರಿ ಹೊಯ್ತುಪಾ ಆರೇಣದಾಗ ಹೋಗಿ ಖುಂತುಳ್. ತೊತ್ತಿಗಿ ಮನ್ಯಾಗ ಇಟ್ಕೊಂಡುನು ನಾರೋಳ್ಸೋರಿ ಹೊಯ್ತುಪಾ ಅಡಿಗಿ.

ಅಲ್ಲಿಡ್ಡಾಗಿಂದ್ ಪರಮಾತ್ಮ ಇಳ್ದುನ್. ಇಕಿನ್ ರೂಪ ಹೆಚ್ಮಾಡ್ದುನ್. ಒಂಧಿನ ರಾಜಾನಮಗ ಸಿಕಾರಿಗಿ ಬರ್ತಾನ್ ಅಲ್ಲಿ ಎಡ್ಡುಗಬ್ಬಿಗುಳು ನಾರೊಳ್ಳೋರಿಗಿ ಅಡಿಬಳ್‌ಸ್ವಾ. ತೊತ್ ಪೋರಿಗಿ ಸೋಬಾನ್ ಮಾಡ್ವ ಅಂತಂದು ರಾಜನ ಮಗ ಪರೇಶಾನ ಆಯ್ತಾನ. ನೀಡ್ಕಿ ಆಯ್ತಾವ್ ಅಲೊಂದು ಘುಡ್ಸಿ ಕಾಣ್ತುದ ಅಲ್ಲೋಗಿ ನೀರು ಕುಡುಯವ್ವಾss ನೀಡ್ಕಿ ಆಗ್ಯಾವ. ಅಂತಾನ ಆಕಿನೀರು ಕುಡ್ತಾಳ್‌ಆಕಿಗಿ ನೋಡಾಣ ತೋಲ್ ತೋಲ್ ಪರೇಶಾನ್ ಆಯ್ತಾನ್. ಯಾಕಂದರ ನಾ ತಂದಿಂದ ಪೋರಿ ಖಿಂತಾಬಿ ಚೆದುರದಲ್ಲ ಇದು ಕೈಲಾಸದಿಂದ ಬಂತೊ ಯಾನೊ ಅಂತ ನೀರು ತೊಕೊತಾ ಹಾಂಗೆ ಮಾರಿ ನೋಡ್ಕೊತ್ ನಿಂತ. ನೀ ಯಾರು ಎಂತು ಅಂತ ಕೇಳ್ದುರ್ ನಾರೋಳ್ಳೋರಿ ಅಂತ ಖೂನಾ ಆಗಿ ಕರಕೊಂಡು ಮನಿಗಿ ಹೊಯ್ತಾನ್. ಮನ್ಯಾಗಿದ್ದಿನ್ ತೊತ್ತಿಗಿ ಬೇ ಇಜ್ಜತ್ ಮಾಡಿ ಹೊರಾಗ್ನಳ್ಸುದುನ್ ನಾರೋಳ್ಳೋರಿಗಿ ಪಟ್ಟಕಟ್ಕೊಂಡು ಗಾದಿಮ್ಯಾಲ ಖೂಂತ್ ರಾಜ್ ಮಾಡ್ತಾನ.

## ೨೧. ತಂಗಿ, ಅಣ್ದೇರ್

**ಶಂಕರರಾವ ದಾಸ ಮುತ್ತಂಗಿ, ೪೫ ವರ್ಷ**
**ಹುಮನಾಬಾದ ತಾಲೂಕು**

ಒಂದೂರಾಗ ಇಬ್ಬರಣ್ಣಾದೇರ್ ಇರ್ತಾವ ಒಬಾಕಿ ತಂಗಿ ಇರ್ತಾಳ್. ಅವು ತಂಗಿಗಿ ತೋಲ್ ತೋಲ್ ಮಾಯಾ ಮಾಡ್ತಾವ್ ಒಂಧಿನಾ ಅವ್ರ ತಂಗಿ ಕೆರಿಗಿ ಬಗಿಲಾಕ್ ಹೊಯ್ತಾಳ. ಒಗಿಲಾಕ್ಹೋಗಾಣ ಅಲ್ಲಿ ದೆವ್ ಬರ್ತುದ್. ಬರಾಣಾ ಅವ್ರು ತಂಗಿಗಿ ಯತ್ಕೊಣ್ಹೊಯ್ತುದ. ಅಣ್ದೇರಿಗಿ ಖೂನಾ ಆಯ್ತುದ್. ಆಕಿಗಿ ಹುಡ್ಕಾಕ್ ಧೊಡ್ಡಾವಂಬದು ಖಾರಾ ರೊಟ್ಟಿ ತೊಕೊತ್ತಾನ. ಶಾಣ್ಣಾವ ಬೆಣ್ಣಿ ರೊಟ್ಟಿ ತೊಕೊತಾನ ಜರ್ರ ಮುಂದುಕ್ಹೋಗಾಣ ಅಲ್ಲಿ ಒಂದು ಕತ್ತಿ ಇರ್ತುದ. ಅಣ್ಣಾಗ ಅಂತಾನ ಎಣಾ ಎಣಾ ಕತ್ತಿ ತೊಕೊ ಅಂತಾನ ನಿಂದು ಬೆಣ್ಣಿರೊಟ್ಟಿ ಕುಡು ನಿಂಗ್ಕತ್ತಿ ಇಸ್ಕುಡ್ತಾ ಅಂತಾನ್. ಅಂಬಾಣ ಜರಾ ಮುಂದುಕ್ಹೋಗಿ ಇಸ್ಕುಡ್ತಾನ್. ಮುಂದುಕ್ಹೋಯ್ತಾವ ಅಲ್ಲಿ ಇಸ್ಕುಡ್ತಾನ್. ಮುಂದುಕ್ಹೋಯ್ತಾವ ಅಲ್ಲಿ ಮುಂದುಕ್ಹೋಗಿ ಇಸ್ಕುಡ್ತಾನ್. ಮತ್‌ಮುಂದುಕ್ಹೋಯ್ತಾವ ಅಲ್ಲಿ ಒಬ್ಬುರ್ ಘುಸಿ ಮಾರೋರ್ ಇರ್ತಾವ. ಅವಯಾನ್ ಇಸ್ಕುಡ್ತಾನ್. ಆಗ್ಲಿಂತ ಘುಸಿ ಇಸ್ಕುಡಾಣ ಅಂತಾನ ನಂದ್ಬೆಣ್ಣಿ ರೊಟ್ಟಿಕುಡು ನಾನಿಂಗ್ಘಸಿ ಇಸ್ಕುಡ್ತಾ ಅಂತಾನ್. ಆಗ್ಲಿಂತ ಘುಸಿ ಇಸ್ಕುಡಾಣ ದೆವ್ವಿನ್ಮೂನಿ ಬರ್ತುದ್ ಅಲ್ಲಿ ತಂಗಿ ಇರ್ತಾಳ್. ತಂಗಿ ನೀ ಅಜ್ಜ್ಯಾಡ ನಾವು ಬಂದಿದೆ ಅಂತಾವ. ದೆವ್ ಮನ್ಯಾಗ ಇರಾಲ್ ದೆವ ಬರ್ತುದ ಬೆಣ್ಣಿ ಗರಮ್ ಮಾಡಿ ದೆವ್ವಿನ್ತೆಲಿಮ್ಯಾಲ ತುಪ್ಪಾ ಹಾಕ್ತಾವ್. ಹಾಕಾಣ ಪೆಟ್ಟ್ಯಾಗಿ ನಿನ್ ಖಿಂತ ಧೊಡ್ ದೆವ್ವಿದ ಅಂಧು ಘುಸಿ ಗರಮ್ಮಾಡಿ ಕತ್ತಿ ಕುಂಡ್ಯಾಗ ತಿವ್ಯಾಣ ಕತ್ತಿ ಚೀರ್ತದ ಅಬ್ಬಾ ನನಖಿಂತ ಧೊಡ್ ದೆವ್ವಾದ ಅಂತ್ಹೇಳಿ ಓಡ್ಹೋಯ್ತುದ. ಇವ್ರು ತಂಗಿಗಿ ತೊಕೊಂಡು ಬರ್ತಾವ್.

## ೭.೨.೨ ಬೀದರ ಕನ್ನಡದ ಜನಪದ ಹಾಡುಗಳು

೧

ಕಾಶಿಬಾಯಿ ವೈಜನಿಥ ಭಾಂತಬ್ರಾ

ಅದ್ದನ ಘೋದಿ ತಂದು
ಕುಟ್ಟಿಹುಗ್ಗಿಯ ಮಾಡಿ
ಅಗಡದಿಗಡ ಗಂಡ ಬಂದನೆ
ನಾ ಉಂಡಿಲ ತಿಂದಿಲ

೧ ಅಗಡ ಇವ ದಿಗಡ ಗಂಡ ಬಂದ
ಹುಗ್ಗಿಗಡಿಗಿ ಹುಲಿಯ ಪೋರ
ತಂದನಲ್ಲೆ ನಾ ಉಂಡ

೨ ಹುಲಿಯ ಇವ ಪೋರ
ತಂದನಲ್ಲ ಹುಗ್ಗಿ ಗಡಗಿ
ಮೈಯಲ್ಲ ರಪರಪ ಬಡದಾನೆ

೩ ಮೈಯಲ್ಲ ರಪರಪ ಬಡದಾನೆ
ಹುಗ್ಗಿ ಗಡಗಿ ನೆರಹೊರ
ಮಂದಿ ನೆರದಾವೆ ನಾ ಉಂಡ

೪ ಮಂದಿ ನೆರದಾವ ಮಂದಿ
ನೆರದಾವ ಹುಗ್ಗಿ ಗಡಗಿ
ಮೈಯಲ್ಲ ರಪ ರಪ ಬಡದಾನೆ

೫ ಮೈಯಲ್ಲ ರಪ ರಪ ಬಡದಾನ
ಹುಗ್ಗಿ ಗಡಗಿ ಹುಮ್ನಾಬಾದಿ
ಕಾಗದ ಬರದಾನೆ ನಾ ಉಂಡಿಲ ತಿಂದಿಲ

೬ ಹುಮ್ನಾಬಾದ ಕಾಗದ ಬರದಾನೆ
ಹುಗ್ಗಿ ಗಡಗಿ ಅಮಿನ ಪೋಲಿಸ
ಬಂದಾರೆ ನಾ ಉಂಡಿಲ ತಿಂದಿಲ

೭ ಅಮಿನ ಪೋಲಿಸ ಬಂದಾರೆ
ಹುಗ್ಗಿ ಗಡಗಿ ಹಾತಕಡಿ
ಅವರು ಹಾಕ್ಯಾರೆ ನಾಲುಂಡಿಲ ತಿಂದಿಲ

ಹಾತಕಡಿ ಇನ ಅವನ ಹಾಕ್ಯಾರೆ
ಹುಗ್ಗಿ ಗಡಗಿ ಭಳ್ಕಿಗೆ ಬಂದ
ಬೈಲಾಯಿತು ನಾ ಉಂಡಿಲ ತಿಂದಿಲ

೯ ಭಲ್ಕಿಗೆ ಇನ ಬಂದ ಬಯಲಾಯಿತು
ಹುಗ್ಗಿ ಗಡಗಿ ತವರ ಮನಿ ಆಕಿನ
ಖಳವ್ಯಾರೆ ನಾ ಉಂಡಿಲ ತಿಂದಿಲ

೧೦ ತವರಮನಿ ಆಕಿನ ಖಳವ್ಯಾರೆ ಹುಗ್ಗಿಗಡಗಿ
ಎಳ್ಳಿನಟು ಮಾನ ಇಟ್ಟಿಲೆ
ನಾ ಉಂಡಿಲ ತಿಂದಿಲ

೨

*ಕಮಲಾಬಾಯಿ ಬೇಂದ್ರೆ ನಿಡೇಬಾನ*

೧ ಗಾಂಧಿ ಮ್ಹಾತ್ಮಾಜಿ ಮಾತಾ
ಮಾನ್ಯರು ಕೀಳಿರಿ ಕುಂತ
ಮ್ಹಾತ್ಮಾಜಿ ಹೆಂಥಾ ಪುಣ್ಯಾವಂತಾ ॥ ಸೋಬಾನೆ॥

೨ ನಡದವರಿಗಿ ಧೂರಿನ ಹಾದಿ
ದುಡದವರಿಗಿ ಸಿಕ್ಕಿತು ಗಾದಿ
ದುಡಿದವರ ನಮ್ ದಶವಂತ ಮ್ಹಾತ್ಮಗಾಂಧಿ

೩ ಎಲ್ಲೊರು ಒಂದಿರಲೆಂತ
ವರಸ ವಂದತ ನಿಂತ
ಅನ್ನಿಲದ ಕೋಪ ಹಾಲಿನ ಹೊರತಾ ॥ಸೋಬಾನ॥

೪ ಎಲ್ಲೊರು ಸತ್ಯನುಡಿಲೆಂತ
ಮಾಡಿಟ್ಟರ ಹೆಂಥ ಘಾತ
ಮ್ಹಾತ್ಮಾಜಿ ಹೆಂತ ಪುಣ್ಯವಂತಾ ॥ಸೋಬಾನೆ॥

೫ ಹಾವಿನ್ಹಂಗ ಹುಡ್ಯಾರ ಬಂದಿ
ಎಲ್ಲಿಲ್ಲ ಸಿಗುವಲ್ದ ಸಂದಿ
ಅವರಿಗಂತಾರ ನ್ಹೀರುತಂದಿ ॥ಸೋಬಾನೆ॥

೩

*ಕಮಲಾಬಾಯಿ ಬೇಂದ್ರೆ ನಿಡೇಬಾನ*

॥ಪ॥ ಚೆಲುವೆ ನಿನ್ನ ನೋಡಲಾಕ
ಒಳ್ಳೆ ಹುಡುಗ ಬರ್ತಾನಂತ
ಭಾಳ ಧೂರಿಂದ ಬರ್ತಾನಂತ
ಮ್ಹಾರುತಿ ಕಾರ ತರುತಾನಂತ
ಶಣಿವ್ಯಾರ ದಿವಸ ಬರುತಾನಂತ ॥ಚಲುವೆ॥

೧ ಊರಿಗಿ ದೊಡ್ಡ ಹೆಸರ ಅಂತ
ನೂರು ಎಕ್ಕರ ಭೂಮಿಯಂತ
ಕಾರು ಬರೆ ಸೋಕಿಗಂತ

ನಾಲ್ಕ ಟ್ರಾಕ್ಟರ್ ಇದ್ದಾವಂತ
ಐದು ಮಜಲಿ ಬಿಲ್ಡಿಂಗಂತ
ಅದರಾಗ್ಹತ್ತ ಆಳಂತ
ಕರೆಂಟು ಬಿಲ್ಲು ಘುಂಬಿಲ್ಲಂತ
ಫೀಜು ತೆಕ್ಕೊಂಡು ಹೋಗ್ಯಾರಂತ

೨ ಎಲೆಕ್ಷ್ಯಾನ ನಿಂತಾನಂತ
ಯಾರು ಓಟ ಹಾಕ್ಲಿಲಂತ
ಇವನ ನಡತಿ ಹೆಂಥದಂತ
ಪೋಲಿಸರಿಗೆ ಗೊತ್ತಾದಂತ
ಬೇಡಿ ಹಾಕಿ ಒಯ್ದಾರಂತ
ಒಳ್ಳೆ ಶಿಕ್ಷೆ ಕೊಟ್ಟಾರಂತ
ಹತ್ತುವರ್ಷ ಜೇಲ ಬಿದ್ದಾನಂತ
ಮನ್ನೆ ಬಿಟ್ಟು ಬಂದಾನಂತ

೩ ಹಗಲು ಇಸ್ಪಟ್ ಆಡ್ತಾನಂತ
ರಾತ್ರಿ ಸೊಲ್ಪು ಕುಡಿತಾನಂತ
ಹುಡುಗೆರಿಗೆ ಕೆಣಕತಾನಂತ
ಕೈ ಹಿಡದು ಜಗ್ತಾನಂತ
ಮಂದಿ ಕೆಲದಿವಸ ನೋಡ್ಯಾರಂತ
ಒಮ್ಮೆ ಕೈಗಿ ಸಿಕ್ಯಾನಂತ
ಬಡಿದು ಹಲ್ಲು ಮುರಿದಾರಂತ
ಹಲ್ಲಿನ ಸಟ್ಟ ಹಾಕ್ಯಾನಂತ ||ಚಲುವೆ||

೪ ಮನ್ಯಾಗಿನ ರೊಕ್ಕ ಎಬುಸ್ತಾನಂತ
ಸೂಳ್ಯಾರ ಮನೆಗೆ ಹೋಗ್ತಾನಂತ
ಗಾಂಜಾ ಸಿಗರೇಟ್ ಬಿಗಿತಾನಂತ
ಹೊಸ ಹುಡಗಿ ಬೇಡ್ತಾನಂತ .
ಮಂದಿ ಕೆಲ ದಿವಸ ನೋಡ್ಯಾರಂತ
ಒಮ್ಮೆ ಕೈಗೆ ಸಿಕ್ಯಾನಂತ
ಹಿಡದು ಕಾಲ ಮುರದಾರಂತ
ಪ್ಲಾಸ್ಟಿಕ್ ಕಾಲ ಹಾಕ್ಯಾನಂತ ||ಚಲುವೆ||

೪

*ಕಮಲಾಬಾಯಿ ಬೇಂದ್ರೆ ನಿಡೇಬಾನ*

ಎಡಕಂಬದ ನಡುವ ಅಡ್ಡಾಗಿ
ಮಂಚಹಾಕಿ ಪತ್ತರ ಬಂದಾವ
ಇವ ನೋಡರಿ ಸೋಭಾಗ್ಯ

೧. ಪತ್ತರ ಬಂದರ ಮತ್ತೆದ್ದು ನೋಡ್ಯಾರ
ಅವ್ವಾವನ ಮಗಳೊಂದರಗಿಣ ಸೋಭಾಗ್ಯ

೨. ಅವ್ವಾವನ ಮಗಳ ಅರಗಿಣಿ ಕೈಯಾಗಿರುವ
ಸಿಕ್ಕಾದುಂಗುರ ಗೆದಿಯಾಬೇಕೆ ಸೋಭಾಗ್ಯ

೩ ಹತ್ತ ಕಂಬದ ನಡುವ ಹೊತ್ತಾರ
ಮಂಚ ಹಾಕಿ ಹೊತ್ತಿಗಿ ಬಂದಾನ
ಇವ ನೋಡರಿ ಸೋಬಾಗ್ಯ

೪. ಹೊತ್ತಿಗೆ ಬಂದರ ಮುತ್ತೈದೆ ನೋಡ್ಯಾನ
ಅವ್ವಾವನ ಮಗಳ ಒಂದರಗಿಣಿ ಸೋಭಾಗ್ಯ

೫ ಟೊಂಕಿಗಿ ಹೊನ್ನ ತಂಬಿಗಿ ನೀರ
ಮುಗಿದು ತಿರುಗಲ್ಲದ ರಾಜ ತಿರುಗಿದರ ಸೋಭಾಗ್ಯ

೬ ತಿರುಗಲ್ಲದ ರಾಜ ತಿರುಗುತ್ತಾ ತಂದಾರ
ಮನಿಗೊಪ್ಪಂತ ಮಡದಿಗಿ ಸೋಭಾಗ್ಯ
ಮಂಚಕ್ಕೊಪ್ಪಂಥ ಮಡದಿಗಿ ಸೋಭಾಗ್ಯ

೭ ಸುಣ್ಣಽಽ ನೆವನ ಮಾಡಿ ಹೆಣ್ಣಗೊಳಿಯಾಕೆ
ಕರದು ಮಾತನಾಡ್ಯರ ಮನಧಣಿಯು ಸೋಭಾಗ್ಯ

೮ ಮಾತಾನೆ ಅಡ್ಯಾರೆ ಮನಧಣಿಯ
ಸುಮಧುರ ಜ್ಯೋತ ಮುತ್ತೆಲ್ಲ
ದೊರದಿದೆ ಸೋಭಾಗ್ಯ

೯. ಕಾಚಿನ ನೆನಪಮಾಡಿ ನಾಚಿ ಒಳಿಯಾಕೆ ಕರದು
ಮಾತನಾಡ್ಯಾರ ಮನದಣಿಯ ಸೋಭಾಗ್ಯ

೧೦. ಮಾತಾನ ಆಡ್ಯಾರ ಮನದಿಣಿಯ
ಸಮದುರ ಜ್ಯೋತ ಮತ್ತೆಲ್ಲಿ ದೂರಡಿದೆ ಸೋಭಾಗ್ಯ

೭

*ಕಮಲಾಬಾಯಿ ಬೇಂದ್ರೆ ನಿಡೇಬಾನ*

೧. ಕುದರಿ ಒಂದು ಹುಟ್ಯಾದ ಕುದರಿ ಒಂದು ಸಾವಿರ
ಬೀದರ ಹುಟ್ಯಾದ ಬನದಾಗ ಸೋ

೨. ಬೀದರನೆ ಹುಟ್ಯಾದ ಬನದಾಗ ತಾಯಿ ಹುಟ್ಯಾಳ
ಚದರಿ ಹುಟ್ಯಾಳ ತಂಗ್ಯಾಮನೆ ಸೋ

೩. ಆನೆಯೊಂದು ಹುಟ್ಯಾದ ಆನೆ ಒಂದು ಸಾವಿರ
ಮೀನ ಹುಟ್ಯಾದ ಜಲದ್ಯಾಗ

೪ ಮೀನ ಹುಟ್ಯಾದ ಜಲದ್ಯಾಗ ತಾಯಿ ಹುಟ್ಯಾಳ
ಚದರಿ ಹುಟ್ಯಾಳ ತಂಗ್ಯಮ್ಮನ ಸೋ

೫ ಒಂಟೆ ವಂದು ಹುಟ್ಟ್ಯಾದ ಒಂಟೆ ವಂದುಸಾವಿರ
ಮಂಟಪ ಹುಟ್ಟ್ಯಾದ ಮಳದಾಗ ಸೋ

೬ ಮಂಟಪ ಹುಟ್ಟ್ಯಾದ ಮಳದಾಗ ತಾಯಿಹುಟ್ಟ್ಯಾಳ
ಪಂಡಿತ ಹುಟ್ಟ್ಯಾನ ಸೋಭಾಗ್ಯ
ಗಂಡ ಹುಟ್ಟ್ಯಾನ ಸೋಭಾಗ್ಯ

೭ ಎತ್ ವಂದ ಹುಟ್ಟ್ಯಾದ ಎತ್ ವಂದಸಾವಿರ
ಮತ್ತ ಹುಟ್ಟ್ಯಾದ ಜಲದ್ಯಾಗ ಸೋಭಾಗ್ಯ

೮ ಮತ್ತ ಹುಟ್ಟ್ಯಾದ ಜಲದ್ಯಾಗ ತಾಯಿ ಹುಟ್ಟ್ಯಾಳ
ಗುಂಡ್ಯಾ ಹುಟ್ಟ್ಯಾನ ಮನಿದಾಗ ಸೋಭಾಗ್ಯ

೮

ಮಂಗಳಾರತಿ ಜಯ ಮಂಗಳಾರತಿ
ಮಂಗಳಾರತಿ ನಮ್ ರಂಗಕೃಷ್ಣಾಗೆ

೧ ಗಂಧ ಸೋಸ್ಯಾಳ ಸಣ್ ಡಬಕ ಥುಂಬ್ಯಾಳೆ
ಡಬಕ ಥುಂಬ್ಯಾಳ ಶಿವನ ಗದ್ಯಗೇರ್ದಾಳೆ

೨ ಸೀರಿ ಉಟ್ಯಾಳ ಸಣ್ ಕುಬಸಾ ತೊಟ್ಟ್ಯಾಳೆ
ಕುಬ್ಸ ತೊಟ್ಟ್ಯಾಳೆ ಪುರುಷ್ಯನೆದರೆ ಕುಂತಾಳೆ

೩ ದಂಡಿಗ್ಹಾಕ್ಯಾಳ ಸಣ್ ಕುರುಮ ಹಾಕ್ಯಾಳೆ
ಪುರುಷನ ಎಡಕೆ ಕುಂತಾಳೆ

೯

*ಕಮಲಾಬಾಯಿ ಬೇಂದ್ರೆ ನಿಡೇಬಾನ*

ಬಾಲಿ ಮೈನೆರದ ಸುದ್ದಿ ಯಾರ್ಯಾರು ಕೇಳ್ಯಾರೆ
ಅತ್ತಿ ಕೇಳ್ಯಾಳೆ ಮನಿದಾಗ ಸೋ

೧ ಅತ್ತಿಗೆ ಕೇಳ್ಯಾಳೆ ಮನದಾಗ ಗುಂಡಮ್ಮ(೨)
ಹೋಗಿ ಹಾರೂನ ಕರಸ್ಯಾಳೆ ಸೋ

೨ ಹೋಗಿನ ಹಾರುನ ಕರಸುತಾ ಕೇಳ್ಯಾಳ
ಬಾಲಿ ಮೈ ನೆರದ ದಿನ ಹೇಳರಿ ಸೋ

೩ ಧಿನ ಏನು ಕೇಳಿರಿ ಧಿನ ಭಾಳ ಚೌಕಾಳ
ಹರಿ ನೀರ ಎರದು ಮಾಡಿ ಕೂಡ ಸರಿ ಸೋ

೪ ಹರಿನೀರ ಇನ ಎರದ ಮಾಡಿಕುದರಿ ತಂಗ್ಯಮ್ಮ
ನೆಂಪಿಲಿ ಸಿರಿಗಂಧ ಹಚ್ಚಕುದರಿ ಸೋ

೫ ಬಾಲಿ ಮೈ ನೆರದ ಸುದ್ದಿ ಯಾರ್ಯಾರು ಕೇಳ್ಯಾರೆ
ಮಾವ ಕೇಳ್ಯಾನೆ ಮಳದಾಗ ಸೋ

೬ ಮಾವಾನೆ ಕೇಳ್ಯಾನ ಮಳದಾಗೆ ವೈಜಿನಾಥ
ಹೋಗಿ ಕರಸ್ಯಾರೆ ಹಾರುನ ಸೋ

೭ ಮಾವಾನ ಕೇಳ್ಯಾನ ಮಳದಾಗ ವೈಜಿನಾಥ
ಹೋಗಿ ಕರಸ್ಯಾರೆ ಹಾರುವ ಸೋ

೮ ಹೋಗಿನೆ ಹಾರುನ ಕರಸಿನ ಕೇಳ್ಯಾರ
ಬಾಲಿ ಮ್ಮೆ ನೆರದ ದಿನ ಹೇಳಿರಿ ಸೋ

೯ ದಿನ ಏನ ಕೇಳಿರಿ ಧಿನ ಭಾಳ ಚೌಕಾಳ
ಹರಿ ನೀರ ಎರದು ಮಡಿ ಉಡಸರಿ ಸೋ

೧೦ ಹರಿ ನೀರ ಇನ ಎರದ ಮಾಡಿ ಕುಡರಿ
ತಂಗ್ಯಮ್ಮಗ ಡಬ್ಬಿಲಿ ಭಂಗಾರ
ಇಡಕುಡರಿ ಸೋ

೧೦

*ಕಮಲಾಬಾಯಿ ಬೇಂದ್ರೆ ನಿಡೇಬಾನ*

೧ ಐದು ಸಾವೀರ ಹೊನ್ನ ಹೋರಿಮ್ಯಾಲ್ಹೇರ ಕೊಂಡ
ಒಂದೂರಾಗ ನಿನ್ನ ಹುಡಕಿದ ಸೋಭಾಗ್ಯ

೨ ವಂದ ಊರಾಗ ನಿನ್ನ ಹುಡಕಿ ತಂದಂಥ ಹೆಣ್ಣೆ
ನಿನ್ನ ತವರವರ ಗುರುತ್ಹೇಳೆ ಸೋಭಾಗ್ಯ

೩ ನನ್ನ ತವರೂರ ಗುರುತ ನೀವೇನು ಕೇಳಿರಿ ಸ್ವಾಮಿ
ನಾರೇಣ ಪ್ಯಾಟಿ ಹೊಳಕೋಟೆ ಸೋಭಾಗ್ಯ

೪ ನಾರೇಣ ಪ್ಯಾಟಿ ಹೊಳಕ್ವಾಟಿ ಬಾಜಾರದಾಗ
ಭಂಗಾರ ಮಾರವಾರ ಮಗಳಿದ್ದ ಸೋಭಾಗ್ಯ

೫. ನಾರೇ ಪ್ಯಾಟಿ ಹೊಳಕೋಟೆ ಬಾಜಾರದಾಗ
ಮುತ್ತು ಮಾರವರ ಶಣತಂಗಿ

೬ ಅತ್ತಿಂದ ಬಂದಾನೆ ಇತ್ತಿಂದ ಬಂದಾನೆ
ಭಂಡಿಲಿ ಬಂದಾವೆ ನೆನದಂಡಿ ಸೋಭಾಗ್ಯ

೭ ಭಂಡಿಲಿ ಬಂದಾವೆ ನೆನದಂಡಿ ತಂಗ್ಯಮಗ
ಅಂಗಳದಲ್ಲಾಡುವ ಮಗಳಿಗೆ ಸೋಭಾಗ್ಯ

೮ ಭಂಡಿಲಿ ಬಂದಾವೆ ನೆನದಂಡಿ ತಂಗ್ಯಮಗ
ಬುಟ್ಟಿಲಿ ಬಂದಾವ ನೆನದಂಡಿ ಸೋಭಾಗ್ಯ

೯. ಬುಟ್ಟಿಲಿ ಬಂದಾವ ನೆನದಂಡಿ ತಂಗ್ಯಮಗ
ಕಟ್ಟಿಲಿ ಆಡುವ ಮಗಳಿಗೆ ಸೋಭಾಗ್ಯ

ಕಮಲಾಬಾಯಿ ಬೇಂದ್ರೆ ನಿಡೇಬಾನ

ಮನ್ನರ ಮನಿಗಿ ಅನ್ನರು ಮಂದಾರ
ನೀವು ಬಂದ ಬಗಿಯ ನಮಗ್ಹೇಳರಿ ಸೋಭಾಗ್ಯ

೧ ಬಗಿಯನು ಕೇಳರಿ ಬಗಿ ಏನು ಹೇಳರಿ
ನಿಮ್ಮ ಹೆಣ್ಣ ನಾವು ಬೇಡಲು ಬಂದೆ ಸೋಭಾಗ್ಯ

೨ ನಮ ಹೆಣ್ಣಿಗಿ ನೀವು ಬೇಡಲು ಬಂದರ
ಮನಿ ನೋಡಿ ಮಗಳ ಕುಡುತೆವರಿ ಸೋಭಾಗ್ಯ

೩ ಮನೆಯನು ನೋಡಿರಿ ಮಾಳಿಗಿ ಖಂಭ
ಮನೆಯ ಮಂಟಪ ಸಾಲಿ
ಗಿಲಿಗಿಲಿ ಮಂಚ ಗಿಳಿಹಿಂಡ ಪಾಲಕಿ
ಮನಿದಾಗಿನತ್ತಿ ಗುಣವಂತಿ ಸೋಭಾಗ್ಯ

೪ ಮನಿದಾಗಿನ ಅತ್ತಿ ಗುಣವಂತಿ ಇದ್ದರ
ಅಳ್ಯ ನೋಡಿ ಮಗಳ ಕುಡುತೆವರಿ ಸೋಭಾಗ್ಯ

೫ ಅಳ್ಯಗೇನು ನೋಡಿರಿ ಕಾಲಾಗ ಕರಿಬೂಟ
ಮೈಯಾಗಿ ಬಿಳಿಕೋಟ
ಕೂಡಲಿ ಕುದ್ದರಿ ಹಿಡಿಯಲು ಛತ್ತರಿ
ನಿಮತಕ್ಕ ಹರ ಅಳಿದೇವ ಸೋಭಾಗ್ಯ

೬. ಭಂಗಾರ ಘಡಿ ಇಟ್ಟು ಬೆಳ್ಳಿ ಉಡುವಣ ಕಟ್ಟಿ
ಮುತ್ತಿನ ಮಂದೇಲು (ಮುಂಡಾಸಿ)
ಮಸರೇಜ ಧೋತೂರ
ಮತ್ತ್ಯಾಕ ಮುನದಿರಿ ಮಗಳರಸ ಸೋಭಾಗ್ಯ

೭ ಮಗಳಿಗೆನ ಕೊಟ್ಟ ಕೂಸ ಕುಡ್ಯಾ ಮಿಳ್ಳಿ
ಹೈನದ ಎಮ್ಮಿ ಹಲಗಿಯತೊಟ್ಟಲ
ಇತ್ಯಾಲ್ಲ ಬೇಡಿ ಹಟ ಮಾಡಿ ಸೋಭಾಗ್ಯ

೮ ಹುವಿನ ಹಾಸಿಕೆ ಮ್ಯಾಲ ಕುಂತಾಳ
ಪಾದುರಿ ಅತ್ತಿದೇರು ಹರ ಎಡ ಬಲ ಸೋಭಾಗ್ಯ

೯ ಅತ್ತಿದೇರು ಹರ ಎಡಬಲ ತಂಗ್ಯಮ್ಮ
ಮೆಲ್ಲರ ಎದ್ದು ಸೆರಣನೆ ಸೋಭಾಗ್ಯ

೧೦ ಘೋಧಿ ಹಾಸಿಕಿಮ್ಯಾಲ ಕುಂತಾಳ ಪಾದುರಿ
ಮಾವದೇರು ಹರ ಎಡ ಬಲ ಸೋಭಾಗ್ಯ

೧೧ ಮಾವದೇರು ಹಾರ ಎಡಬಲ ತಂಗ್ಯಮ್ಮ
ಮೆಲ್ಲರ ಎದ್ದು ಸೆರಣನೆ ಸೋಭಾಗ್ಯ

೧೨ ಆಳಿದೇವರು ಹರ ಎಡಬಲ ಅರಸರು
ಮೆಲ್ಲರ ಎದ್ದು ಸೆರಣನೆ ಸೋಭಾಗ್ಯ

೧೨

*ಕಮಲಾಬಾಯಿ ಬೇಂದ್ರೆ ನಿಡೇಬಾನ*

ದಸ್ರತರಾಜನ ಮದದಿ ಸಣ್ಣಾಕಿ ಕೈಕಯಿ
ಏಕಾಂತರ ಕೂಡಿದಾರೆ ಮಾತಾಡಿದಾರೆ
ರಂಗ ಯಾತಕೆ ಬರಲೆ

೧ ರಂಗಾಯಾತಕೆ ಬರಲೆ ತಿಂಗಳಾಗಿತೆ ಪೂರ
ಬೆಳದಿಂಗಳ ಬಿಸಲಾಗಿತ ಹಿಂಗನುಮಾನ ರಂಗಯಾತಕೆಬರಲೆ

೨ ಭತ್ತ ಬೇಡತಿ ಬೇಡ ತೊತ್ತ ಬೇಡತಿ ಬೇಡ
ಏನ ಬೇಡತಿ ಬೇಡ ನೀನ ಕುಡುಹುವೆ ನಾನ ‖ ರಂಗಾಯಾತಕೆ...

೩ ಭತ್ತಭೀ ನಾನೆ ವಲ್ಲರಿ ತೊತ್ತಭೀನಾನೆವಲ್ಲರಿ
ಬೇಡಿಂದ ಕುಡುತೆವಂತ ಕುಡುವರಿ ವಚನ ‖ ರಂಗಾ

೪ ಭಂಗಾರ ಬೇಡತಿ ಬೇಡ ‖ ಬೆಳ್ಳಿ ಬೇಡತಿ ಬೇಡ
ಏನ ಬೇಡತಿ ಬೇಡಿನೀನ ಕುಡುಹುವೆ ನಾನ ‖ ರಂಗಾ

೫ ಭಂಗಾರಭೀನಾನ ವಲ್ಲರಿ ಬೆಳ್ಳಿ ಬೀನನ ವಲ್ಲರಿ
ಹೇಳಿಂದು ಬೇಡಿಂದ ‖ ಕುಡುತೆವಂತ ಕುಡುವರಿ ವಚನ‖ ರಂಗಾ

೬ ಶ್ರೀರಾಮಚಂದ್ರ ಮಗನಿಗಿ
ಖಳವಾರಿ ವನಕ ರಂಗ ಯಾತಕ ಬಾರಲೆ

೧೩

*ನರಸಪ್ಪಾ ಕುರ್ನೆ ನಿಡೇಬಾನ*

ಶಂಬರ ಬಿಗ್ಯಾ ಹೊಲ ಲಂಬರ ಇರಲಾಕ
ಭೋಗಸಿ ಬಡತಾನ ಅಲ್ಲಿ ಇಲ್ಲಿ ಕುಂತ ಸುಮನ

೧ ಆಳ ಮನುಜ ಹೊಲ ಬೀಳಕೆಡುವಿದಾನ
ನಟ್ಟು ಕರಿಘುಂಬ ‖ ಸೋಳ ಎತ್ತಗಳು
ಸುಮ್ಮನ ಕಟಕಂಡು ಕುಂತ ಕೊಟಗಿ ಘುಂಬ।
ಏಳ ಎತ್ತಗಳು ಎಬ್ಬಸಿ ತೊಕೊಂಡು ನಡಿ
ಆರಿನ ಸಾಮೀನ। ಸೊತ ಮ್ಹೈನತ ಮಾಡಿನ್ನ

೨ ಏಳು ಹಿಂದ ಕಟ್ಟು ಒಂಬತ್ತು ಮುಂದಕಟ್ಟು
ಜ್ಞಾನದ ನೇಗಿಲಿಗ ‖ ಹೊತ್ತು ಮುಣಗಿ
ಹೊತ್ತು ಹೊಂಡಸ್ತನ ಆ ನಿಂದ್ಯ ಮಾಡುವ
ಆ ಕರಕಿಯ ಬೇರಿಗ। ಕಿತ್ತು ವಗದು ಬಿಡು ಜಾಳಗಿ।

೩ ಆರೆಂಟು ಪದರಿನ ಸೋಲ ಕಡದರ
ಕಡದು ಹೋಗಲಿ ಕಡಿಗಿS।

ಎಂಟು ಎತ್ತುಗಳು ಕುಂಟನಾದರ
ಅವು ಬೀಳಲಿ ಒಂದೇ ಥಡಿಗಿ। ಹಸ್ತಚಿತ್ತದಿ
ನಡು ಮಧ್ಯ ಭಾಗದಲಿ ಹಚ್ಚೋಗೊ ಕೂರಗಿ।
ಬಿತ್ತು ಅಮೃತ ಯಾಳಿಗಿ।

೪ ಸೆರಣ ಬಸವ ಈ ಹೊಲ ಮಾಡಿಕೊಂಡು
ಬೇಕಾದ ಬೆಳಿಕೊಂಡ। ಆಮದುನಿಯದೊಳಗ
ಅಮರದ ಕೀರುತಿ ಹೊಲದೊಳ ಪಡಕೊಂಡು।
ಬುದ್ಧಿ ಮಾತ ಹೇಳಿ ಸಿದ್ಧ ಭಜನಿ ಹೊಲ
ಅದರೊಳು ದುಡಿಕೊಂಡ। ನಿತ್ಯನಾಮ ಅಮೃತ ಉಂಡ॥

೧೪

*ಕುಡ್‌ಗಂಡಾ ಗೋರಚಿಂಚೋಳಿ*

ಹಾವ ಕಂಡಂಜಿನ ನಾಮ॥ ಭೂದಾಟೋದಾರ್ಯಗ
ಹುತ್ತ ಕಟ್ಟ್ಯಾದ ನೀನೆ ಹಾವು ಕಂಡಂಜಿನಿನಾನು

೧ ಬಿಳಪ ಬಂಗಾರ ವರ್ಣದ ಹಾವು
ದೇವ ಬಿಳಪ ಬಂಗಾರ ವರ್ಣದ ಹಾವು
ಅದರ ಬಾಯೊಳಗ ನೆಲಸಿದೆ ನಾನು ॥ಹಾವು॥

೨ ಸ್ವದ್ಯಾಣ ಇಲ್ಲದ ಬದುಕ ಸಂತರ ಅಂಜಲ
ಅದಕ(೨) ಮೂರು ಲೋಕದ ಸುದ್ದಿ ॥ ಕಣ್ಣಿಗಿಲ್ಲ ಸುದ್ದಿ(ನಿದ್ದಿ) ॥ಹಾವು॥

೩ ನಾಸಿಕ ಚಕ್ರ ಫಣಿಯಲ್ಲಿ ದೇವ ನಾಸಿಕ
ಭಕ್ತಿ ಫಣಿಯಲ್ಲಿ ತಾಸು ತಾಸಿಗೆ ಸುಳಿಹುವದಲ್ಲಿ ॥ಹಾವು॥

೪ ಧರಿಯೊಳು ನೆಲಕೂಡ ದೊಸಿಸಿ ನುಡಿದವರು
ಹೌಹಾರಿ (ಅಮುಹಾರಿ) ಹಾವ್ ಹಿಡಿದು
ಹಿಡಿಹಿಡಿದು ಬಿಟ್ಟಿದಾರೊ ॥ಹಾವು॥

೫ ರಂಜೋಲಿ ಗವಿದೋಳ ಬಾಲ ಈಶನ
ಕೊರಳಲ್ಲಿ ಕಳೆಯುವ ಕಾಲ ॥ಹಾವು॥

೧೫.

*ಕುಡ್ ಗುಂಡಾ ಗೋರಚಿಂಚೋಳಿ*

॥ಪ॥ ಬಂದು ಬಿದ್ದೆನು ಮಾಯದ ಬಲಿಯೊಳಗ
ನಾ ಬರಬಾರದಿತ್ತೊ ಈ ಊರಿಗಾ

೧ ಕತ್ತಲ ಕಾಂತಾರ ಘಟದೊಳಗ
ಹುಲಿಕರಡಿಯ ಮಲಿ ಮಂಜನದೊಳಗ

೨ (ಐದ) ಮಂದಿ ಕಳರ ಭಯ ಎನಗ
ಎಂಟು ಮಂದಿ ಪೈರಿಕರು ಹರ ಎನಗ

೩ ಅಪ್ಪರೊಳಗೆ ಹೊಂಟು ಹೋಗೊದರೊಳಗ
ಇದಿಯೊಂದು ಗಂಟು ಬಿತ್ತು ಹಾದ್ಯಾಗ

೧೬

*ಹುಡ್ ಗುಂಡಾ ಗೋರಚಂಚೋಳಿ*

||ಪ|| ಕಾಯ್ದಿದ ಬೀಳ ಮೈದು ಕಳದ್ಹೋಯಿತು
ಬಿಳಿ ಎತ್ತು ಹ್ವಾಳಕೇನು ಕರಿಯ ಕಡಿಯಲಿ
ತೊರಿಯಲ್ಲಿ ತೊಳಿಲಾಕ ಒಯ್ದಲ್ಲಿ
ಮುಣಗಿತ್ತು ಸಂಗಮನಾಥನ ಸೆಳೆಯಲ್ಲಿ

ಸಾಲಮಾಡಿ ಸೋಲ್ಲಪುರಕ್ಕೆ ಹೋಗಿದ
ಶಾಲ ಬಣ್ಣದೊಂದು ಝೂಲ ತಂದಿದ
ಹ್ವಾಳದ ಪೋಳಿ ನಾ ಹ್ಯಾಂಗ ಉಣಲಿ
ಆಳ ತೊಕೆಂಡು ನಾ ಎಲ್ಲಿ ಹುಡಕಲಿ
ಹ್ವಾಳ ಮುಗಿತು ಚಿಂತಿಲಿ ಕುಂತೆವ್ರಿ ಚಿಂತಿಲಿ

೧೭

*ಶಿವಮ್ಮ ಬೇಂದ್ರೆ*

ಕುಂಬಾರ ಗುಂಡಯ್ಯನ ಹೆಣತಿ
ಕೈಯ ಕಡಗಾದಾಕೆ ಕೊಡದಾಮ್ಯಾಲೇನ ಬಂದಾಲಾ ಸೋ
ಕೊಡದಾನೆ ಮ್ಯಾಲೇನ ಬರದಾಳ ಗುಂಡಮ್ಮ
ಬಾಳಿಯ ಘೊಲ್ಯ ಬರದಾಳ ಸೋ |

೧. ಬಾಳಿಯ ಇನಘೋಲ್ಯ ಬರಿವುತ್ತಾ ಇನ ಹೇಳ್ಯಾಳ
ಬಾಲೇಹೋರುವ ಅಯರಾಣಿ ಸೋ |

೨. ಲಿಂಬಿ ... ರೆಂಬೆರು ಹೋರುವ ಅಯರಾಣಿ
೩. ಉತ್ತುತಿ.... ಮಿತ್ರು ಹೋರುವ ಅಯರಾಣಿ
೪. ತರಣಿ ..... ಧರಣೇರು ಹೋರುವ ಅಯರಾಣಿ
೫. ಮಾವಿನ .....ಮಾನ್ಯರು ಹೋರುವ ಅಯರಾಣಿ

ಬಾಳಿಯ ಘೊಲ್ಯ ಬಂದ ಹಾಗೆ
ನಿಂಬಿಯ ಘೊಲ್ಯ ಬಂದ ಹಾಗೆ
ಉತ್ತುತಿ ಘೊಲ್ಯ ಬಂದ ಹಾಗೆ
ತರಣಿ ಘೊಲ್ಯ ಬಂದ ಹಾಗೆ
ಮಾವಿನ ಘೊಲ್ಯ ಬಂದ ಹಾಗೆ

೧೮

*ಕಮಲಾಬಾಯಿಬೇಂದ್ರೆ*

೧ ಒಂದ್ಯಾಲಿಕ ವಂದಡಕಿ ಒಂದೇ ಘಂದದ ಬಟ್ಟ
ತಂದೇವ್ ಗಂಗಮ್ಮ ನಿನ್ನ ತೇಜ ಸೋ

೨ ತಂದೇವ ಗಂಗಮ್ಮ ನಿನ ತೇಜ ನಿನ್ನ ಬಲ್ಲಿ
ಥುಂಬಿಕುದು ನಮ್ಮ ಅಯರಾಣಿ ಸೋ

ಒಂದ್ಯಾಲಿ ಬರೆದಕಡೆ ಉಡ್ಯಾಲ, ಮೂರ್ಯಾಲಿ

೩ ಎಡ್ಯಾಲಿ ಎಡ್ಡಡಕೆ

